# ಸೀತಾಯನ

ರಾಮಾಯಣದ ಮೇಲೆ 'ಸೀತಾಯಣ'ದಲ್ಲಿ ಬಂದ
ಟೀಕೆಗಳಿಗೆ ಉತ್ತರ

ಕೆ. ಹಯವದನ ಪುರಾಣಿಕ, ಎಂ.ಎ. ವಿದ್ವಾನ್

ಬೆಂಗಳೂರು
1987

ŚĪTAYANA :—by K. Hayavadana Puranik, M.A., Vidwan : Published by Ananda Tirtha Pratishthana, Poorna prajna Vidyapeeta, Bangalore-560 028
Crown octave Pp : viii+152 Price Rs. 10—00

ಪ್ರಥಮ ಮುದ್ರಣ : 1987 ಪುಟಗಳು : viii + 152



ಪ್ರಕಾಶಕರು
ಆನಂದ ತೀರ್ಥ ಪ್ರತಿಷ್ಠಾನ
ಬೆಂಗಳೂರು–560 028

ಲಕ್ಷ್ಮೀ ಮುದ್ರಣಾಲಯ
ಬೆಂಗಳೂರು–೫೬೦ ೦೧೮

ಬೆಲೆ : ರೂ. 10-00

# ಆಶೀರ್ವಚನ

ಸೀತಾರಾಮರ ಜೀವನವು ವಿಶ್ವದ ನರನಾರಿಯರಿಗೆಲ್ಲ ಆದರ್ಶವಾಗಿದೆ. ಮಾನವ ಸಮಾಜಕ್ಕೆಲ್ಲ ಆದರ್ಶಪ್ರಾಯವಾದ ಉದಾತ್ತ ಉಜ್ವಲ ವ್ಯಕ್ತಿತ್ವವನ್ನು ಚಿತ್ರಿಸುವುದಕ್ಕಾಗಿಯೇ ವಾಲ್ಮೀಕಿ ಋಷಿಗಳು ರಾಮಾಯಣ ಕಾವ್ಯವನ್ನು ರಚಿಸಿದ್ದಾರೆ. ಈ ಕಾವ್ಯಕ್ಕೆ "ರಾಮಾಯಣ" "ಸೀತಾಚರಿತ" "ರಾವಣವಧ" ಎಂಬುದಾಗಿ ಮೂರು ಹೆಸರುಗಳನ್ನು ರಾಮಾಯಣದಲ್ಲಿ ನಾವು ಕಾಣಬಹುದು. ಇದು ಪುರುಷೋತ್ತಮನಾದ ರಾಮನ ಚರಿತ್ರೆಯಾಗಿರುವಂತೆ ಆದರ್ಶ ಮಹಿಳಾಮಣಿಯಾದ ಸೀತೆಯ ಚರಿತ್ರೆಯೂ ಆಗಿದೆ. ರಾವಣನ ವಧೆಯನ್ನು ನಿರೂಪಿಸಿ ಜನರ ಅಂತರಂಗದಲ್ಲಿ ಮೂಡಬಹುದಾದ ದುಷ್ಟತನವನ್ನು ಉಚ್ಚಾಟಿಸುವುದೇ ಈ ಕಾವ್ಯದ ಧ್ಯೇಯವಾಗಿದೆ. ನರನಾರಿಯರಲ್ಲಿ ಸ್ವಾರ್ಥ, ಕ್ರೌರ್ಯ, ಆಕ್ರಮಣ ಪ್ರವೃತ್ತಿ ಮುಂತಾದ ದುರ್ಗುಣಗಳನ್ನು ನಿರ್ಮೂಲಿಸಿ ಶ್ರೀರಾಮ ಸೀತೆಯರ ಆದರ್ಶ ವ್ಯಕ್ತಿತ್ವವನ್ನು ರೂಪಿಸುವುದೇ ರಾಮಾಯಣದ ಉದ್ದೇಶವಾಗಿದೆ.

ಇಂಥಹ ಗುಣಶೀಲ ಸಂಪನ್ನವಾದ ಸೀತಾರಾಮರ ವ್ಯಕ್ತಿತ್ವವನ್ನು ಪ್ರಶ್ನಿಸಿ ಕೆದಕಿ ಆಕ್ಷೇಪಿಸುವ ಪ್ರವೃತ್ತಿಗಳನ್ನು ನಾವು ಈಗಲೂ ನೋಡುತ್ತಿದ್ದೇವೆ. ಸೀತೆಯ ಅಗ್ನಿಪರೀಕ್ಷೆಯು ರಾಮಾಯಣದ ಯುದ್ಧಕಾಂಡದಲ್ಲಿ ಮುಕ್ತಾಯವಾಗಲಿಲ್ಲ. ಇಂದಿನವರೆಗೂ ಈ ಅಗ್ನಿಪರೀಕ್ಷೆಯು ನಡೆಯುತ್ತಲೇ ಇದೆ. ವಿಮರ್ಶೆಯ ಮೂಸೆಯಲ್ಲಿ ಇಟ್ಟಷ್ಟೂ ರಾಮಸೀತೆಯರ ವ್ಯಕ್ತಿತ್ವವು ಇನ್ನೂ ಹೆಚ್ಚು ಪರಿಶುಭ್ರವೂ, ಪ್ರಕಾಶವೂ ಆಗಿ ಕಂಗೊಳಿಸುತ್ತದೆ. ರಾಮಸೀತೆಯರ ಪರಿಶುದ್ಧ ವ್ಯಕ್ತಿತ್ವಕ್ಕೆ ರಾಡಿ

ಎರಚುವ ಪ್ರಯತ್ನದಿಂದ ಅವರ ಜೀವನವನ್ನು ಅಧ್ಯಯನ ಮಾಡಿ ಅವರ ಮಹಾವ್ಯಕ್ತಿತ್ವವನ್ನು ತಿಳಿದು ಜನರಿಗೆ ಪ್ರಸಾರಗೊಳಿಸಲು ಉತ್ತಮ ಅವಕಾಶ ದೊರಕಿದೆಯೆಂದು ನಾವು ಭಾವಿಸುತ್ತೇವೆ.

ಪೂರ್ಣಪ್ರಜ್ಞ ವಿದ್ಯಾಪೀಠದ ಪ್ರಾಂಶುಪಾಲರೂ ನಮ್ಮ ಪ್ರೀತಿಯ ಶಿಷ್ಯರೂ ಆದ ಶ್ರೀ ಕೆ. ಹಯವದನ ಪುರಾಣಿಕರು ರಾಮಸೀತೆಯರ ಬಗ್ಗೆ ಬಂದಿರುವ ಆಕ್ಷೇಪಣೆಯನ್ನೆಲ್ಲ ಪರೀಕ್ಷಿಸಿ ರಚಿಸಿದ ಈ ಕೃತಿಯಲ್ಲಿ ವಿಮರ್ಶೆ. ವೈದುಷ್ಯಗಳು ತುಂಬಿವೆ. ಕುಶಾಗ್ರಮತಿಗಳೂ, ಉತ್ತಮ ಸಂಶೋಧಕರೂ ಆದ ಹಯವದನ ಪುರಾಣಿಕರ ಈ ಕೃತಿಯು ರಾಮಾಯಣದ ಬಗ್ಗೆ ಹೆಚ್ಚು ಬೆಳಕನ್ನು ಚೆಲ್ಲುವಲ್ಲಿ ಯಶಸ್ವಿಯಾಗುವವೆಂದು ತಿಳಿಯುತ್ತೇವೆ. ಲೇಖಕರಿಂದ ಇದೇ ರೀತಿಯ ಹೆಚ್ಚಿನ ಕೃತಿಗಳು ಪ್ರಕಟವಾಗಿ ಜ್ಞಾನಸೇವೆಯು ನಡೆಯಲಿ ಎಂದು ಆಶಿಸುತ್ತೇವೆ.

ಇತಿ ಶ್ರೀಮನ್ನಾರಾಯಣ ಸ್ಮರಣೆಗಳು,

**ಶ್ರೀ ಪೇಜಾವರ ವಿಶ್ವೇಶ ತೀರ್ಥ ಶ್ರೀಪಾದರು**

# ಎರಡು ಮಾತು

ಒಂದು ಸಾಹಿತ್ಯ ಕೃತಿಯನ್ನು ತಿಳಿದು ಅದರ ಅಂತಃ ಸತ್ವವನ್ನು ಎತ್ತಿ ತೋರಿಸಬೇಕಾದರೆ ವಿಮರ್ಶಕನು ಸಹೃದಯನಾಗಿರಬೇಕು. ಸಹೃದಯನೆಂದರೆ ಅಭಿನವಗುಪ್ತರು ಹೇಳುವಂತೆ —

ಯೇಷಾಂ ಕಾವ್ಯಾನುಶೀಲನಾಭ್ಯಾಸವಶಾದ್ ವಿಶದೀಭೂತೇ
ಮನೋಮುಕುರೇ ವರ್ಣನೀಯ ತನ್ಮಯೀಭವನ ಯೋಗ್ಯತಾ
ತೇ ಹೃದಯ ಸಂವಾದ ಭಾಜಃ ಸಹೃದಯಾಃ ।

ಅಂದರೆ, ಆ ಸಾಹಿತ್ಯ ಕೃತಿಯ ಗುಂಪಿಗೆ ಸೇರಿದ ಬೇರೆ ಕೃತಿಗಳನ್ನು ಪರಿಶೀಲಿಸಿ ಅಭ್ಯಾಸ ಉಳ್ಳವರಾಗಿರಬೇಕು, ಮನಸ್ಸು ನಿರ್ಮಲವಾದ ಕನ್ನಡಿಯಂತಿದ್ದು, ಅದರಲ್ಲಿ ಕಾವ್ಯವು ವರ್ಣಿಸುವ ಪ್ರಪಂಚದ ನೈಜ ಪ್ರತಿಬಿಂಬ ಮೂಡಿ ಬರುವಂತಿರಬೇಕು, ಮತ್ತು ಹೃದಯ ಸುಲಭವಾಗಿ ಕರಗುವಂತಿದ್ದು ಆ ಪ್ರಪಂಚದಲ್ಲಿ ಒಂದಾಗಿ ಬೆರೆಯುವಂತಿರಬೇಕು. ಈ ಮೂರು ಗುಣಗಳಲ್ಲಿ ಯಾವುದಾದರೊಂದು ಕಡಿಮೆಯಾದರೂ ವಿಮರ್ಶೆ ವಿಮರ್ಶೆಯಾಗುವುದಿಲ್ಲ. ಉತ್ತರಾದಿಸಂಗೀತಪ್ರಿಯರಿಗೆ ದಕ್ಷಿಣಾದಿ, ದಕ್ಷಿಣಾದಿಸಂಗೀತಪ್ರಿಯರಿಗೆ ಉತ್ತರಾದಿ ಬೇಸರ ತರಿಸುವಂತೆ ಸನಾತನ ಧರ್ಮವನ್ನು ಎತ್ತಿ ಹಿಡಿಯುವ ಕಾವ್ಯಗಳನ್ನೋದಿ ಅಭ್ಯಾಸ ವಿಲ್ಲದವರಿಗೆ ಅವು ಸಮಾಜಕ್ಕೆ ಅನುಪಯುಕ್ತವೆಂದು ಕಳಪೆ ಎಂದು ಅನಿಸಬಹುದು. ಅವರ ಮನಸ್ಸಿನ ಕನ್ನಡಿಯಲ್ಲಿ ಪ್ರಾಚೀನ ಕಾವ್ಯಗಳು ವರ್ಣಿಸುವ ಪ್ರಪಂಚ ವಿಕಾರವಾಗಿ ಪ್ರತಿಬಿಂಬಿತವಾಗಬಹುದು, ಅವರ ಹೃದಯದಲ್ಲಿ ಪ್ರಾಚೀನ ಕಾವ್ಯದ ಅನುಭವ ವಿಗಲಿತ ವೇದ್ಯಾಂತರವಾಗಿ ರಸವಾಗಿ ಪರಿಣಮಿಸದಿರಬಹುದು.

ಸಹೃದಯತೆಯಿಂದ ಕಾವ್ಯ ಓದಿ ಅಕ್ಷರಶಃ ಪರಿಶೀಲಿಸಿ ಪೂರ್ವಾಪರ ಸಂದರ್ಭಗಳಿಗೆ ಹೊಂದಿಕೆಯಾಗುವಂಥ ಅರ್ಥವನ್ನು ಗ್ರಹಿಸಿ ಅನುಭವಿಸ ಬಲ್ಲವರಿಗೆ ವಾಲ್ಮೀಕಿಯ ಕೃತಿ ಎಂದೂ ಬತ್ತದ ಆನಂದದ ಸೆಲೆ. ಕಾಲದಲ್ಲಿ ಮಾತ್ರವಲ್ಲ ಗುಣದಲ್ಲಿಯೂ ಆದಿಕಾವ್ಯ ವೆನಿಸಿದುದು, ಸರ್ವಕಾಲದಲ್ಲಿಯೂ ಸರ್ವರಿಗೂ ಹೃದ್ಯವಾದುದು.

'ಧರ್ಮ ಗ್ರಂಥವೆಂದೆನಿಸಿಕೊಂಡಿರುವ ರಾಮಾಯಣವನ್ನು ಈ ಬಂಧನದಿಂದ ಬಿಡಿಸಿ ಒಂದು ಕಾವ್ಯವೆಂದು ಪರಿಗಣಿಸುವುದು ನಿಜವಾಗಿ ಅದಕ್ಕೆ ಒಂದು ಸೇವೆ.' ಈ ದೃಷ್ಟಿಯಿಂದ, ರಾಮಾಯಣವನ್ನು ಇದುವರೆಗೆ ಒಪ್ಪಿಕೊಂಡು ಮೌಲ್ಯಕ್ಕಿಂತ ಭಿನ್ನವಾಗಿ ಅಭ್ಯಸಿಸಿದರೂ, ಅದರ ಪಾತ್ರಗಳನ್ನು ಮಾನವೀಯ ದೃಷ್ಟಿಯಿಂದ ಅಳೆದು ತೂಗಿ ನೋಡಿದರೂ ಅದು ಕಾವ್ಯ ಪ್ರಪಂಚದಲ್ಲಿ ಗಳಿಸಿರುವ ಅಗ್ರಸ್ಥಾನ ಅದಕ್ಕೆ ಇದ್ದೇ ಇದೆ. 'ಗಂಡಹೆಂಡಿರಲ್ಲಿ ಇರಬೇಕಾದ ಆತ್ಮೀಯತೆ ಪ್ರೀತಿ ಒಬ್ಬರಿಗೊಬ್ಬರು ಪ್ರಾಣವನ್ನೂ ಕೊಡಬಲ್ಲ ಅನ್ಯೋನ್ಯತೆ ಇವು ಗಂಡುಸಾದ ರಾಮನಲ್ಲಿ ಹೆಂಡತಿಯಾದ ಹೆಣ್ಣಾದ ಸೀತೆಯ ಬಗೆಗೆ ಇದೆ ಎಂಬುದು ನಮ್ಮೆಲ್ಲರ ಸಾವಿರಾರು ವರ್ಷಗಳ ನಂಬಿಕೆ.' ಈ ನಂಬಿಕೆಗೂ ಎಂದೂ ಚ್ಯುತಿ ಇಲ್ಲ. ಮಾನವ ಮಿತಿಗಳನ್ನು ಮೀರಿದ ಪಾವಿತ್ರ್ಯದ ಜೊತೆಗೆ ಮಾನವೀಯ ಸ್ಪಂದನ ಎರಡರ ಸಮತೋಲನವನ್ನು ಕಾಪಾಡಿ ಕೊಂಡು ಬಂದ, ಪಾವಿತ್ರ್ಯಕ್ಕೇ ಸಂಕೇತವಾದ ಹೆಣ್ಣು, ಸೀತೆ ಇಂದಿಗೂ ಭಾರತೀಯ ಮಹಿಳೆಯರ ಜೀವನದ ಲೈಂಗಿಕ ಮೌಲ್ಯಗಳನ್ನು ನಿರ್ಧರಿ ಸುವಂಥವಳು ಎಂಬುದೂ ನಮ್ಮ ನಂಬಿಕೆ. ಇದಕ್ಕೂ ಎಂದೂ ಚ್ಯುತಿ ಬಾರದು.

ನಮ್ಮವರು ಸೀತೆಯ ಬಗ್ಗೆ ಇಲ್ಲದುದನ್ನು ಬರೆದು ದೈವತ್ವಕ್ಕೇರಿ ಸಲಿಲ್ಲ. ಆದರ್ಶಮಾನವಳಾಗಿ ನಮ್ಮ ನಡುವೆ ಹೇಗೆ ಬಾಳಿದಳೆಂದು ತೋರಿಸಿ ಪಾವಿತ್ರ್ಯದ ಗುಡಿಯಲ್ಲಿ ಪೂಜ್ಯಸ್ಥಾನಕ್ಕೇರಿಸಿದ್ದಾರೆ. ಅವ ಳೊಬ್ಬಳು ಸ್ತ್ರೀಯೆ ಅಲ್ಲ, ಯುವತಿಯಲ್ಲ, ಅವಳಿಗೂ ಒಂದು ಮನ ಸ್ಸೆಂಬುದಿಲ್ಲ ಬಯಕೆಗಳಿಲ್ಲ ಎಂದೇನೂ ಹೇಳಿಲ್ಲ. ಆದರೆ ಅವಳ ಲೈಂಗಿಕ

ಭಾವನೆಗಳನ್ನು ವಿಕೃತವಾಗಿ ಚಿತ್ರಿಸಿ ತೋರುವುದು ತರವಲ್ಲ. ಅದು ಭಾರತೀಯ ಮಹಿಳೆಗೇ ಮಾಡುವ ಅಕ್ಷಮ್ಯ ಅಪಚಾರ.

'ಪ್ರತಿಭಾದೃಷ್ಟಿಯ ವಿಚಾರವಂತರೆನಿಸಿದವರ ಪ್ರಜ್ಞಾ ದೃಷ್ಟಿಗೆ ರಾಮಾಯಣದೊಳಗಿನ 'ಅಂತರ್ ವಿಸಂಗತಿ' ಆ ಕಾವ್ಯ ದಿಂದಲೆ ನೇರ ಗ್ರಹಿಸಲು ಸಾಧ್ಯವಾಗಿದೆ' ಎನ್ನುವುದು ಸರ್ವಥಾ ಸಂಬಲನರ್ಹ. ಋಷಿ ವಾಣಿಯಲ್ಲಿಯೂ ಅಂತರ್ ವಿಸಂಗತಿ ಇದೆ ಎಂದರೆ ಅದುವೆ ಒಂದು ದೊಡ್ಡ ವಿಸಂಗತಿ.

ರಾಮಾಯಣವನ್ನು ನಾವು ವಸ್ತುನಿಷ್ಠವಾಗಿ ನೋಡಬೇಕು. ಪೂರ್ವಗ್ರಹಿಕೆಯಿಂದಲ್ಲ, ಉಗ್ರ ವಿರೋಧ ಭಾವನೆಯಿಂದಲೂ ಅಲ್ಲ.

'ನಮಗೆ ಹಿಡಿಸದೆ ಇರುವ ವಿಶ್ಲೇಷಣೆಯನ್ನೂ ಯಾವ ಭಾವಾ ವೇಶವೂ ಇಲ್ಲದೆ ತೆರೆದ ಮನಸ್ಸಿನಿಂದ ಓದುವುದು ವಿಮರ್ಶಿಸುವುದು ಸುಸಂಸ್ಕೃತರ ಲಕ್ಷಣ. ಸತ್ಪುರುಷರು ಪ್ರತಿಯೊಂದನ್ನು ಪರೀಕ್ಷಿಸಿಯೆ ಒಪ್ಪಿಕೊಳ್ಳುತ್ತಾರೆ ಎನ್ನುವ ಕಾಳಿದಾಸನ ನಿಲುವು, ಈ ವಿಚಾರವಾದಿ ನಿಲುವು, ಇಂದು ನಮ್ಮದಾಗಬೇಕು.' ಈ ದೃಷ್ಟಿಯಿಂದ ಪೂರ್ವ ಗ್ರಹಿಕೆಯ ಉಗ್ರ ಟೀಕೆಗಳೂ ಸ್ವಾಗತಾರ್ಹವೆ. ಅಭ್ಯಾಸಿಗಳಿಗೆ ಅವು ಒಂದು ವಿಧದಿಂದ ಸಹಾಯಕವೆ. ಈ ನೆಪದಿಂದಲಾದರೂ ಸಹೃದಯರು ಕಾವ್ಯದ ಆಳಕ್ಕಿಳಿದು ಸೌಂದರ್ಯ ಸಾಕ್ಷಾತ್ಕಾರ ಮಾಡಿ ಕೊಳ್ಳುವಂತಾಗುತ್ತದೆ. ವಾಲ್ಮೀಕಿ ಮೇಲುನೋಟಕ್ಕೆ ತನ್ನೆಲ್ಲ ಸೌಂದರ್ಯ ವನ್ನು ಪ್ರದರ್ಶಿಸುವುದಿಲ್ಲ. ಆಳಕ್ಕೆ ಇಳಿಯಬೇಕಾಗುತ್ತದೆ.

'ಈ ಟೀಕೆಗಳನ್ನು ಪ್ರತಿಭಟಿಸುವುದರಿಂದ ಅವುಗಳಿಗೇ ಮಹತ್ವ ಕೊಟ್ಟಂತಾಗುತ್ತದೆ, ಅಲಕ್ಷ್ಯ ಮಾಡಿ ಬಿಡಬೇಕು' ಎನ್ನುವ ಮನೋ ಭಾವನೆ ಒಳ್ಳೆಯದಲ್ಲ. ಇದರಿಂದ ನಾವು ರಾಮಾಯಣಕ್ಕೆ ಅಪಚಾರ ವೆಸಗಿದಂತಾಗುತ್ತದೆ. ಇಂಥ ಮನೋಭಾವನೆ ಹಿಂದೆ ಇರಲಿಲ್ಲ. ಇರುತ್ತಿ ದ್ದರೆ ಅಧ್ಯಾತ್ಮ ಪ್ರಪಂಚದಲ್ಲಿ ವಿಪುಲವಾದ ವೈಚಾರಿಕ ಬೆಳವಣಿಗೆಗೆ ಅವಕಾಶವಿರುತ್ತಿರಲಿಲ್ಲ.

'ಈ ಟೀಕೆಗಳನ್ನು ನಾವು ಒಪ್ಪದಿದ್ದರೂ ಪ್ರಶ್ನಿಸುವುದು ಅಸಾಧ್ಯವೆ'ನ್ನುವುದಂತೂ ವಿದ್ಯಾವಂತರೆನಿಸಿದವರಿಗೇ ನಾಚಿಕೆಗೇಡು. ಆದರಿಂದಾಗಿ ಈ ದಿಸೆಯಲ್ಲಿ ಇದೊಂದು ನನ್ನ ವಿನಮ್ರ ಪ್ರಯತ್ನ.

ಡಾ|| ಪೋಲಂಕಿ ರಾಮಮೂರ್ತಿ ಅವರ 'ಸೀತಾಯಣ' ನನಗೆ ಅದೊಂದು ವಾಲ್ಮೀಕಿ ರಾಮಾಯಣದ ಮೇಲಿನ ಸಹೃದಯರ ವಿಮರ್ಶೆ ಎನಿಸಲಿಲ್ಲ. ಸಂಸ್ಕೃತ ಚೆನ್ನಾಗಿ ತಿಳಿಯದೆ, ರಾಮಾಯಣ ಪೂರ್ತಿ ಓದದೆ ಅಲ್ಲಲ್ಲಿ ಕೆಲವು ಶ್ಲೋಕ ಪದಗಳ ಬಗ್ಗೆ ಕುರುಡರ ಆನೆಯ ಕಾಣ್ಕೆ ಯನ್ನು ಸಂಸ್ಕೃತ ಅರಿಯದ ವಾಚಕರ ಮುಂದಿರಿಸಿರುವುದನ್ನು ಕಂಡು ಬೇಸರಪಟ್ಟಿದ್ದೇನೆ. ನನ್ನ ಅನಿಸಿಕೆಗಳನ್ನು ಹೇಳಿಕೊಂಡಿದ್ದೇನೆ, ವಾದ ಮಾಡಲು ಹೊರಟಿಲ್ಲ. ವಿಚಾರ ವಾದಿಗಳು ಮುಕ್ತ ಮನಸ್ಸಿನಿಂದ ನನ್ನ ಈ ಕೃತಿಯನ್ನು ಸ್ವಾಗತಿಸುವರೆಂದು ನಂಬಿದ್ದೇನೆ.

ಅಗಾಧ ಪಾಂಡಿತ್ಯ ಹಾಗೂ ಸಹೃದಯ ವಿಮರ್ಶಪ್ರಜ್ಞೆಗಳಿಂದ ತುಂಬಿರುವ ಮತ್ತು ನನ್ನ ಪ್ರೀತಿಯ ಪೂಜ್ಯ ವಿದ್ಯಾಗುರುಗಳೂ ಆದ ಶ್ರೀ ಪೇಜಾವರ ಶ್ರೀಪಾದರು ನನ್ನ ಕೃತಿಯನ್ನು ತುಂಬು ಹೃದಯ ದಿಂದ ಹರಸಿದ್ದಾರೆ. ಅವರಿಗೆ ನನ್ನ ಭಕ್ತಿ ಪೂರ್ವಕ ಪ್ರಣಾಮಗಳು.

ಉತ್ಸಾಹದಿಂದ ನನ್ನ ಈ ಕೃತಿಯನ್ನು ಪ್ರಕಟಿಸಿದ ಆನಂದ ತೀರ್ಥ ಪ್ರತಿಷ್ಠಾನದವರಿಗೂ ಸಕಾಲದಲ್ಲಿ ಅಂದವಾಗಿ ಮುದ್ರಣ ಮಾಡಿ ಕೊಟ್ಟ ಲಕ್ಷ್ಮೀ ಮುದ್ರಣಾಲಯದವರಿಗೂ ನನ್ನ ಕೃತಜ್ಞತೆಗಳು.

—ಕೆ. ಹಯವದನ ಪುರಾಣಿಕ

# ಸೀತಾಯನ

ಶ್ರೀವತ್ಸವಕ್ಷಾ ನಿತ್ಯಶ್ರೀರಜಯ್ಯ: ಶಾಶ್ವತೋ ಧ್ರುವ: ।
ಮಾನುಷಂ ರೂಪಮಾಸ್ಥಾಯ ವಿಷ್ಣು: ಸತ್ಯಪರಾಕ್ರಮ: (ಯು. 111-13)
ಸೀತಾ ಲಕ್ಷ್ಮೀರ್ಭವಾನ್ ವಿಷ್ಣು: (ಯು 117–27)

ಎಂದು ಮುಂತಾಗಿ ವಾಲ್ಮೀಕಿ ಹೇಳುವಂತೆ ಸಾಕ್ಷಾತ್ ಶ್ರೀ ಲಕ್ಷ್ಮೀ ನಾರಾಯಣರೆ ಸೀತಾರಾಮರಾಗಿ ಮನುಷ್ಯರೂಪದಿಂದ ಅವತರಿಸಿ ಆದರ್ಶ ಮಾನವರಾಗಿ ದಿವ್ಯ ಚರಿತ್ರೆ ಮಾಡಿ ಹೋಗಿದ್ದಾರೆ,

ಮಹರ್ಷಿ ವಾಲ್ಮೀಕಿ ಅವರ ಚರಿತ್ರೆಯನ್ನು ಹಾಡಿ ಕೊಂಡಾಡಿದ್ದಾನೆ. ಅದು ರಾಮಾಯಣವೂ ಹೌದು, ಸೀತಾಯನವೂ ಹೌದು. 'ಸೀತಾಯಣ' ಅಲ್ಲ.

ವ್ಯಾಕರಣ ಪ್ರಕಾರ 'ಸೀತಾ' 'ಅಯನ' ಪದಗಳು ಜತೆ ಸೇರಿದಾಗ 'ಸೀತಾಯನ' ಎಂದಾಗುವುದೆ ಹೊರತು 'ರಾಮಾಯಣ' ದಂತೆ 'ಸೀತಾಯಣ' ಆಗುವುದಿಲ್ಲ.

'ಸೀತಾಯಣ' ಎಂಬ ಕೃತಿಗೆ ಆ ಹೆಸರು, ತಾನು ವ್ಯಾಕರಣ ಪ್ರಕಾರ ತಪ್ಪಾಗಿದ್ದು, ಸಹೃದಯರ ಪ್ರಾಮಾಣಿಕವಾದ ರಾಮಾಯಣದ ಓದಿನ ಸಾಕ್ಷ್ಯ ದಲ್ಲಿ ಆ ಕೃತಿಯೂ ತಪ್ಪೆನ್ನುವುದನ್ನು ತೋರಿಸುತ್ತದೆ. ಆ ಕೃತಿಗೆ ಆ ಹೆಸರೂ ಒಪ್ಪುತ್ತದೆ.

## 'ಮಾನಿಷಾದ'– ಶಾಪ?

ವಾಲ್ಮೀಕಿ ರಾಮಯಣ ವೃಕ್ಷಕ್ಕೆ ಮೂಲ ಬೀಜದಂತಿರುವ ಪ್ರಸಿದ್ಧ ಶ್ಲೋಕ ಇದು—

ಮಾ ನಿಷಾದ ಪ್ರತಿಷ್ಠಾಂ ತ್ವಮಗಮ: ಶಾಶ್ವತೀ : ಸಮಾ : ।
ಯತ್ ಕ್ರೌಂಚ ಮಿಥುನಾದೇಕಮವಧೀ : ಕಾಮ ಮೋಹಿತಂ ॥
(ಬಾಲ. 2.15)

"ಎಲ್ಲೈ ಬೇಡನೆ, ಕ್ರೌಂಚ ಪಕ್ಷಿಗಳ ಜೋಡಿಯಲ್ಲಿ ಕಾಮಮೋಹಿತವಾದ ಒಂದನ್ನು ಕೊಂದೆ. ನೀನು ಬಹುಕಾಲ ಇರಬೇಡ."

'ಈಗ ಈ ಶ್ಲೋಕದಲ್ಲಿ ಏನಿದೆ? ಶೋಕವಿದೆಯೆ, ಕರುಣವಿದೆಯೆ, ಅಥವಾ ಅದಕ್ಕೆ ಸಂಪೂರ್ಣ ವಿರುದ್ಧವಾದ ಕೋಪವಿದೆಯೆ, ಕ್ರೌರ್ಯವಿದೆಯೆ, ? ಹಿಂಸೆ ಇದೆಯೆ? ಎಂಬುವೆ ನಾವು ನಮ್ಮ ಓದಿನಲ್ಲಿ ಕಂಡುಕೊಳ್ಳಬೇಕಾದ ಸತ್ಯ ಹಾಗೂ ಓದು ಬರಹ ಬಲ್ಲ ಅಕ್ಷರಸ್ಥ ವಿದ್ಯಾವಂತರ ಅಕ್ಷರ ಜ್ಞಾನದ, ಓದಿನ, ಸತ್ವಪರೀಕ್ಷೆ'

ಹೌದು, ಏನೂ ಅರಿಯದ ಬೇಡನಿಗೆ ಇಲ್ಲಿ ಮುನಿ ಶಾಪ ಕೊಡುತ್ತಿದ್ದಾನೆ!

ಆದರೆ ವಸ್ತುತಃ ಕ್ರೌಂಚಪಕ್ಷಿಗಳ ಜೋಡಿಯಲ್ಲಿ 'ಒಂದನ್ನು ಬೇಡನೊಬ್ಬ ಹೊಡೆದು ಕೊಂದ. ಗಂಡುಹಕ್ಕಿ ನೆಲಕ್ಕುರುಳಿದುದನ್ನು ಕಂಡ ಹೆಣ್ಣುಹಕ್ಕಿ ಕರುಣಾಜನಕವಾಗಿ ಆಕ್ರಂದನ ಮಾಡುತ್ತಿದೆ. ಅದನ್ನು ಕಂಡು ದುಃಖಿಸಿದ, ವಾಲ್ಮೀಕಿ. ಈಗ ಒಬ್ಬ ಮುನಿಯಾಗಿದ್ದರೂ ಹಿಂದೆ ಒಬ್ಬ ಬೇಡನೆ ಆಗಿದ್ದನಾತ. ಸಾಧು ಪ್ರಾಣಿ ಪಕ್ಷಿಗಳನ್ನು ಹಿಂಸಿಸುತ್ತಿದ್ದ. ಈಗ ಅದನ್ನು ನೆನೆದರೇ ದುಃಖ ಆತನಿಗೆ. ಬೇಡನಿಗೆ ಶಾಪಕೊಡಲಿಲ್ಲ, ಹೀಗೆ ನುಡಿದ, 'ಅಯ್ಯಾ ಬೇಡನೆ, ಬೇಡ. ಇಂಥ ಕ್ರೂರ ಕರ್ಮ ಮಾಡಬೇಡ. ಇದನ್ನು ನಿಲ್ಲಿಸು, ನೀನು ಹೆಂಡತಿ ಮಕ್ಕಳೊಡನೆ ಬಹುಕಾಲ ಸುಖದಿಂದ ಇದ್ದವನು ತಾನೆ? ಆ ಸುಖವನ್ನು ಅನುಭವದಿಂದ ತಿಳಿದವ ನೀನು. ಯಾವ ಪ್ರಾಣಿಗೂ ಪಕ್ಷಿಗೂ ಆ ಸುಖವನ್ನು ಇಲ್ಲದಂತೆ ಮಾಡಬೇಡ. ವೃದ್ಧನಾಗಿರುವಿ. ಸಾವಿನ ಸಮೀಪಕ್ಕೇ ಬಂದಿರುವಿ. ಇನ್ನಾದರೂ ಕ್ರೂರಕರ್ಮ ಬಿಟ್ಟು ಒಳ್ಳೆಯ

ವನಾಗು. ಏಕೆಂದರೆ ನೀನೀಗ ಮಾಡಿದ ಕರ್ಮ ಬಹಳ ಕ್ರೂರವಾದುದು, ಜತೆಯಾಗಿ ನಲಿಯುತ್ತಿದ್ದ ಹಕ್ಕಿಗಳ ಜೋಡಿಯಲ್ಲಿ ಒಂದನ್ನು ಕೈಯ್ಯಾರೆ ಹೊಡೆದು ಕೊಂದಿರುವಿ.'—ಹೀಗೆ ಇಲ್ಲಿ 'ಮುನಿ'ಯ ಕ್ರೂರ ಶಾಪ ಇಲ್ಲ. ಹೃತ್ಪೂರ್ವಕವಾದ ಉಪದೇಶವಿದೆ.

ಈ ಶ್ಲೋಕವನ್ನು ಕೆಲವರು ಶಾಪ ವಚನವೆಂದು ಭ್ರಮಿಸಿ 'ಮುನಿ' ಮೌನವಾಗಿರಬೇಕೆಂದು ಮುನಿಗೇ ಉಪದೇಶ ಕೊಡುವುದನ್ನು ನೋಡಿದರೆ ಅಳಬೇಕೊ ನಗಬೇಕೊ ತಿಳಿಯದಾಗಿದೆ. ಇದು ಶಾಪವಚನವೆಂದು ವಾಲ್ಮೀಕಿ ತಪ್ಪಿಯೂ ಒಮ್ಮೆಯಾದರೂ ಹೇಳಿಲ್ಲ. 'ಇದಂ ವಚನಮಬ್ರವೀತ್'—ಈ ಮಾತನ್ನು ಹೇಳಿದನು. 'ಏವಂ ಬ್ರುವತಃ'—ಹೀಗೆ ಹೇಳುವಾಗ, 'ಕಿಮಿದಂ ವ್ಯಾಹೃತಂ'—ನಾನೇನು ಹೇಳಿದೆ? ಇಲ್ಲಿ 'ಶಾಪ' ಎಂದು ಎಲ್ಲಿಯೂ ಹೇಳುವುದಿಲ್ಲ. 'ಮಾ' ಎಂಬ ಮೊದಲಿನ ಶಬ್ದ ಶಾಪದ್ದು ಎನ್ನುವುದೂ ಭ್ರಮೆ. ಪಾರ್ವತಿಯ ತಾಯಿ ಮೇನಕೆ, ಮಗಳು ಕಠೋರತಪಸ್ಸು ಮಾಡು ವುದನ್ನು ಕಂಡು ಸಹಿಸಲಾರದೆ 'ಉ' ಮಗಳೆ, 'ಮಾ' ಬೇಡ, ತಪಸ್ಸು ಮಾಡಬೇಡ' ಎಂದು ಪ್ರೀತಿಯಿಂದ ಹೇಳಿದಾಗ ಪಾರ್ವತಿಗೆ 'ಉಮಾ' ಎಂದು ಹೆಸರಾಯಿತಂತೆ. ಇಲ್ಲಿ 'ಮಾ' ಶಬ್ದ ಪ್ರೀತಿಯ ಶಬ್ದ. ಶಾಪದ್ದಲ್ಲ, ಕೋಪದ್ದಲ್ಲ, ಕ್ರೌರ್ಯದ್ದಲ್ಲ, ಹಿಂಸೆಯದ್ದಲ್ಲ!

'ಪ್ರತಿಷ್ಠಾಂ ಮಾ ಅಗಮಃ' 'ಬದುಕಿರಬೇಡ' ಎಂದರೆ ಶಾಪವಲ್ಲವೆ? ಅಲ್ಲ. 'ಮಾ' ಶಬ್ದದೊಂದಿಗೆ 'ಅಗಮಃ' ಶಬ್ದ ಸೇರಿಸುವ ವಿವಕ್ಷೆ ಇದ್ದಾಗ 'ಅಗಮಃ' ಎಂಬುದು 'ಗಮಃ' ಎಂದಾಗಬೇಕೆಂದು ಪಾಣಿನಿವ್ಯಾಕರಣ ನಿಯಮವಿದೆ. ಆ ನಿಯಮವನ್ನು ಉಲ್ಲಂಘಿಸಿ ವ್ಯಾಖ್ಯಾನ ಮಾಡಬೇಕಾದ ಆವಶ್ಯಕತೆ ಏನಿಲ್ಲ. ಮಾ—ಬೇಡ, ಇಂಥ ಕ್ರೂರ ಕರ್ಮ ಮಾಡಬೇಡ. ಪ್ರತಿಷ್ಠಾಂ ಅಗಮಃ—ಬಹುಕಾಲ ಬದುಕಿರುವಿ, ವೃದ್ಧನಾಗಿರುವಿ ಎಂದು ವ್ಯಾಖ್ಯಾನ ಮಾಡಿದರೆ ವಾಲ್ಮೀಕಿಯ ಈ ಮಾತಿನಲ್ಲಿ ಶಾಪವಿಲ್ಲ, ಸಂತಾಪ ವಿದೆ. 'ಮಾಽಽಽ' ಎಂಬ ಒಂದು ಶಬ್ದದಲ್ಲಿ ನೆಲದಲ್ಲಿ ಹೊರಳಾಡುತ್ತಿರುವ ಗಂಡುಹಕ್ಕಿಯ ಬಗ್ಗೆ ಶೋಕವಿದೆ. ಆಕ್ರಂದಿಸುವ ಹೆಣ್ಣು ಹಕ್ಕಿಯ ಬಗ್ಗೆ ಕರುಣೆಯಿದೆ, ಬೇಡನ ಬಗ್ಗೆ ಕನಿಕರದ ಮಮತೆಯ ಕಾಳಜಿ ಇದೆ—ಗಂಡು

ಹಕ್ಕಿಯನ್ನು ಹೀಗೆ ಸಾಯಿಸಬೇಡ, ಹೆಣ್ಣು ಹಕ್ಕಿಯನ್ನು ಕೊಗಿಸಬೇಡ, ಇಂಥ, ಕ್ರೂರಕರ್ಮದಿಂದ ಇನ್ನು ಮುಂದಾದರೂ ಪಾಪ ಸಂಚಯ ಮಾಡಿಕೊಳ್ಳಬೇಡ ಎಂದು. ಇಂಥ ಸಂದರ್ಭದಲ್ಲಿ 'ಮುನಿ'ಯಾದ ವಾಲ್ಮೀಕಿ ಮೌನವಿರುವುದು ತರವಲ್ಲ. ಅರಿಯದ ಬೇಡನಿಗೆ ಉಪದೇಶ ಮಾಡಬೇಕು.

'ಮೌನ'ದಿಂದ 'ಮುನಿ' ಆಗುವುದಿಲ್ಲ. ಮನನದಿಂದ ಚಿಂತನದಿಂದ 'ಮುನಿ' ಆಗುತ್ತಾನೆ. 'ಮುನಿ'ಯಿಂದ 'ಮೌನ' ಆಗುತ್ತದೆ. 'ಭಾವಿತಾತ್ಮಾ' ಎಂದೂ ವಾಲ್ಮೀಕಿ ತನ್ನನ್ನು ಹೇಳಿಕೊಂಡಿದ್ದಾನೆ. ಅಂದರೆ, ಅವನ ಮನಸ್ಸು ಸದಾ ಚಿಂತನ ಮಂಥನ ಮಾಡುತ್ತಿರುತ್ತದೆ. ಮಾತು 'ಮೌನ' ಮೂಕ ವಾಗಿರುತ್ತದೆ. 'ಮೌನ'ವೆಂದರೆ ಮಾತಿಲ್ಲದಾಗುವುದು, ಮನನ ಚಿಂತನಗಳಿಂದಲೆ.

## ವಾಲ್ಮೀಕಿ– ರಸದ್ರಷ್ಟಾರ

'ಭಾವಿತಾತ್ಮ' ಎಂದರೆ ಅಂತಃಕರಣದಲ್ಲಿ ಭಾವನಾವ್ಯಾಪಾರ, ರಸಾ ನುಭವಕ್ಕೆ ಮೊದಲಿನ ಹಂತದ ಕವಿಹೃದಯದ ಸ್ಪಂದನವೂ ಹೌದು. 'ಮುನಿ' ವಾಲ್ಮೀಕಿ ಕವಿಯಾದುದು ರಸದ್ರಷ್ಟಾರನಾದುದು ಹೀಗೆ. ಕವಿಗೆ ಕಣ್ಣ ಮುಂದೆ ಆಗಿ ಹೋದ ಒಂದು ಘಟನೆ ಹೃದಯವನ್ನು ಹೊಕ್ಕು ಕಲಕಿ ಭಾವನಾ ವ್ಯಾಪಾರಪ್ರಭಾವದಿಂದ ರಸಮಯವಾಗಿ ಮಾರ್ಪಟ್ಟು ಅಯತ್ನವಾಗಿ ಕಾವ್ಯ ರೂಪದಿಂದ ಹೊರ ಹೊಮ್ಮುತ್ತದೆ. ಆ ಗಾಢವಾದ ರಸಾನುಭವ ಸ್ಥಿತಿಯಿಂದ ಎಚ್ಚತ್ತ ಕವಿ ತನ್ನ ಮಾತನ್ನೆ ಈಗ ಸಹೃದಯನಾಗಿ ಹೊಕ್ಕು ವಿಮರ್ಶಿಸಿ ತಾನೆ ಬೆರಗಾಗುತ್ತಾನೆ. 'ಕಿಮಿದಂ ವ್ಯಾಹೃತಂ ಮಯಾ!' ಎಂಥ ಸುಂದರ ಅಭಿವ್ಯಕ್ತಿ ನನ್ನ ಈ ಮಾತು! ಎಂದು ಉದ್ಗರಿಸುತ್ತಾನೆ.

ವಾಲ್ಮೀಕಿ ಇಲ್ಲಿ ಬೇಡನು ಹಕ್ಕಿಗಳ ಜೋಡಿಯನ್ನು ಅಗಲಿಸಿದ ಹೃದಯ ವಿದ್ರಾವಕವಾದ ಘಟನೆಯನ್ನು ಕಂಡು 'ಭಾವಿತಾತ್ಮ'ನಾಗಿ ಒಂದು ಸುಂದರ ಕಾವ್ಯಾರ್ಥ ಧ್ವನಿಯಿಂದ ತುಂಬಿದ 'ಮಾನಿಷಾದ' ಶ್ಲೋಕವನ್ನು ಅಯತ್ನವಾಗಿ ತನಗೇ ಅರಿವಿಲ್ಲದಂತೆ ಉಚ್ಚರಿಸಿದ್ದಾನೆ. ಒಡನೆ ತಾನೆ ಸಹೃದಯನಾಗಿ ಅದನ್ನು ಪುನರುಚ್ಚರಿಸಿ, ಶಿಷ್ಯರ ಬಾಯಿಂದಲೂ ಹೇಳಿಸಿ ಪುನಃ ಪುನಃ ವಿಮರ್ಶಿಸಿದ್ದಾನೆ. ಆ ಪುಟ್ಟ ಶ್ಲೋಕದೊಳಗೆ ಅಡಗಿರುವ ಕಾವ್ಯಾರ್ಥ ಧ್ವನಿ ಪ್ರಪಂಚದ ಆಳ

ವಿಸ್ತಾರಗಳನ್ನು ಕಂಡು ಬೆರಗಾಗಿ 'ಕಿಮಿದಂ ವ್ಯಾಹೃತಂ ಮಯಾ!' ಎಂದು ಉದ್ಗರಿಸಿದ್ದಾನೆ. 'ಶ್ಲೋಕೋ ಭವತು ನಾನ್ಯಥಾ' ಸಹೃದಯರೆಲ್ಲರೂ ತಿರು ತಿರುಗಿ ಈ ಪದ್ಯವನ್ನು ತಮ್ಮಲ್ಲಿ ಹೇಳಿಕೊಳ್ಳಲಿ, ರಸಾನುಭವದಲ್ಲಿ ತೇಲಾಡಲಿ ಎಂದು ಆಶಿಸಿದ್ದಾನೆ. ತನ್ನ ಆನಂದದ ಅನುಭವದ ಸಿಹಿಯನ್ನು ಸಹೃದಯ ರೆಲ್ಲರಿಗೂ ಹಂಚಲು ಹಾತೊರೆಯುತ್ತಿದ್ದಾನೆ.

ತಾನು ಕಣ್ಣಾರೆ ಕಂಡು ಅರಿತಿದ್ದ ರಾಮಸೀತೆಯರ ಜೋಡಿಯ ಕತೆ ಯನ್ನು ನಾರದರ ಮುಖದಿಂದಲೂ ಕೇಳಿದ ಮೇಲೆ, ಸರಿಯಾಗಿ ಕ್ರೌಂಚ ಪಕ್ಷಿಗಳ ಜೋಡಿಯ ಘಟನೆಯನ್ನೂ ಕಂಡಾಗ ವಾಲ್ಮೀಕಿಯ ಕವಿ ಹೃದಯ ಎಚ್ಚತ್ತಿತು. ಆ ಹಕ್ಕಿಗಳಂತೆಯೆ 'ಚಾರು ನಿಸ್ವನ'ರು, ಮಧುರವಾದ ಬಾಳ ಸಂಗೀತ ಹಾಡುತ್ತಿದ್ದವರು ರಾಮಸೀತೆಯರು. ಅಯೋಧ್ಯೆಯ ದುಷ್ಟ ಜನತೆ ಬೇಡನಂತೆ 'ವೈರ ನಿಲಯ'ವಾಗಿದ್ದು ಅವರಿಬ್ಬರನ್ನು ಅಗಲಿಸಲು ಕಾದು ನಿಂತಿತ್ತು. ಏಕೆಂದರೆ ಬೇಡನ ಕುಲಕಸಬು ವೈರಪೂರಿತವಾದ ಬೇಟೆ.

ಮೃಗಮೀನ ಸಜ್ಜನಾನಾಂ ತೃಣಜಲಸಂತೋಷವಿಹಿತವೃತ್ತೀನಾಂ ।
ಲುಬ್ಧಕ ಧೀವರ ಪಿಶುನಾ ನಿಷ್ಕಾರಣವೈರಿಣೋ ಜಗತಿ–ಭರ್ತೃಹರಿ.

ಜಿಂಕೆ ಮೀನು ಸಜ್ಜನ—ಈ ಮೂವರು, ಹುಲ್ಲು, ನೀರು, ಸಿಕ್ಕಿದು ದರಲ್ಲಿ ತೃಪ್ತಿ—ಈ ಮೂರರಿಂದ ಬದುಕುವವರು. ಇವರಿಗೂ ವೈರಿ ಗಳಿದ್ದಾರೆ, ನಿಷ್ಕಾರಣವೈರಿಗಳು—ಬೇಡ, ಬೆಸ್ತ, ದುರ್ಜನ ಈ ಮೂವರು.

ನಿರುಪದ್ರವಿಯಾದ, ನೋಡುವವರ ಕಣ್ಣಿಗೆ ತನ್ನ ವೈಯಾರದಿಂದಲೆ ಹಬ್ಬ ಉಂಟುಮಾಡುವ ಜಿಂಕೆಯನ್ನು ಬೇಡ ಹೊಡೆದು ಕೊಲ್ಲುತ್ತಾನೆ, ನಿಷ್ಕಾರಣ ವೈರಿ. ಆತನಿಗೆ ಜಿಂಕೆಯನ್ನು ಹೊಡೆದು ಕೊಲ್ಲುವುದರಲ್ಲಿಯೆ ಆನಂದ. ಹೀಗೆ ದುರ್ಜನರು ಪರರ ಸುಖಸಂಸಾರದಲ್ಲಿ ಹುಳಿಹಿಂಡಿ ತೃಪ್ತಿ ಪಡುತ್ತಾರೆ, ಕೆಟ್ಟ ಮಾತಾಡುತ್ತಾರೆ. ಅಯೋಧ್ಯೆಯ ಜನತೆ ಹಾಗೇ ಮಾಡಿತು. ತಮ್ಮ ಸುಂದರವಾದ ಬಾಳನ್ನೆ ಲೋಕಾರಾಧನೆಗಾಗಿ ಮುಡಿಪಿಟ್ಟಿದ್ದ ರಾಮಸೀತೆಯರನ್ನು ಅಗಲಿಸಿತು. ಕೆಟ್ಟಮಾತಾಡಿತು, ರಾವಣನ ಮನೆಯಲ್ಲಿ ವಾಸಮಾಡಿ ಬಂದ ಸೀತೆಯನ್ನು ರಾಮ ತಿರುಗಿ ಕೂಡಿದನೆಂದು. ಬಾಣದಂತೆ ಮರ್ಮವೇಧಕವಾದ ಮಾತು. ಲಂಕೆಯಲ್ಲಿ ಒಮ್ಮೆ ಅಗ್ನಿ ಪರೀಕ್ಷೆ ಆಗಿತ್ತು.

ಆದರೂ ಸುಳ್ಳು ಅಪವಾದ ಹಾಕುವುದು ದುರ್ಜನರ ಸ್ವಭಾವ. ಈ ಬಾಣದ ಏಟಿಗೆ ತತ್ತರಿಸಿ ರಾಮನೆಂಬ ಹಕ್ಕಿ ಕುಸಿದು ಬಿತ್ತು. ಲಕ್ಷ್ಮಣ ಸೀತೆಯನ್ನು ವಾಲ್ಮೀಕಿಯ ಆಶ್ರಮದಲ್ಲಿ ಬಿಟ್ಟುಬಂದಾಗ 'ತಿರುಗಿ ರಾಮನನ್ನು ಹೇಗೆ ಕಾಣಲಿ' ಎಂದುಕೊಂಡ—

ಸೀತಾ ಸಂತಾಪಜಂ ದುಃಖಂ ಪಶ್ಯ ರಾಮಸ್ಯ ಸಾರಥೇ ।
ತತೋಃ ದುಃಖತರಂ ಕಿಂನು ರಾಘವಸ್ಯ ಭವಿಷ್ಯತಿ ?

(ಉ. 50–3)

'ಸುಮಂತ್ರ, ನೋಡು, ಇನ್ನು ಸೀತೆಗಾಗಿ ಸಂತಪಿಸುತ್ತ ರಾಮ ಎಷ್ಟು ದುಃಖಪಡಬಹುದು! ಇದಕ್ಕಿಂತ ಇನ್ನು ಹೆಚ್ಚಿನ ದುಃಖ ರಾಮನಿಗೆ ಇನ್ನೊಂದು ಇದ್ದೀತೆ?' ಲಕ್ಷ್ಮಣ ಮೂರು ದಿನಗಳ ಬಳಿಕ ಹಿಂತಿರುಗಿ ಬಂದು, ರಾಮ ಸಿಂಹಾಸನದಲ್ಲಿ ದೀನನಾಗಿ ಕಣ್ಣೀರು ಸುರಿಸುತ್ತ ಕುಳಿತಿದ್ದುದನ್ನು ಕಂಡ. ಎದೆಯಲ್ಲಿಯೆ ನೋವನ್ನು ತುಂಬಿಕೊಂಡು ಪ್ರಾಣ ಸಂಕಟ ಅನುಭವಿಸುತ್ತ ಸದಾ ಕೊರಗುತ್ತಿದ್ದ ರಾಮ. ಕಾಳಿದಾಸನ ದಿಲೀಪನಂತೆಯೆ 'ಗೂಢಾಕಾರೇಂಗಿತ' ನಾಗಿದ್ದರಿಂದ, ಕಾಡಿನಲ್ಲಿ ಸೀತೆಗಾಗಿ ವಿಲಾಪಮಾಡಿದಂತೆ ವಿಲಾಪ ಮಾಡದೆ, ಕಣ್ಣಲ್ಲಿ ನೀರು ತುಂಬಿಕೊಂಡು ತಲೆತಗ್ಗಿಸಿ ಕುಳಿತು ಆಲೋಚನಾಮಗ್ನನಾದವನಂತೆ ನಟಿಸುತ್ತಿದ್ದ.

ಹೆಣ್ಣುಹಕ್ಕಿ ಸೀತೆ. ಒಂದೆಡೆ ತನಗೆ ಪ್ರಿಯತಮನ ವಿಯೋಗದ ದುಃಖ. ಅದಕ್ಕಿಂತ ಮಿಗಿಲಾಗಿ ಪ್ರಿಯತಮ ಬಾಣದೇಟಿಗೆ ತುತ್ತಾಗಿ ಹೊರಳಾಡುತ್ತಿರುವ ದೃಶ್ಯ ಕಂಡು ಸಹಿಸಲಾರದಂಥ ವೇದನೆ. ಸೀತೆ ಹೇಳುತ್ತಾಳೆ—

ಮಾಮಿಕೇಯಂ ತನುರ್ನೂನಂ ಸೃಷ್ಟಾ ದುಃಖಾಯ ಲಕ್ಷ್ಮಣ ।

(ಉ. 48–3)

'ಲಕ್ಷ್ಮಣ, ನನ್ನ ಜನ್ಮವೆ ದುಃಖ ಅನುಭವಿಸುವುದಕ್ಕಾಗಿ ಎಂದು ಕಾಣುತ್ತದೆ.' ಇಷ್ಟು ದುಃಖದಿಂದ ನೋಯುತ್ತಿದ್ದರೂ ರಾಮನ ಬಗ್ಗೆ ಅವಳು ಹೇಳುವ ಮಾತು—

ಅಹಂ ತ್ಯಕ್ತಾ ತ್ವಯಾ ವೀರ ಅಯಶೋಭೀರುಣಾ ಜನೇ ।
ಯಚ್ಚ ತೇ ವಚನೀಯಂ ಸ್ಯಾದಪವಾದ ಸಮುತ್ಥಿತಂ ।
ಮಯಾ ಚ ಪರಿಹರ್ತವ್ಯಂ ತ್ವಂ ಹಿ ಮೇ ಪರಮಾ ಗತಿಃ ॥
(ಉ. 48-13, 14)

'ಪತಿದೇವ, ಜನಾಪವಾದ ಭಯದಿಂದ ನೀನು ನನ್ನನ್ನು ಪರಿತ್ಯಜಿಸಿರುವೆ. ನಿನಗೆ ಬಂದ ಆ ಅಪವಾದವನ್ನು ತೊಡೆಯುವುದು ನನ್ನ ಕರ್ತವ್ಯವೂ ಹೌದು. ನೀನೆ ನನಗೆ ಪರಮ ಗತಿ '

ಶ್ಲೋಕದಲ್ಲಿ 'ವೀರ'ನೆಂದರೆ ಪತಿ–'ಅವೀರಾ ನಿಷ್ಪತಿ ಸುತಾ' ಎಂದು ಅಮರಕೋಶ.

ಸೀತೆ ರಾಮನನ್ನು 'ಪತಿ' ಎಂದೂ 'ಪರಮ ಗತಿ' ಎಂದೂ ಅನ್ನುತ್ತ ಅವನಿಗೆ ಬಂದ ಅಪವಾದವನ್ನು ಕಳೆಯುವಲ್ಲಿ ತಾನೂ ಸಹ ಭಾಗಿನಿ ಎಂದು ತೃಪ್ತಿಪಡುತ್ತಿದ್ದಾಳೆ. ಕಾಳಿದಾಸನ ಶಕುಂತಲೆಯಾದರೊ 'ಅನಾರ್ಯ' ಎಂದು ದುಷ್ಯಂತನನ್ನು ಕರೆದಳು, 'ಧರ್ಮದ ಮುಸುಕು ಹಾಕಿಕೊಂಡ ವಂಚಕ, ಹುಲ್ಲು ಮುಸುಕಿದ ಭಾವಿಯಂತೆ ಅಪಾಯಕಾರಿ' ಎಂದೆಲ್ಲ ಮನಸಾರೆ ಬೈದಳು. ಸೀತೆ 'ಪತಿ ದೇವ'ನೆನ್ನುತ್ತ ಪರಿತ್ಯಕ್ತೆಯಾದರೂ ಅವನ ಸೇವೆ ಎಂದು ದೂರ ಉಳಿದಳು !

ನ ಖಲ್ವದ್ಯೈವ ಸೌಮಿತ್ರೇ ಜೀವಿತಂ ಜಾಹ್ನವೀಜಲೇ ।
ತ್ಯಜೇಯಂ ರಾಜವಂಶಸ್ತು ಭರ್ತುರ್ಮೇ ಪರಿಹಾಸ್ಯತೇ
(ಉ. 48-8)

'ಲಕ್ಷ್ಮಣ, ನಾನೀಗಲೆ ಗಂಗೆಯಲ್ಲಿ ಬಿದ್ದು ಸಾಯುತ್ತಿದ್ದೆ. ಆದರೆ ಅದು ಸರಿಯಲ್ಲ, ಪತಿದೇವನ ವಂಶದ ಕುಡಿ ನನ್ನ ಗರ್ಭದಲ್ಲಿದೆ, ಅದು ನಾಶವಾದೀತು.'

ಇಷ್ಟು ಹೇಳಿ, 'ಪ್ರಜೆಗಳನ್ನು ಸೋದರರಂತೆ ಕಾಣು. ಇನ್ನೂ ಕೀರ್ತಿಶಾಲಿಯಾಗು' ಎಂದು ರಾಮನಿಗೆ ಹಾರೈಸಿ,

ಪ್ರಾಣೈರಪಿ ಪ್ರಿಯಂ ತಸ್ಮಾದ್ ಭರ್ತುಃ ಕಾರ್ಯಂ ವಿಶೇಷತಃ ।
(ಉ. 48–18)

'ಪತಿಗೆ ಇಷ್ಟವಾದ ಕಾರ್ಯ, ಅವನ ಹಿತ, ನನಗೆ ಪ್ರಾಣಕ್ಕಿಂತ ಮಿಗಿಲು' ಎನ್ನುತ್ತಾಳೆ. ಅನಾಥೆಯಾಗಿ ಕೊರಗುತ್ತಾಳೆ. ತನಗಿಂತಲೂ ಹೆಚ್ಚು ರಾಮನಿಗಾಗಿ.

ರಾಮನ ದುಃಖ ಅಸದಳವಾದುದು. ಎರಡು ಬಾರಿ ಆತನಿಗೆ ಸೀತಾ ವಿಯೋಗವಾಯಿತು. ಒಮ್ಮೆ ರಾವಣನಿಂದ, ಇನ್ನೊಮ್ಮೆ ಅಯೋಧ್ಯೆಯ ದುಷ್ಟ ಜನತೆಯಿಂದ. ಒಂದರ ಮೇಲೊಂದಾಗಿ ಎರಡು ಬಾಣಗಳನ್ನು ಬೇಡ ಹಕ್ಕಿಯ ಮೇಲೆ ಎಸೆದಿದ್ದಾನೆ. ರಾವಣ ಸೀತೆಯನ್ನು ಅಪಹರಿಸಿದಾಗ ರಾಮನಿಗೆ ಒಂದೆಡೆ ವಿಯೋಗ ದುಃಖ, ಇನ್ನೊಂದೆಡೆ ಹೆಂಡತಿಯನ್ನು ಕಾಪಾಡಲಾರದಂಥ, ಗಂಡುವೇಷದ ಹೆಣ್ಣೆಂಬ ಅಪವಾದದ ಭಯ. ಸೀತೆ ಮೊದಲೆ ಅದನ್ನು ರಾಮನಿಗೆ ಹೇಳಿ ಎಚ್ಚರಿಸಿದ್ದಳು—'ಸ್ತ್ರಿಯಂ ಪುರುಷ ವಿಗ್ರಹಂ' ಈ ಅಪವಾದ ಬಾರದಂತೆ ಮಾಡುವುದಕ್ಕಾಗಿಯೆ ಸೀತೆ ರಾವಣನನ್ನು ಶಾಪದಿಂದ ಸುಟ್ಟು ಬಿಡುವುದಾಗಲಿ, ಹನುಮಂತ ಬೇಡಿಕೊಂಡರೂ ಆತನ ಹೆಗಲೇರಿ ಯಾರೂ ತಿಳಿಯದಂತೆ ಲಂಕೆಯಿಂದ ತಪ್ಪಿಸಿಕೊಂಡು ಬರುವ ಸುಲಭ ಮಾರ್ಗ ಆರಿಸಿಕೊಳ್ಳುವುದಾಗಲಿ ಮಾಡಲಿಲ್ಲ.

ಪರಿತ್ಯಕ್ತೆಯಾದ ಸೀತೆಗಿಂತ ಪರಿತ್ಯಾಗ ಮಾಡಿದ ರಾಮನ ಅಳಲು ಅಧಿಕ. ಸೀತೆ ಗರ್ಭಿಣಿಯ ದೋಹದಕ್ಕಾಗಿ ಆಶ್ರಮವನ್ನು ಕಂಡು ಬರಲೆಂದೆ ಆಶಿಸಿದವಳು. ತನಗೆ ಇಷ್ಟವಾದ ಪುಣ್ಯಾಶ್ರಮವಾಸ ದೊರಕಿದೆ. ಘೋರ ವನವಾಸ ಅದಲ್ಲ. ತಂದೆಯಂತೆ ವಾತ್ಸಲ್ಯದಿಂದ ಕಾಣುವ ವಾಲ್ಮೀಕಿಗಳ ಆರೈಕೆ. ಮುದ್ದಾದ ಇಬ್ಬರು ಮಕ್ಕಳು, ಪತಿವಿಯೋಗದ ದುಃಖ ಮರೆಸುವಂಥವು, ಹುಟ್ಟಿದುವು. ಸುಖಪ್ರಸವ. ಆಗ ಶತ್ರುಘ್ನ ಕಾರಣಾಂತರದಿಂದ ಆಶ್ರಮದಲ್ಲಿಯೆ ಇದ್ದ. ಮಕ್ಕಳನ್ನು ಹೆತ್ತ ಸೀತಾಮಾತೆಯನ್ನು 'ಮಾತರ್ದಿಷ್ಟ್ಯಾ' 'ಅಮ್ಮ ತುಂಬ ಸಂತೋಷ' ಎನ್ನುತ್ತ ಅಭಿನಂದಿಸಿ ವಂದಿಸಿದ. ಇದರಿಂದ ಬಂಧುಗಳೆಲ್ಲ ಆಗಾಗ ಸೀತೆಯನ್ನು ಕಂಡು ಸಂತೈಸುತ್ತಿದ್ದಿರಬಹುದೆಂದು ಊಹಿಸಲು ಎಡೆ ಇದೆ. ಮುಂದೆ ಮಕ್ಕಳು ಲವಕುಶರು ವಾಲ್ಮೀಕಿಯ ಬಳಿ ವಿದ್ಯಾಭ್ಯಾಸ ಮಾಡಿದರು.

ಒಡೆಯುತ್ತದೆ. ಸಹಿಸಿಕೊಳ್ಳಲು ಅವನಿಂದಾಗಲಿಲ್ಲ. ಪ್ರೀತಿ ವ್ಯಕ್ತ ಮಾಡಿದ. (ಅಯೋ. _6-7). ಕೈಕೆಯಿ ಪಾತೆ ಎಂದು ಅವಳು ಮಾಡಿದ ಅನ್ಯಾಯವನ್ನು ತಾನೂ ತಡೆದುಕೊಂಡು ಲಕ್ಷ್ಮಣನಿಗೂ (ಅಯೋ. 22-30) ಭರತನಿಗೂ (ಅಯೋ. 107-10) ಅವಳನ್ನು ಗೌರವಿಸಲು ಉಪದೇಶಿಸಿದ ರಾಮನೆ ವಿರಾಧವಧ ಪ್ರಸಂಗದಲ್ಲಿ (ಅರ. 2-20) ಮತ್ತು ಸೀತಾಪಹರಣ ಪ್ರಸಂಗದಲ್ಲಿ (ಅರ. 58-7) ಕೈಕಯಿಯನ್ನು ತಾನೆ ನಿಂದಿಸಿದ, ಲಕ್ಷ್ಮಣನ ಮುಂದೆ. ಅಂದರೆ, ತೋರಿಕೆಗೆ ರಾಮನಲ್ಲಿ ವನವಾಸ ಮಾಡಬೇಕಾಗಿ ಬಂದ ದುಃಖ ಏನೇನೂ ಇಲ್ಲ, ಕೈಕೆಯಿಯ ಬಗ್ಗೆಯೂ ಏನೂ ಬೇಸರವಿಲ್ಲ. ಆದರೆ ಒಳಗೆ ದುಃಖದಿಂದ ಬೇಯುತ್ತಿದ್ದಾನೆ. ಮರೆಯಲು ಸರ್ವ ಪ್ರಯತ್ನ ಮಾಡುತ್ತಿದ್ದಾನೆ, ಉದಾಹರಣೆಗೆ, ತ್ರಿಜಟನೆಂಬ ಬ್ರಾಹ್ಮಣ ವೃದ್ಧ, ನಿರ್ಗತಿಕ, ಕಡು ದರಿದ್ರ. ಮೈಯಲ್ಲಿ ಶಕ್ತಿ ಇಲ್ಲ. ದಾನ ಬೇಡುತ್ತಿದ್ದಾನೆ. ರಾಮ ವಿನೋದ ಮಾಡಿದ. 'ನಿನ್ನ ದಂಡವನ್ನು ಶಕ್ತಿ ಇದ್ದಷ್ಟು ದೂರಕ್ಕೆ ಎಸೆ. ಅಷ್ಟು ದೂರದಲ್ಲಿರುವ ಎಲ್ಲ ಗೋವುಗಳೂ ನಿನ್ನವಾಗುವವು' ಎಂದ. ಕೂಡಲೆ ಆ ಬ್ರಾಹ್ಮಣ ಸಂಭ್ರಮದಿಂದ ತನ್ನ ಹರಕುವಲ್ಲಿಯನ್ನು ಸೊಂಟಕ್ಕೆ ಬಿಗಿದು ಕಟ್ಟಿ ದಂಡಕಾಷ್ಠವನ್ನು ಗಿರ್ರನೆ ತಿರುಗಿಸಿ ತನ್ನ ಸರ್ವಶಕ್ತಿಯನ್ನು ಉಪಯೋಗಿಸಿ ಎಸೆದ. ಆ ದಂಡಕಾಷ್ಠ ಸರಯೂನದಿಯನ್ನು ದಾಟಿ ಸಾವಿರಾರು ಹಸುಗಳಾಚೆ, ಎತ್ತುಗಳನ್ನು ನಿಲ್ಲಿಸಿದ ಸ್ಥಳದಲ್ಲಿ ಹೋಗಿ ಬಿದ್ದಿತು. ತ್ರಿಜಟನಿಗೆ ಆ ಗೋವುಗಳನ್ನೆಲ್ಲ ಕೊಟ್ಟು ರಾಮ ನೆನ್ನುತ್ತಾನೆ—'ವಿಪ್ರೋತ್ತಮ, ಕೋಪಿಸಿಕೊಳ್ಳಬೇಡ, ವಿನೋದಕ್ಕಾಗಿ ಹೀಗೆಹೇಳಿದೆನು' ಇದನ್ನು—

'ಬ್ರಾಹ್ಮಣನ ದುರಾಸೆ, ದೌರ್ಬಲ್ಯ, ದೊಣ್ಣೆ ಎಸೆಯುವ ಪರಿಹಾಸ್ಯದ ಪರಮಾವಧಿಗೆ ತಳ್ಳಿ ಬಿಡುವಂಥಹುದು, ರಾಮನಿಗೇ ಈ ದುರಾಸೆ ಮುಜಗರಗೊಳಿಸಿತು'

ಎಂದೆಲ್ಲ ಹೇಳುವುದು ತಪ್ಪು, ರಾಮ ಅವನ ದುರಾಸೆಗೆ ಮುಜಗರಗೊಂಡಿದ್ದರೆ 'ಕೋಪಿಸಿಕೊಳ್ಳಬೇಡ, ವಿನೋದ ಮಾಡಿದೆ' ಎಂದು ಕ್ಷಮೆ ಬೇಡುತ್ತಿರಲಿಲ್ಲ, ಅವನನ್ನು ಆಲಿಂಗಿಸಿಕೊಂಡು, ಗೋವುಗಳನ್ನು ಕೊಟ್ಟು,

'ನನ್ನ ಸಂಪತ್ತೆಲ್ಲ ಇರುವುದು ಬ್ರಾಹ್ಮಣರಿಗಾಗಿ. ಅದನ್ನು ನೀವು ಸ್ವೀಕರಿಸಲು ಯಾವ ತಡೆ ಪರತ್ತುಗಳೂ ಇಲ್ಲ. ಬೇಕಾದುದನ್ನು ಕೇಳಿ (ಅಯೋ. 32–42) ಎನ್ನುತ್ತಿರಲಿಲ್ಲ. ಬ್ರಾಹ್ಮಣನೂ 'ಯಶಸ್ಸು ಬಲ ಪ್ರೀತಿ ಸುಖಗಳೆಲ್ಲ ನಿನ್ನ ದಾಗಲಿ' ಎಂದು ಆಶೀರ್ವದಿಸುತ್ತಿರಲಿಲ್ಲ. ರಾಮ ತನ್ನ ವನವಾಸದಲ್ಲಿ ಬ್ರಾಹ್ಮಣ ರಕ್ಷಣೆಯನ್ನೇ ಮುಖ್ಯ ಕಾರ್ಯವೆಂದು ಸಂಕಲ್ಪಿಸಿ ಹೊರಟವನು, ತನ್ನ ಈ ಕಾರ್ಯದಲ್ಲಿ ತಾನು ಯಶಸ್ವಿಯಾಗಬೇಕೆಂದು ಬ್ರಾಹ್ಮಣರ ಆಶೀರ್ವಾದವನ್ನೇ ಬಯಸುತ್ತಾನೆ, ಆದರ್ಶ ಕ್ಷತ್ರಿಯನಾಗಿ. ತನ್ನ ಸ್ವಂತ ದೇಹ ಬಲದಿಂದಲೆ ಎಲ್ಲ ಕಾರ್ಯ ನಿರ್ವಹಿಸುವೆನೆಂಬ ಅಹಂಕಾರ ಬಿಟ್ಟು ಬ್ರಾಹ್ಮಣಾಶೀರ್ವಾದದ ರಕ್ಷೆಯನ್ನು ಬೇಡುತ್ತಾನೆ, ಬ್ರಹ್ಮತೇಜಸ್ಸು ಕ್ಷಾತ್ರ ಬಲ ಇವೆರಡರ ಸಮಾವೇಶದಿಂದಲೆ ಲೋಕಕಲ್ಯಾಣವೆಂಬುದನ್ನು ತೋರಿಸಿ ಕೊಡುತ್ತಾನೆ. ಬ್ರಾಹ್ಮಣನಿಗೆ ಪರಿಹಾಸ ಅಪಹಾಸ ಮಾಡುತ್ತಿಲ್ಲ. ಅಂಥ ಭ್ರಮೆ ಏನಾದರೂ ಬ್ರಾಹ್ಮಣನಿಗೆ ಬಂದಿರಬಹುದೆ ಎಂಬ ಆತಂಕದಿಂದ ಕ್ಷಮೆ ಬೇಡುತ್ತಾನೆ.

ವಸ್ತುತ: ಬ್ರಾಹ್ಮಣನಿಗೆ ಗೊತ್ತು, ರಾಮನೆಷ್ಟು ಬ್ರಾಹ್ಮಣರಲ್ಲಿ ಭಕ್ತಿ ಉಳ್ಳವನೆಂದು. ಆದರೂ ವನವಾಸದ ದುಃಖ ಮರೆಯಲು ಒಂದು ವಿನೋದ ಮಾಡುತ್ತಿದ್ದಾನೆ ತಾನೂ ಅದರಲ್ಲಿ ಸಹಕರಿಸಿ ಅವನ ದುಃಖವನ್ನು ಅರೆಕ್ಷಣವಾದರೂ ಮರಸುತ್ತೇನೆ ಎಂದುಕೊಂಡು ಗಂಭೀರವಾಗಿ ರಾಮನಿತ್ತ ಪಂಥಾಹ್ವಾನ ಸ್ವೀಕರಿಸಿದ, ಅದನ್ನು ಗೆದ್ದುಕೊಂಡ, ಆ ವೃದ್ಧ ಬ್ರಾಹ್ಮಣನಿಗೆ ರಾಮನಲ್ಲಿರುವ ಪುತ್ರವಾತ್ಸಲ್ಯವನ್ನು ಕಂಡುಕೊಳ್ಳುವ ಸಹೃದಯತೆ ನಮಗೆ ಬೇಕು.

ಹೀಗೆ ರಾಮ ತನ್ನೆಲ್ಲ ದುಃಖವನ್ನೂ ಸಹಿಸಿಕೊಂಡು ನಿರ್ವಿಕಾರಚಿತ್ತದವ ನೆಂಬಂತೆ ವ್ಯವಹಾರ ಮಾಡಬಲ್ಲ ಆತ್ಮಬಲ ಉಳ್ಳವನೆ ಹೊರತು ಕಠಿನ ಹೃದಯಿ ಯಲ್ಲ, ನಿಷ್ಕರುಣಿಯಲ್ಲ. ಅಸಂಸ್ಕೃತನಲ್ಲ. ಸೀತೆ ಅಗ್ನಿಪರೀಕ್ಷೆಯ ಕಾಲದಲ್ಲಿ ರಾಮನನ್ನು 'ಪ್ರಾಕೃತ'ನೆಂದಿದ್ದರೆ ಅದಕ್ಕೆ 'ಅಸಂಸ್ಕೃತ'ನೆಂದರ್ಥವಲ್ಲ. ಅಜ್ಞ, ಅಮಾಯಕನಾದವನೆಂದರ್ಥ. ಈ ಅರ್ಥದಲ್ಲಿಯೇ ವಾಲ್ಮೀಕಿಯ ಪ್ರಯೋಗ ಕಂಡಿದೆ, ಉದಾ ;

ರಾಜಾನೋ ಬಹು ದರ್ಶನಾ : । ಭವಂತಿ ಪರಿಹಂತಾರ—
ಸ್ತೇಜ್ಞೇಯಾ : ಪ್ರಾಕೃತೈರ್ನರೈ : (ಕಿ. 2. 23)

'ರಾಜರು ನಾನಾ ಉಪಾಯ ಬಲ್ಲವರು. ನಮ್ಮ ಕಾರ್ಯ ಕೆಡಿಸಬಲ್ಲವರು. ಅವರನ್ನು ಅಮಾಯಕ ಅಜ್ಞ ವೇಷದಿಂದಿದ್ದು ನಮ್ಮ ಜನರು ತಿಳಿದುಕೊಳ್ಳ ಬೇಕು.'

ತೌ ತ್ವಯಾ ಪ್ರಾಕೃತೇನೇವ ಗತ್ವಾ ಜ್ಞೇಯೌ ಪ್ಲವಂಗಮ
(ಕಿ. 2–24)

'ರಾಮಲಕ್ಷ್ಮಣರನ್ನು ಅಜ್ಞ ಸಾಮಾನ್ಯ ಮಾನವನಂತೆ ಸಂಧಿಸಿ ಅವರ ಸ್ವಭಾವವನ್ನು ತಿಳಿದುಕೊಳ್ಳಬೇಕು ನೀನು' ಎಂದು ಸುಗ್ರೀವ ಹನುಮಂತನಿಗೆ ಹೇಳುತ್ತಾನೆ.

ಕಿಂ ತ್ವಯಾ ತಪ್ಯತೇ ವೀರ ಯಥಾನ್ಯ : ಪ್ರಾಕೃತಸ್ತಥಾ (ಯು. 2-2)

ಸುಗ್ರೀವ, ಸಮುದ್ರದಾಟುವ ಬಗೆ ಹೇಗೆಂದು ಶೋಕಿಸುವ ರಾಮನನ್ನು ಸಂತೈಸುವಾಗಿನ ಮಾತು, 'ರಾಮ, ಅಜ್ಞನಂತೆ ಏಕೆ ನೀನು ಶೋಕಿಸುತ್ತಿರುವಿ ?' ಈ ಎಲ್ಲ ಕಡೆಗಳಲ್ಲಿ 'ಪ್ರಾಕೃತ'ನೆಂದರೆ ಅಸಂಸ್ಕೃತ, ಬರ್ಬರ, ನಿಷ್ಕರುಣಿ ಎಂದೆಲ್ಲ ಅರ್ಥೈಸಲಾಗದು. ಸೀತೆ ಆಗ ರಾಮನನ್ನು ಒಂದಿಷ್ಟೂ ಕಠೋರವಾಗಿ ನಿಂದಿಸಲಿಲ್ಲ. 'ಬೇರೆ ಸ್ತ್ರೀಯರಂತೆ ನಾನೆಂದು ತಿಳಿದುಕೊಂಡು ನನ್ನ ಶೀಲವನ್ನು ಶಂಕಿಸುತ್ತಿರುವೆಯ ? ಇದು ಸರಿಯಲ್ಲ' ಎಂದಿಷ್ಟು ಮಾತ್ರ ಆಕ್ಷೇಪಿಸುತ್ತಾಳೆ. ಶಕುಂತಲೆಯಂತೆ 'ಅನಾರ್ಯ' ಎಂದು ಮುಂತಾಗಿ ಹೀನಾಯವಾಗಿ ಬಯ್ಯುವುದಿಲ್ಲ. ವೀರ, ಮಹಾಬಾಹು, ಪ್ರಭು. ಮಾನದ, ನೃಪಶಾರ್ದೂಲ ಎಂದು ಮುಂತಾಗಿ ಗೌರವದಿಂದಲೆ ಸಂಭೋಧಿಸಿ 'ಹೃದಯಂ ತ್ವಯಿ ವರ್ತತೇ' 'ನನ್ನ ಹೃದಯ ನಿನ್ನಲ್ಲಿಯೆ ಇದೆ' ಎಂದೆ ಹೇಳುತ್ತಾಳೆ.

## ರಾಮನಿಗೆ ಸೀತೆ ಬೇಡ ?

ಅಗ್ನಿ ಪರೀಕ್ಷೆಯ ಕಾಲದಲ್ಲಿ ರಾಮನ ವರ್ತನೆ ತೋರಿಕೆಗೆ ಅಸಂಸ್ಕೃತ ಬರ್ಬರವಾಗೇ ಇತ್ತು. ಆದರೆ ಅದು ಆತನ ಬಹಿರಂಗದ ವರ್ತನೆ. ಅಂತರಂಗದಲ್ಲಿ ಮೃದುಹೃದಯಿ ಆತ.

'ರಾವಣನನ್ನು ಕೊಂದ ಮೇಲೆ ರಾಮ ಸೀತೆಯತ್ತ ಧಾವಿಸದೆ ರಾವಣನ ಶವ ಸಂಸ್ಕಾರ ವಿಭೀಷಣನ ಪಟ್ಟಾಭಿಷೇಕವೆಲ್ಲ ಮುಗಿಸಿ, ಬಳಿಕ ಸೀತೆಗೆ ತನ್ನ ವಿಜಯವಾರ್ತೆ ಕಳಿಸಿದ. ಅನಂತರ ಹನುಮಂತ ದೇವಿಯನ್ನು ನೋಡೆಂದು ರಾಮನಿಗೆ ಹೇಳಿದಾಗ ವಿಭೀಷಣನನ್ನು ಕಳಿಸಿ ಸೀತೆಗೆ ಅಭ್ಯಂಗ ಸ್ನಾನ ಮಾಡಿಸಿ ಶುದ್ಧಗೊಳಿಸಿ ಅವಳನ್ನು ಎಲ್ಲರ ಮಧ್ಯ ದೊಂಬಿ ಗದ್ದಲಗಳಲ್ಲಿ ಯುದ್ಧಭೂಮಿಯಲ್ಲಿ, ಲಕ್ಷ್ಮಣ ಸುಗ್ರೀವರು ವ್ಯಥೆ ಪಡುತ್ತಿರುವಂತೆಯೆ, ಸೀತೆಯನ್ನು ಸಾರ್ವಜನಿಕ ಪ್ರೇಕ್ಷೆಗೊಡ್ಡಿ ಅವಳು ಲಜ್ಜೆಯಿಂದ ತನ್ನ ಗಾತ್ರಗಳಲ್ಲಿ ಅಡಗಿಹೋಗುವಳೊ ಎಂಬಂತೆ ನಾಚುತ್ತ ಸೆರಗಿಂದ ಮುಖ ಮರೆಸಿ ಕೊಂಡು ಪತಿ ಸಮಿಪಕ್ಕೆ ಬಂದು ಆರ್ಯಪುತ್ರ ಎಂದು ಹೇಳಿ ಅಳತೊಡಗಲು ರಾಮ ಕೋಪದಿಂದ ಹುಬ್ಬು ಗಂಟಿಕ್ಕಿ ಓರೆಗಣ್ಣಿನಿಂದ ಜಾನಕಿಯನ್ನು ನೋಡುತ್ತ ನನ್ನ ಕಣ್ಣಿಗೆ ಹುಣ್ಣಿನಂತಿರುವಿ ಹೋಗು ಎಂದು ಪರುಷ ವಾಕ್ಯಗಳಿಂದ ನಿಂದಿಸಿ ಸಾರ್ವಜನಿಕರೆದುರು ಅವಮಾನಿಸಿ ನಿರಾಕರಿಸಿ ಉಪೇಕ್ಷೆಯ ಪರಮ ಸುಮ್ಮಾನದಲ್ಲಿ ನಿಲ್ಲುತ್ತಾನೆ.'

ವಾಲ್ಮೀಕೀಯ ರಾಮನ ಹೃದಯವನ್ನು ಅರ್ಥ ಮಾಡಿಕೊಳ್ಳಲಾರದ ಪ್ರಾಕೃತ ಅಸಂಸ್ಕೃತ ಓದುಗರಿಗೆ ರಾಮಾಯಣ ಮೇಲೆ ಹೇಳಿದಂತೆ ವ್ಯತ್ಯಾಸ ವಾಗಿ ಕಾಣಬಹುದು.

'ವ್ಯಸನೇಷು ಮನುಷ್ಯಾಣಾಂ ಭೃಶಂ ಭವತಿ ದುಃಖಿತ ;

(ಅಯೋ 2–40)

'ಇತರರ ದುಃಖ ಕಂಡು ಅವರಿಗಿಂತ ಹೆಚ್ಚು ದುಃಖಿಸುವವ ರಾಮ' ಎಂದು ಅಯೋಧ್ಯೆಯ ಪ್ರಜೆಗಳು ರಾಮನನ್ನು ತಿಳಿದುಕೊಂಡಿದ್ದಾರೆ. ಲಂಕೆಯ ರಣಭೂಮಿ ರುದ್ರ ಭೂಮಿಯಾಗಿದ್ದಾಗ ಎಲ್ಲೆಲ್ಲೂ ಶವಗಳು ಬಿದ್ದಿದ್ದು. ಅವುಗಳ ಮೇಲೆ ಸಂಬಂಧಿಕರು ಬಿದ್ದು ಅಳುತ್ತಿರುವಾಗ ರಾಮ ಅದೆಂತು ಆತುರದಿಂದ ಸೀತೆಯತ್ತ ಧಾವಿಸಬಲ್ಲ ?

ರಾವಣನನ್ನು ಕೊಂದ ಮಾತ್ರಕ್ಕೆ ರಾಮನ ಕೆಲಸ ಪೂರ್ಣವಾಗಲಿಲ್ಲ. ವಿಭೀಷಣನ ಪಟ್ಟಾಭಿಷೇಕವಾಗಬೇಕು. ಹಾಗೆ ಮಾತು ಕೊಟ್ಟಿದ್ದ. ಲಕ್ಷ್ಮಣ ರಣರಂಗದಲ್ಲಿ ಗಾಯಗೊಂಡು ಮೂರ್ಛಿತನಾಗಿ ಬಿದ್ದಾಗ ರಾಮ ಪರಿತಪಿ ಸುತ್ತಾನೆ—'ಇನ್ನು ನಾನು ವಿಭೀಷಣನಿಗೆ ಕೊಟ್ಟ ಮಾತನ್ನು ನಡೆಸಿದಂತಾಗು

ವುದಿಲ್ಲ.' (ಯು. 49–22) 'ವಿಭೀಷಣನಿಗೆ ಪಟ್ಟಾಭಿಷೇಕ ಮಾಡಿದ ಮೇಲೆ ರಾಮ, 'ವಿಜ್ವರ'ನಾದನಂತೆ. (ಬಾಲ 1–85) ಕೊಟ್ಟ ಮಾತಿಗೆ ತನ್ನ ಪ್ರಾಣವನ್ನೇ ಕೊಡುವಂಥ ರಾಮ ಅದನ್ನು ಮರೆತು ಸೀತೆಯತ್ತ ಧಾವಿಸುವನೆ ?

ರಾವಣ ಅಧರ್ಮ ಪ್ರವೃತ್ತನಾದರೂ ರಾಮನ ದೃಷ್ಟಿಯಲ್ಲಿ ಅವನೊಬ್ಬ ತೇಜಸ್ವಿ, ಬಲವಾನ್, ಶೂರ, ಮಹಾತ್ಮ. ಒಬ್ಬ ವೀರ, ಇನ್ನೊಬ್ಬ ವೀರನಿಗೆ ಸಲ್ಲಿಸಬೇಕಾದ ಗೌರವವನ್ನು ರಾಮ ರಾವಣನಿಗೆ ಕೊಡುತ್ತಾನೆ, ಅವನ ಉತ್ತರಕ್ರಿಯೆ ಮಾಡಲು ವಿಭೀಷಣನಿಗೆ ಆಗ್ರಹಗೊಳಿಸುತ್ತಾನೆ. 'ಮರಣಾಂತಾನಿ ವೈರಾಣಿ' 'ಸತ್ತ ಮೇಲೇನು ವೈರ ?' ಎನ್ನುತ್ತ ತನ್ನ ಧೀರೋದಾತ್ತಗುಣವನ್ನು ಮೆರೆಸುತ್ತಾನೆ. ಅಂಥವನು ರಾವಣನ ಶವಸಂಸ್ಕಾರವಾಗದೆ ತನ್ನ ಕೆಲಸ ಪೂರ್ಣವಾಯಿತೆಂದು ತಿಳಿಯುವನೆ ? ಸೀತೆಯತ್ತ ಧಾವಿಸುವನೆ ?

ರಾವಣನ ಶವಸಂಸ್ಕಾರವಾದ ಮೇಲೆ ವಿಭೀಷಣನ ಪಟ್ಟಾಭಿಷೇಕದ ಸಡಗರದಲ್ಲಿ ಲಂಕೆ ಹೊಸ ಆನಂದ ಉತ್ಸಾಹದಿಂದಿರುವಾಗ ಪಟ್ಟಾಭಿಷಿಕ್ತನಾದ ಲಂಕೇಶ್ವರ ವಿಭೀಷಣ ತನ್ನ ಅಣ್ಣ ಅಪಹರಿಸಿದ ಸೀತೆಯನ್ನು ಗೌರವ ಪುರಸ್ಸರವಾಗಿ ರಾಮನಿಗೆ ತಂದೊಪ್ಪಿಸಿದರೇ ಅದು ರಾಮನ ಘನತೆಗೆ ಒಪ್ಪುವುದು. 'ನಾಯಿ ತನ್ನೊಡೆಯನ ಮುಂದೆ ನೆಲದಲ್ಲಿ ಹೊರಳಾಡುತ್ತ ಹೊಟ್ಟೆಮೂತಿಗಳನ್ನು ತೋರಿಸುತ್ತ ಬಾಲ ಅಲ್ಲಾಡಿಸುತ್ತ ಅನ್ನಬೇಡಿದರೆ ಆನೆ ಗಂಭೀರವಾಗಿ ಮಾವುತನನ್ನು ನೋಡುತ್ತ ನಿಂತು ಅವನಾಡುವ ಲಲ್ಲೆ ಮಾತುಗಳನ್ನು ಕೇಳಿಯೆ ಆಹಾರ ಸ್ವೀಕರಿಸುತ್ತದೆ' ಎಂದು ಭರ್ತೃಹರಿ ಹೇಳುತ್ತಾನೆ. ರಾಮ ಹೆಂಡತಿಯ ಬಳಿಗೆ ಓಡುವವನಲ್ಲ. ಗಾಂಭೀರ್ಯದಿಂದ ವೀರೋಚಿತ ರೀತಿಯಿಂದ ಶತ್ರುವಿನ ತಮ್ಮನ ಕೈಯಿಂದಲೆ ಶತ್ರುವಿನಿಂದ ಅಪಹೃತಳಾದ ಭಾರ್ಯೆಯನ್ನು ತರಿಸಿಕೊಂಡ. ಮಡದಿಯಲ್ಲಿ ಪ್ರೇಮವಿದೆ ಎಂದು ಅನುಚಿತ ದೇಶ ಕಾಲಗಳಲ್ಲಿ ಅದನ್ನು ತೋರಿಸಲಿಲ್ಲ. ವಿಭೀಷಣನ ಪಟ್ಟಾಭಿಷೇಕದ ಸಂತೋಷ ಸಮಾರಂಭದ ಸಡಗರದ ವಾತಾವರಣದಲ್ಲಿಯೆ ಸೀತೆಯನ್ನು ಬರ ಮಾಡಿಕೊಂಡು ತನ್ನ ಘನತೆ ಗಾಂಭೀರ್ಯಗಳಿಗೆ ಅನುಗುಣವಾಗಿ ನಡೆದು ಕೊಂಡ, ರಾಮ.

ಮೊದಲಿಗೆ ಹನುಮಂತನ ಮೂಲಕ ರಾಮ ತನ್ನ ವಿಜಯದ ಸಿಹಿ ವಾರ್ತೆಯನ್ನು ಕಳಿಸಿದ. ಅವಳಿಗಿದು ತಿಳಿದಿಲ್ಲವೆಂದಲ್ಲ, ಆನಂದಗೊಳಿಸುವುದಕ್ಕಾಗಿ. 'ಸೀತೆ, ನೀನಿನ್ನೂ ವೈರಿಯ ಮನೆಯಲ್ಲಿ ಬಂಧಿತಳಾಗಿದ್ದೇನೆ ಎಂದು ಅಂದುಕೊಳ್ಳಬೇಡ. ಇಡಿ ಲಂಕೆಯನ್ನು ನಾನೀಗ ವಿಭೀಷಣನ ವಶ ಮಾಡಿದ್ದೇನೆ, ವಿಭೀಷಣ ನಮ್ಮವ, ಅವನ ಮನೆ ನಮ್ಮದು. ನೀನೀಗ ನಮ್ಮ ಸ್ವಂತ ಮನೆಯಲ್ಲಿರುವಿ. ದುಗುಡ ಪಡಬೇಡ. ನಿನ್ನನ್ನು ಕಾಣಲು ತವಕದಿಂದ ನಾನು ಬರುತ್ತೇನೆ'

ಸೀತೆ ಈ ಮಾತು ಕೇಳಿ ಆನಂದದಿಂದ ಮೂಕಳಾದಳು. ಅವಳಿಗೇ ರಾಮನಲ್ಲಿ ತನ್ನ ಬಗ್ಗೆ ಉಪೇಕ್ಷೆಯ ಶಂಕೆ ಬಂದಿಲ್ಲವೆಂದರೆ ನಮಗೇಕೆ ಆ ಶಂಕೆ ?

## ಗುಪ್ತ ವೇದನೆ

ಮುಂದೆ ಹನುಮಂತ ಸೀತೆಯನ್ನು ಕಂಡು ಹಿಂತಿರುಗಿ 'ಪ್ರಭು, ದೇವಿಯನ್ನು ನೋಡಲು ಹೋಗೋಣ' ವೆಂದಾಗ ಮಾತ್ರ ರಾಮನ ವರ್ತನೆ ಬದಲಾಗಿತ್ತು, ಅನಿರೀಕ್ಷಿತವಾಗಿ.

> ಆಗಚ್ಛೇತ್ ಸಹಸಾ ಧ್ಯಾನಂ ಈಷದ್ ಬಾಷ್ಪಪರಿಪ್ಲುತ: ।
> ಸ ದೀರ್ಘಮಭಿನಿ:ಶ್ವಸ್ಯ ಜಗತೀಮವಲೋಕಯನ್ ॥
>
> (ಯು, 114.5)

'ಅನಿರೀಕ್ಷಿತವಾಗಿ ರಾಮ ಆಲೋಚನಾಪರನಾದ, ಕಣ್ಣೀರು ತುಂಬಿಕೊಂಡ, ದೀರ್ಘವಾಗಿ ನಿಟ್ಟುಸಿರಿಟ್ಟು ನೆಲವನ್ನು ದಿಟ್ಟಿಸುತ್ತ ಮಾತನಾಡಿದ' ವಿಭೀಷಣನನ್ನು ಕರೆದು 'ಸೀತೆಯನ್ನು ಸ್ನಾನ ಮಾಡಿಸಿ ಅಲಂಕಾರ ಮಾಡಿಸಿ ಇಲ್ಲಿಗೆ ಕರೆದು ತಾ' ಎಂದ. ಮುಂದೆ ನಡೆದುದೆಲ್ಲ ಸೀತೆಯ ಪಾಲಿಗೆ ಅನ್ಯಾಯದ ಅಪಮಾನದ ಪರಂಪರೆಯೆ, ಈ ಅನಿರೀಕ್ಷಿತ ಬದಲಾವಣೆ. ರಾಮನಲ್ಲಿ ಇದು ಸ್ವಾಭಾವಿಕವಾದುದಲ್ಲ ಎಂದು ಯಾರಿಗಾದರೂ ಅನಿಸದಿರದು. ಲಕ್ಷ್ಮಣ ಸುಗ್ರೀವ ಹನುಮಂತರು ಇದರಿಂದ ಬಹಳ ದುಃಖಿತರಾದರು. ಸೀತೆಗೆ ಸಂದೇಶ ಕಳಿಸುವಾಗಿನ ಮಾರ್ದವ ತಟ್ಟನೆ ಇಷ್ಟೊಂದು ಕಠೋರತೆಯಲ್ಲಿ ಪರಿಣಮಿಸಬೇಕೆಂದರೆ ಇದು ರಾಮನ ನಟನೆ ಎಂಬುದು ಸ್ಪಷ್ಟ. ರಾವಣನ ಮನೆಯಲ್ಲಿ

ವಾಸಮಾಡಿದ ಸೀತೆಯನ್ನು ರಾಮ ಏನೂ ವಿಚಾರಿಸದೆ ಪರೀಕ್ಷಿಸದೆ ಮೋಹ ದಿಂದ ಕರೆದುಕೊಂಡನೆಂದು ಮುಂದೆ ಜನಾಪವಾದ ಬರಕೂಡದೆಂದೆ ಈ ರೀತಿ ನಟಿಸಿದ.

ಈಗ ರಾಮನ ಹೃದಯದೊಳಗೆದ್ದ ತುಮುಲ ಆಂದೋಲನ ಕರುಣಾ ಜನಕವಾದುದು. ಏಕೆಂದರೆ ಸೀತೆ ರಾಮನ ಬಳಿಗೆ ಬಂದು ನಿಂತವಳೆ,

ವಿಸ್ಮಯಾಚ್ಚ ಪ್ರಹರ್ಷಾಚ್ಚ ಸ್ನೇಹಾಚ್ಚ ಪತಿ ದೇವತಾ ।
ಉದೈಕ್ಷತ ಮುಖಂ ಭರ್ತುಃ ಸೌಮ್ಯಂ ಸೌಮ್ಯತರಾನನಾ ॥
(ಯು 114–35)

'ಆನಂದಾಶ್ಚರ್ಯ ಪ್ರೇಮ ಪೂರ್ವಕವಾಗಿ, ತಾನು ದೇವತೆಯೆಂದೆ ತಿಳಿದಿ ರುವ ಪತಿಯ ಸೌಮ್ಯವಾದ ಮುಖವನ್ನು ಕಂಡಳು, ಬಹು ಸೌಮ್ಯ ಮುಖದ ಸೀತೆ,' ಸೀತೆಯೂ ಆನಂದದಿಂದ ಸೌಮ್ಯಳಾಗಿದ್ದಳು. ರಾಮನೂ ಸೌಮ್ಯ ಮುಖದಿಂದಿದ್ದ. ಅನಂತರ ರಾಮ, 'ನೋಡು. ನಾನು ನಿನ್ನನ್ನು ತಿರುಗಿ ಗೆದ್ದು ತಂದೆ. ನನ್ನ ಪೌರುಷ ತೋರಿಸಿದೆ' ಎಂದು ಎಂಟು ಶ್ಲೋಕಗಳಲ್ಲಿ ಹೇಳು ತ್ತಾನೆ, ಹೊರತು, ಸೀತೆಯನ್ನು ಸ್ವೀಕಾರ ಮಾಡುವುದಿಲ್ಲ. ಆಗ ಸೀತೆಯ ಕಣ್ಣಲ್ಲಿ ನೀರೂರಿತು. ಆಗ,

ಪಶ್ಯತ ಸ್ತಾಂ ತು ರಾಮಸ್ಯ ಸಮೀಪೇ ಹೃದಯ ಪ್ರಿಯಾಂ ।
ಜನವಾದ ಭಯಾದ್ರಾಜ್ಞೋ ಬಭೂವ ಹೃದಯಂ ದ್ವಿಧಾ
(ಯು, 115-11)

ಕಣ್ಣಲ್ಲಿ ನೀರು ತುಂಬಿಕೊಂಡು ತನ್ನ ಮುಂದೆ ನಿಂತ ಹೃದಯಪ್ರಿಯೆ ಒಂದು ಕಡೆ. ಮುಂದೆ ಬರಬಹುದಾದ ಜನಾಪವಾದದ ಭಯ ಇನ್ನೊಂದು ಕಡೆ—ರಾಮನ ಹೃದಯ ದೋಲಾಯಮಾನವಾಯಿತು. ಮಾತ್ರವಲ್ಲ, ಇಂಥ ಪ್ರಿಯೆಯನ್ನು ತಾನಿನ್ನು ಜನಾಪವಾದ ಭಯದಿಂದಾಗಿ ಅಗ್ನಿಪರೀಕ್ಷೆಗೊಳಗಾಗಿಸ ಬೇಕೆಂಬ ಆಲೋಚನೆಯಲ್ಲಿ ಹೃದಯ ಒಡೆದು ಇಬ್ಭಾಗವಾಯಿತು, ರಾಮನಿಗೆ. ಇಂಥವ ಹೃದಯ ಶೂನ್ಯನೆಂದರೆ ಹೇಗೆ ? ಮುಂದೆ ತನ್ನ ನಾಟಕದ ಪಾತ್ರ ವನ್ನು ಚೆನ್ನಾಗಿ ಅಭಿನಯಿಸುತ್ತಾನೆ ರಾಮ. 'ನನ್ನ ಕಣ್ಣ ಮುಂದೆ ನೀ ನಿಲ್ಲ ಬೇಡ. ಕಣ್ಣು ಬೇನೆಯವನಿಗೆ ದೀಪವನ್ನು ನೋಡುವಾಗ ಆಗುವ ವೇದನೆ

ನೀನು ನನ್ನ ಮುಂದೆ ನಿಂತರೆ ಆಗುತ್ತದೆ' ಎನ್ನುವಷ್ಟು ಕಠೋರವಾಗಿ ಮಾತನಾಡುತ್ತಾನೆ. ಇವನ್ನು ಆವನ ಅಂತರಂಗದ ಮಾತೆಂದು ತಿಳಿದರೆ ತಪ್ಪಾಗುತ್ತದೆ.

ಕೆಲವು ಪಾಠಗಳಲ್ಲಿ 'ವಿಸ್ಮಯಾಚ್ಚ ಪ್ರಹರ್ಷಾಚ್ಚ' ಎಂದು ಮೇಲೆ ಹೇಳಿದ ಶ್ಲೋಕದ ಹಿಂದಿನ ಶ್ಲೋಕವೆಂದು ಅಧಿಕ ಪಾಠ ಒಂದಿದೆ–

ಸಾ ವಸ್ತ್ರ ಸಂರುದ್ಧ ಮುಖೀ ಲಜ್ಜಯಾ ಜನಸಂಸದಿ ।
ರುರೋದಾಸಾದ್ಯ ಭರ್ತಾರಮಾರ್ಯಪುತ್ರೇತಿ ಭಾಷಿಣೀ ॥

'ಜನಗಳ ನಡುವೆ ಲಜ್ಜೆಯಿಂದ ಮುಖವನ್ನು ಸೆರಗಿನಲ್ಲಿ ಮರೆಸಿಕೊಂಡು ಪತಿಸಮೀಪಕ್ಕೆ ಬಂದು ಆರ್ಯಪುತ್ರ ಎಂದು ಹೇಳಿ ಅಳತೊಡಗಿದಳು'— ಈ ಶ್ಲೋಕ ಪ್ರಕ್ಷಿಪ್ತವಿರಬೇಕು. ಏಕೆಂದರೆ ಅದರ ಮುಂದಿನ ಶ್ಲೋಕದಲ್ಲಿಯೇ ಸೀತೆ ಆನಂದಾಶ್ಚರ್ಯ ಪ್ರೀತಿಪೂರ್ವಕವಾಗಿ ಬಲುಸೌಮ್ಯಮುಖದಿಂದ ಸೌಮ್ಯ ಮುಖದ ರಾಮನನ್ನು ಕಾಣುತ್ತಾಳೆ. ಇದು ಪರಸ್ಪರ ವಿರುದ್ಧ. ವಸ್ತುತಃ ಸೀತೆ ಮೊದಲಿಗೆ ಆನಂದಾಶ್ಚರ್ಯಗಳಿಂದ ರಾಮನನ್ನು ಕಂಡಳು. ರಾಮ 'ನಿನ್ನನ್ನು ತಿರುಗಿ ಗೆದ್ದು ತಂದುದಾಯಿತು, ನನ್ನ ಕೆಲಸ ಮುಗಿಯಿತು' ಎನ್ನುತ್ತಾನೆ. 'ನಿನ್ನನ್ನು ಸ್ವೀಕರಿಸಬೇಕಾಗಿಲ್ಲ' ಎಂದು ಹೇಳದಿದ್ದರೂ ಹೇಳಿದಂತೆಯೆ ಆಯಿತೆಂದು ಸೀತೆ ಕಣ್ಣಲ್ಲಿ ನೀರುತುಂಬಿಕೊಳ್ಳುತ್ತಾಳೆ. ಆಗ ಅದನ್ನು ನೋಡಿ ರಾಮನಿಗೆ ತಡೆಯದಾಯಿತು. ಹೃದಯದಲ್ಲಿ ಆಂದೋಲನವೆದ್ದಿತು, ಶೋಕದಿಂದ ಹೃದಯ ಒಡೆಯಿತು.

'ಸಾ ವಸ್ತ್ರಸಂರುದ್ಧಮುಖೀ' ಎಂಬ ಮೇಲಿನ ಶ್ಲೋಕಕ್ಕೆ ಯಾವ ವ್ಯಾಖ್ಯಾನಕಾರರೂ ವ್ಯಾಖ್ಯಾನ ಬರೆದಿಲ್ಲ. ಆದ್ದರಿಂದ ಅದನ್ನು ಬಿಟ್ಟರೆ ಬಾಧಕವಿಲ್ಲ.

'ಪಶ್ಯತಸ್ತಾಂ ತು ರಾಮಸ್ಯ ಸಮೀಪೇ ಹೃದಯಪ್ರಿಯಾಂ'

ಎಂದು ಮುಂತಾಗಿ ಎರಡು ಶ್ಲೋಕಗಳ ಬದಲಿಗೆ,

'ಪಶ್ಯತಸ್ತಾಂ ತು ರಾಮಸ್ಯ ಭೂಯಃ ಕ್ರೋಧೋ ವ್ಯವರ್ಧತ ।
ಪ್ರಭೂತಾಜ್ಯಾವಸಿಕ್ತಸ್ಯ ಪಾವಕಸ್ಯೇವ ದೀಪ್ಯತಃ ।

ಸ ಬದ್ಧಾ ಭ್ರುಕುಟೀಂ ವಕ್ತ್ರೇ ತಿರ್ಯಕ್ ಪ್ರೇಕ್ಷಿತ ಲೋಚನಃ
ಅಬ್ರವೀತ್ ಪರುಷಂ ಸೀತಾಂ ಮಧ್ಯೇ ವಾನರ ರಕ್ಷಸಾಂ ॥

'ಅಳುತ್ತಿರುವ ಸೀತೆಯನ್ನು ಸಮೀಪದಲ್ಲಿ ನೋಡಿದೊಡನೆ ರಾಮನ ಕೋಪ ಇನ್ನಷ್ಟು ಹೆಚ್ಚಿತು. ಬೆಂಕಿಗೆ ತುಪ್ಪ ಹಾಕಿದಂತಾಯಿತು. ಹುಬ್ಬು ಗಂಟಿಕ್ಕಿ ಓರೆಗಣ್ಣಿಂದ ಆಕೆಯನ್ನು ನೋಡುತ್ತಾ ಕಠೋರ ನುಡಿಗಳನ್ನಾಡಿದನು.' – ಈ ಶ್ಲೋಕಗಳನ್ನು ಒಂದು ವ್ಯಾಖ್ಯಾನ ತೆಗೆದುಕೊಂಡಿದ್ದರೂ ಉಳಿದುವು ಕೈಬಿಟ್ಟು 'ಪಶ್ಯತಸ್ತಾಂ ತು ರಾಮಸ್ಯ ಸಮೀಪೇ ಹೃದಯಪ್ರಿಯಾಂ' ಎಂದುಮುಂತಾದ ಎರಡು ಶ್ಲೋಕಗಳನ್ನೆ ತೆಗೆದುಕೊಂಡು ವ್ಯಾಖ್ಯಾನಿಸಿವೆ. ಅಳುತ್ತಿರುವ ಜಾನಕಿಯನ್ನು ನೋಡಿದೊಡನೆ ರಾಮನಿಗೆ ಕೋಪ ಹೆಚ್ಚಾಗಲು ಕಾರಣವಿಲ್ಲ ತಾನೇ ! 'ನಾ ನಿನ್ನನ್ನು ಬಿಟ್ಟಿದ್ದೇನೆ, ಎಲ್ಲಾದರೂ ಹೋಗು' ಎಂದು ರಾಮ ಇನ್ನೂ ಹೇಳಿಲ್ಲದಿರುವಾಗ ಆಕೆ ಕಣ್ಣೀರು ಸುರಿಸುತ್ತ ನಿಂತರೆ ತಪ್ಪೆ ? ರಾಮ ಹಾಗೆ ಹೇಳಿದ ಮೇಲೆ ಮಾತ್ರ ತಡಮಾಡದೆ ಸೀತೆ ಅಗ್ನಿಪ್ರವೇಶಕ್ಕೆ ಅಣಿಯಾದಳು, ಕಣ್ಣೀರು ಸುರಿಸುತ್ತ ಸುಮ್ಮನೆ ನಿಲ್ಲಲಿಲ್ಲ.

ಹೀಗೆ ಅಗ್ನಿಪರೀಕ್ಷೆಯಲ್ಲಾಗಲಿ ಸೀತಾ ಪರಿತ್ಯಾಗದಲ್ಲಾಗಲಿ ರಾಮ ಹೃದಯಶೂನ್ಯನಾಗಿರಲಿಲ್ಲ, ಹಾಗೆ ನಟಿಸಿದ.

'ಅಪ್ಯಹಂ ಜೀವಿತಂ ಜಹ್ಯಾಂ ತ್ವಾಂ ವಾ ಸೀತೇ ಸಲಕ್ಷ್ಮಣಾಂ'
(ಅರ 10–18)

ಎಂದು ಮುಂತಾಗಿ ರಾಮ ಸೀತೆಯನ್ನು ತಾನು ಸುಲಭವಾಗಿ ಬಿಡಬಲ್ಲೆನೆಂದು ಪದೇಪದೇ ಹೇಳುವುದನ್ನು ಕಂಡು ಸೀತಾಪರಿತ್ಯಾಗದಲ್ಲಿ ಆತ ಮನಃಪೂರ್ವಕವಾಗೇ ನಡೆದುಕೊಂಡನೆಂದು ಊಹಿಸುವುದು ತಪ್ಪಾಗುತ್ತದೆ. ಜಾಣನಾದ ವರಕವಿ ವಾಲ್ಮೀಕಿ ತಾನು ಕಣ್ಣಾರೆ ಕಂಡಿರುವ ಸೀತಾಪರಿತ್ಯಾಗವೆ ರಾಮಾಯಣದಲ್ಲಿ ಮುಖ್ಯವಾದ ಕಾವ್ಯಾರ್ಥವೆಂದು ಸೂಚಿಸುವುದಕ್ಕಾಗಿಯೆ ಅಂಥ ಮಾತನ್ನು ರಾಮನ ಬಾಯಿಂದ ಆಡಿಸಿದ್ದಾನೆ. ಮೇಲಿನ ಮಾತಿನಲ್ಲಿ 'ಜೀವಿತವನ್ನೇ ತೊರೆದೇನು, ಸೀತೆ, ನಿನ್ನನ್ನೂ ತೊರೆದೇನು, ಲಕ್ಷ್ಮಣನನ್ನೂ ತೊರೆದೇನು,' ಎಂದುದೆಲ್ಲ ಅಕ್ಷರಶಃ ನಿಜವಾಯಿತು ! ರಾಮ ಸೀತೆಯನ್ನೂ

ಪರಿತ್ಯಾಗ ಮಾಡಿದ, ಲಕ್ಷ್ಮಣನನ್ನೂ ಪರಿತ್ಯಜಿಸಿದ, ಮಹಾಪ್ರಸ್ಥಾನ ಮಾಡಿ ಈ ಲೋಕವನ್ನೂ ತೊರೆದ.

ಸ್ನೇಹಂ ದಯಾಂ ಚ ಸೌಖ್ಯಂ ಚ ಯದಿವಾ ಜಾನಕೀಮಪಿ ।
ಆರಾಧನಾಯ ಲೋಕಸ್ಯ ಮುಂಚತೋ ನಾಸ್ತಿಮೇ ವ್ಯಥಾ ॥

'ಲೋಕಾರಾಧನೆಗಾಗಿ ಸ್ನೇಹ ದಯೆ ಸೌಖ್ಯಗಳನ್ನಾಗಲಿ, ಏಕೆ ಜಾನಕಿಯನ್ನಾಗಲಿ ಬಿಡುತ್ತೇನೆ, ನನಗೇನೂ ವ್ಯಥೆ ಇಲ್ಲ' ಎಂದು ಹೇಳುವ ಭವಭೂತಿಯ ರಾಮನೂ ನಿಷ್ಕರುಣಿ ಹೃದಯ ಶೂನ್ಯನೆ ?

ವಸ್ತುತಃ; ವಾಲ್ಮೀಕಿಯ ರಾಮ ಸೀತೆಯನ್ನು ಬಿಡುವ ಮಾತನ್ನು ಹೇಳುವಾಗಲೆಲ್ಲ ಜೊತೆಗೆ ತನ್ನ ಪ್ರಾಣವನ್ನೂ ಬಿಡಬಲ್ಲೆನೆನ್ನುವುದನ್ನು ಗಮನಿಸಬೇಕು. ಸೀತಾ ಪರಿತ್ಯಾಗ ರಾಮನಿಗೆ ಪ್ರಾಣತ್ಯಾಗಕ್ಕೆ ಸಮಾನ.

ಯಾರೊ ಒಬ್ಬ ಅಗಸ ಸಲ್ಲದ ಮಾತಾಡಿದನೆಂದು ರಾಮ ಸೀತೆಯನ್ನು ತೊರೆಯಲಿಲ್ಲ. ವಾಲ್ಮೀಕಿ ಹಾಗನ್ನುವುದಿಲ್ಲ. ಬೀದಿಬೀದಿಗಳಲ್ಲಿ ವನ ಉಪವನ ನಗರಗಳಲ್ಲೆಲ್ಲ ಸಾಮೂಹಿಕವಾಗಿ ಜನರಾಡುವಂತಾಯಿತು (ಉ. 43–20) ಏನು ಮಾಡಬೇಕು ರಾಮ ? ರಾಜನಾದವನು ಪ್ರಜೆಗಳಿಗೆ ತನ್ನ ಮುಖ ತೋರಿಸಿಕೊಂಡು ಸಿಂಹಾಸನದಲ್ಲಿ ಹೇಗೆ ಕುಳಿತಿರಬಲ್ಲ ? 'ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ' ಅಪಕೀರ್ತಿ ಮರಣಕ್ಕಿಂತ ಹೆಚ್ಚು ನೋವು ತರುವಂಥದ್ದು. ಅಲ್ಲದೆ,

ಅಕೀರ್ತಿರ್ಯಸ್ಯ ಗೀಯೇತ ಲೋಕೇ ಭೂತಸ್ಯ ಕಸ್ಯ ಚಿತ್ ।
ಪತತ್ಯೇವಾಧಮಾನ್ ಲೋಕಾನ್ ಯಾವಚ್ಛಬ್ದಃ ಪ್ರಕೀರ್ತ್ಯತೇ ॥
(ಉ. 45–12)

'ಅಪಕೀರ್ತಿ ಇರುವಷ್ಟು ಕಾಲ ನರಕ ತಪ್ಪಿದ್ದಲ್ಲ.' ಆದ್ದರಿಂದ ಅಪಕೀರ್ತಿ ನಿವಾರಣೆ ಒಂದು ಕರ್ತವ್ಯ ಧರ್ಮ. 'ಯಥಾ ರಾಜಾ ತಥಾ ಪ್ರಜಾ' ಎಂಬಂತೆ ರಾಜನಾದವನು ಪ್ರಜೆಗಳಿಗೆ ಈ ಧರ್ಮವನ್ನು ಆಚರಿಸಿ ತೋರಿಸಬೇಕು, ಮಾದರಿಯಾಗಬೇಕು. ಇಲ್ಲದಿದ್ದಲ್ಲಿ ಪ್ರಜೆಗಳು ಅಪಕೀರ್ತಿಗೆ ಹೆದರದೆ ಅಕಾರ್ಯಪರರಾಗಿ ಕೆಟ್ಟು ಹೋದಾರು. ಆದ್ದರಿಂದ ಸತ್ಯ ಹರಿಶ್ಚಂದ್ರನಂತೆ

ಸಹಧರ್ಮಿಣಿಯನ್ನು ಬಿಡಲು ಸಿದ್ಧನಾಗಬೇಕು. ಮಹಾಭಾರತದ ದುಷ್ಯಂತ ಶಕುಂತಲೆಯನ್ನು ಬಿಟ್ಟಂತೆ ರಾಮನೂ ಸೀತೆಯನ್ನು ಬಿಟ್ಟಿದ್ದಾನೆ. ದುಷ್ಯಂತನು ಶಕುಂತಲೆಯನ್ನು ಜನಾಪವಾದ ಬರಬಹುದೆಂಬ ಭೀತಿಯಿಂದ ಬಿಟ್ಟವನು. ರಾಮನೂ ಅಪವಾದ ಬಂದಿತೆಂದೆ ಬಿಟ್ಟಿದ್ದಾನೆ.

ಕಾಳಿದಾಸನ ದುಷ್ಯಂತ ದೂರ್ವಾಸ ಶಾಪದ ಪ್ರಭಾವದಿಂದ ಶಕುಂತಲೆಯನ್ನು ಮರೆತು ಬಿಟ್ಟನೆಂದು ಅದು ಕ್ಷಮ್ಯವಾದರೆ, ರಾಮನೂ ಭೃಗುಶಾಪ ಪ್ರಯುಕ್ತ ಪರವಶನಾಗಿ ಸೀತಾ ಪರಿತ್ಯಾಗದ ನಿರ್ಧಾರಕ್ಕೆ ಬಂದ. ಈ ಶಾಪದ ಪ್ರಸಂಗ ರಾಮಾಯಣದಲ್ಲಿಯೆ ಬಂದಿದೆ (ಉ. 51)

ಸಹಧರ್ಮಿಣಿಯನ್ನು ಮಾರುವುದು, ಪರಿತ್ಯಾಗ ಮಾಡುವುದು ತಪ್ಪಲ್ಲವೆ, ಹರಿಶ್ಚಂದ್ರ ದುಷ್ಯಂತ ಮೊದಲಾದವರು ಮಾಡಿದರೆಂದು ರಾಮನೂ ಮಾಡಿದರೆ ಸರಿಯಾಗುತ್ತದೆಯೆ ? ಎಂದರೆ ರಾಮನಿಗೆ ವಿಶ್ವಾಮಿತ್ರರ ಉಪದೇಶ ಹೀಗಿದೆ—

ನೃಶಂಸಮನೃಶಂಸಂ ವಾ ಪ್ರಜಾರಕ್ಷಣಕಾರಣಾತ್ ।
ಪಾತಕಂ ವಾ ಸದೋಷಂ ವಾ ಕರ್ತವ್ಯಂ ರಕ್ಷತಾ ಸದಾ
ರಾಜ್ಯಭಾರನಿಯುಕ್ತಾನಾಮೇಷ ಧರ್ಮ : ಸನಾತನ :
(ಬಾಲ. 25–18)

'ಪ್ರಜೆಗಳ ಹಿತಕ್ಕಾಗಿ ಎಂಥ ಅಧರ್ಮವನ್ನಾದರೂ ರಾಜನಾದವನು ಮಾಡಬೇಕಾಗುತ್ತದೆ. ಅದು ರಾಜನಿಗೆ ವಿಶೇಷ ಧರ್ಮ' ಬ್ರಾಹ್ಮಣನಾದ ರಾವಣನನ್ನು ರಾಮ ಕೊಂದುದು ಲೋಕ ಹಿತಕ್ಕಾಗಿ. ಸ್ತ್ರೀಯಾದ ಲಾಟಕೆಯನ್ನು ಕೊಂದುದೂ ಲೋಕಹಿತಕ್ಕಾಗಿ, ನಿರಪರಾಧಿನಿಯಾದ ಮಡದಿಯನ್ನು ತೊರೆದುದೂ ಲೋಕದ ಸಮಾಧಾನಕ್ಕಾಗಿ, ಒಳ್ಳೆಯದಕ್ಕಾಗಿ.

## ರಾಮ ಸೀತೆಗೇನಾಗಬೇಕು ?

ರಾಮ ಸೀತೆಯನ್ನು ಸದಾ ದೇವತೆಯಂತೆ ರಮಿಸಿದವನು. ಪೂರ್ವಾಹ್ಣದಲ್ಲಿ ರಾಜಕಾರ್ಯದಲ್ಲಿದ್ದು ಅಪರಾಹ್ಣವೆಲ್ಲ ಅಂತಃಪುರದಲ್ಲಿರುತ್ತಿದ್ದವನು

(ಉ. 42–27) ಸೀತೆಯ ವಿರಹದಲ್ಲಿ ರಾಮ ಅಗ್ನಿ ಪರ್ವತದಂತೆ ತನ್ನೊಳಗಿನ ಶೋಕಾಗ್ನಿಯಿಂದ ವಿಚಲಿತನಾಗುತ್ತಿದ್ದ. ಭೂಕಂಪದಿಂದ ಬೆಟ್ಟ ಅದುರುವಂತೆ ನಡುಗುತ್ತಿದ್ದ (ಸು. 35–45, 47) ಮೈಮೇಲೆ ಕುಳಿತುಕೊಳ್ಳುವ ನೊಣ ಸೊಳ್ಳೆ ಕೀಟಗಳನ್ನು ಓಡಿಸುತ್ತಿದ್ದಿಲ್ಲ. ಮೈಮೇಲೆ ಹಾವು ಹರಿದರೂ ಸರಿಸುತ್ತಿರಲಿಲ್ಲ. ಸದಾ ಧ್ಯಾನಪರ. ಶೋಕಪರ. ನಿದ್ದೆ ಇಲ್ಲ. ನಿದ್ದೆಯಲ್ಲಿಯೂ 'ಸೀತೆ' ಎನ್ನುತ್ತ ಎದ್ದೇಳುತ್ತಿದ್ದ. ಹೂಗಳನ್ನಾಗಲಿ, ಹಣ್ಣುಗಳನ್ನಾಗಲಿ, ವೃಕ್ಷಲತೆಗಳನ್ನಾಗಲಿ ಉನ್ಮತ್ತನಂತೆ 'ಸೀತೆ!' ಎಂದು ಸಂಬೋಧಿಸುತ್ತಿದ್ದ (ಸುಂ. 36–42, 45)

ಸೀತೆಗೂ ರಾಮನ ಬಗ್ಗೆ ಅಮಿತವಾದ ಆಕರ್ಷಣೆ ಕಾರಣ ಅವಳೇ ಹೇಳುತ್ತಾಳೆ—'ಸರ್ವ ಲಕ್ಷಣ ಸಂಪನ್ನ, ನ್ಯಗ್ರೋಧಪರಿಮಾಣದವ, ಮಹಾಬಾಹು, ವಿಶಾಲ ಎದೆಯವ, ಸಿಂಹದಂಥ ನಡಿಗೆಯವ (ಅರ. 47–34) ಜಿತೇಂದ್ರಿಯ, ಸ್ಥಿರವಾದ ಅನುರಾಗ ಉಳ್ಳವ, ಧರ್ಮಾತ್ಮ, ತಂದೆ ತಾಯಿಗಳಂತೆ ನನ್ನನ್ನು ನೋಡಿಕೊಳ್ಳುವವ' (ಅಯೋ. 118–4) ಇಲ್ಲಿ 'ರಾಮ ಸೀತೆಗೆ ತಂದೆತಾಯಿಗಳಂತಾಗುತ್ತಾನೆ' ಎಂದರೆ ಇದನ್ನು ಅಪಾರ್ಥ ಮಾಡಿಕೊಂಡು,

'ಕಾಮ ಪ್ರವೃತ್ತಿಯೆ ಇಲ್ಲದಿರಬಹುದಾದ, 'ತಂದೆ'ಯಂತಹ ಕಾಮವಿಲ್ಲದ ಪ್ರೇಮ ರಾಮನಿಗೆ ಸೀತೆಯಲ್ಲಿ'

ಎಂದು ಗ್ರಹಿಸಿದರೆ ತಪ್ಪಾಗುತ್ತದೆ. ಚಂದ್ರವದನೆ ಎಂದರೆ ಚಂದ್ರನಂತೆ ಮುಖದಲ್ಲಿ ಕಲೆ ಇರುವ ಕುರೂಪಿ ಹೆಂಗಸು ಎಂದರ್ಥವಲ್ಲ. ಆರು ವರ್ಷದ ಹಸುಳೆ ಸೀತೆ ರಾಮನ ವಧುವಾಗಿ ಅಯೋಧ್ಯೆಗೆ ಬಂದಾಗ ಅವಳಿಗೆ ತವರಿನ ಯೋಚನೆಯಾಗದಂತೆ ನೋಡಿಕೊಂಡವ ರಾಮ. ಆಕೆಗೆ ಪತಿಗೃಹದಲ್ಲಿಯೆ ತವರಿನ ಆನಂದವೂ ಸಿಗಬೇಕು. ಪತಿ ಪತ್ನಿಯನ್ನು ಕೇವಲ ಭೋಗವಸ್ತುವೆಂದು ತಿಳಿಯಬಾರದು.

ಕಾರ್ಯೇಷು ದಾಸೀ ಕರಣೇಷು ಮಂತ್ರೀ
ರೂಪೇಚ ಲಕ್ಷ್ಮೀ ಕ್ಷಮಯಾ ಧರಿತ್ರೀ ॥

ಭೋಜ್ಯೇಷು ಮಾತಾ ಶಯನೇಷು ವೇಶ್ಯಾ
ಷಾಡ್ಗುಣ್ಯಯುಕ್ತಾ ಕುಲ ಧರ್ಮಪತ್ನೀ ॥

ಎಂಬಂತೆ ಪತಿಗೆ ಪತ್ನಿ, ದಾಸಿ ಮಂತ್ರಿ ಮಾತೆ ವೇಶ್ಯೆ ಎಲ್ಲವೂ ಹೇಗೆ ಆಗಿರಬೇಕೊ ಹಾಗೇ ಪತ್ನಿಗೆ ಪತಿಯೂ ತಾಯಿ ತಂದೆ ಪ್ರಿಯತಮ ಎಲ್ಲವೂ ಆಗಬೇಕು. ಜಿತೇಂದ್ರಿಯನಾಗಿದ್ದು ಪರಸ್ತ್ರೀಯರನ್ನು ಬಯಸದಿರಬೇಕು. ಪತ್ನಿಯಲ್ಲಿಯೆ ಸ್ಥಿರ ಅನುರಾಗ ಉಳ್ಳವನಾಗಬೇಕು. ಇಂಥ ಗುಣಗಳೆಲ್ಲ ರಾಮನಲ್ಲಿ ಇವೆ ಎಂದು ಹೆಮ್ಮೆಯಿಂದ ಸೀತೆ ಅನಸೂಯೆಗೆ ಹೇಳುತ್ತಿದ್ದಾಳೆ, ಮೇಲಿನ ಶ್ಲೋಕದಲ್ಲಿ.

ರಾಮನ ದೇಹ ಸೌಂದರ್ಯವನ್ನು ವಾಲ್ಮೀಕಿ 'ರೂಪೌದಾರ್ಯಗುಣೈಃ ಪುಂಸಾಂ ದೃಷ್ಟಿ ಚಿತ್ತಾಪಹಾರಿಣಂ' (ಅಯೋ 3–29) 'ರೂಪ ಔದಾರ್ಯ ಗುಣಗಳಿಂದ ಪುರುಷರ ಕಣ್ಮನಗಳನ್ನು ಸೆಳೆಯುವವನು' ಎಂದಾಗ 'ಪುಂಸಾಂ' ಶಬ್ದಕ್ಕೆ ಮನುಷ್ಯ, ಮನುಷ್ಯ ಜಾತಿ ಎಂದು ಅರ್ಥ ಕೋಶದಲ್ಲಿಯೂ ಪ್ರಯೋಗದಲ್ಲಿಯೂ ಇರುತ್ತಿದ್ದರೂ ಗಂಡು ಎಂಬ ಅರ್ಥವನ್ನೆ ತೆಗೆದುಕೊಂಡು ರಾಮನ ದೇಹ ಸೌಂದರ್ಯ ಗಂಡಸಿಗೆ ಮಾತ್ರ ಆಕರ್ಷಕ. ಸ್ತ್ರೀಯರಿಗೆ ಆಕರ್ಷಕವಲ್ಲ ಎಂದು ಟೀಕಿಸುವುದು ಬರಿಯ ಆಗ್ರಹವೆ ಸರಿ. ಸ್ತ್ರೀ ಪುರುಷ ಭೇದವಿಲ್ಲದೆ ಮನುಷ್ಯ ಜಾತಿಗೇ ಆಕರ್ಷಕವಾದುದು ರಾಮನ ರೂಪ ಸೌಂದರ್ಯ ಎನ್ನಬೇಕು. 'ನರಪತಿ' ಎಂದರೆ, ರಾಜನಾದವನು ನರರಿಗೆ ಮಾತ್ರ ರಾಜ. ನಾರಿಯರಿಗೆ ರಾಜನೆ ಅಲ್ಲ ಎನ್ನುವುದೆ ?

'ಪುಂಸಾಂ' ಎಂದರೆ ಗಂಡಸರೆಂದೆ ಅರ್ಥ ಇಟ್ಟುಕೊಂಡರೂ ಶ್ಲೋಕಕ್ಕೆ ಹೀಗೆ ಅಭಿಪ್ರಾಯ ಹೇಳಬಹುದು—ರಾಮನ ಶರೀರ ಸೌಂದರ್ಯವನ್ನು ಗಂಡಸರು ಕಂಡಾಗಲೆಲ್ಲ ತಾವೇಕೆ ಹೆಂಗಸಾಗಿರಬಾರದಿತ್ತು ? ಆಗ ಇನ್ನಷ್ಟು ಸ್ವಾರಸ್ಯ ಪೂರ್ಣವಾಗಿ ರಾಮನ ದರ್ಶನ ಸುಖ ಅನುಭವಿಸಬಹುದಿತ್ತು ಎಂದು ಅವರು ಅಂದುಕೊಳ್ಳುತ್ತಿದ್ದರು. ಮಹಾಭಾರತದಲ್ಲಿ ದ್ರೌಪದಿಯ ಶರೀರ ಸೌಂದರ್ಯವನ್ನು ಇದೇ ರೀತಿ ವರ್ಣಿಸಿದುದು ಕಂಡುಬರುತ್ತದೆ—

ಪಾಂಚಾಲ್ಯಾ : ಪದ್ಮಪತ್ರಾಕ್ಷ್ಯಾ ; ಸ್ನಾಯಂತ್ಯಾ ಜಘನಂ ಘನಂ
ಯಾಃಸ್ತ್ರಿಯೋ ದೃಷ್ಟವತ್ಯಸ್ತಾಃ ಪುಂಭಾವಂ ಮನಸಾ ಯಯುಃ ॥

ಸ್ನಾನ ಮಾಡಿಸುವ ಕಾಲದಲ್ಲಿ ದ್ರೌಪದಿಯ ಶರೀರದ ಸೌಂದರ್ಯ ಕಂಡ ರಾಣೀವಾಸದ ಸ್ತ್ರೀಯರು ತಾವು ಗಂಡಸಾಗಿರುತ್ತಿದ್ದರೆ ! ಎಂದುಕೊಳ್ಳುತ್ತಿದ್ದರಂತೆ !

ವಸ್ತುತಃ ಪುಮಾನ್ ಪುರುಷ ಎಂದೆಲ್ಲ ಶಬ್ದಗಳು ಸಾಧಾರಣವಾಗಿ 'ಆತ್ಮ' 'ಜೀವ' ಎಂಬ ಅರ್ಥದಲ್ಲಿ 'ಪುರುಷ-ಪ್ರಕೃತಿ' ಎಂದು ಮುಂತಾದೆಡೆ ಪ್ರಸಿದ್ಧವಾಗಿವೆ. ದೇವ ಮಾನವ ದಾನವ ಪಶು ಪಕ್ಷಿ ಮೃಗಗಳೆಂಬ ಭೇದವಿಲ್ಲದೆ ಪ್ರತಿಯೊಂದು ಜೀವಿಯೂ ರಾಮನನ್ನು ಕಂಡರೆ ಅವನ ರೂಪಕ್ಕೆ ಮಾರುಹೋಗುತ್ತದೆ ಎಂದು ಅಭಿಪ್ರಾಯ.

'ರಮತಾಂ ವರ'ನೆಂದು ರಾಮನಿಗೆ ಬಿರುದು. ರಾಮನ ದರ್ಶನ ಯಾರು ಮಾಡುವುದಿಲ್ಲ, ಯಾರನ್ನು ರಾಮ ನೋಡುವುದಿಲ್ಲ ಇವರಿಬ್ಬರೂ ಹೀನಮಾನವರು. ಯಾರು ಬೇಕಾದರೂ ಅವರನ್ನು ನಿಂದಿಸಬಹುದು, ಏಕೆ, ಅವರು ತಮ್ಮನ್ನು ತಾವೇ ಅಯೋಗ್ಯರೆಂದು ನಿಂದಿಸಿಕೊಳ್ಳುವರು. (ಅಯೋ. 17-14) ಸೀತೆ ರಾಮನನ್ನು 'ರಮಿಸುವವರಲ್ಲೆಲ್ಲ ಉತ್ತಮ'ನೆಂದು ಪದೇ ಪದೇ ಅಭಿಮಾನದಿಂದ ಹೇಳುತ್ತಾಳೆ. (ಉ–42–22, ಉ–46-31) ಆದ್ದರಿಂದಲೇ ತನಗೂ ರಾಮನಿಗೂ ಇರುವ ಪ್ರೇಮಾನುಬಂಧ ಸೂರ್ಯನಿಗೂ ಅವನ ಪ್ರಭೆಗೂ ಇರುವಂಥದ್ದು, ಅಷ್ಟು ಗಾಢವಾದುದು (ಸುಂ. 21-15) ಎನ್ನುತ್ತಾಳೆ. ರಾಮನೂ ಈ ಮಾತನ್ನೇ ಸೀತೆಯ ಬಗ್ಗೆ ಹೇಳುತ್ತಾನೆ. (ಉ 118-19)

## ಸೀತಾರಾಮರ ಮಧುರ ದಾಂಪತ್ಯ

'ರಾಮಸೀತೆಯರ ದಾಂಪತ್ಯ ಅಯೋಧ್ಯೆಯಲ್ಲಿ ಸಂತಾನದಲ್ಲಿ ಫಲಿಸಿದಂತೆ ಕಾಣುವುದಿಲ್ಲ. ಆ ಸಮಯದಲ್ಲಿ ಆಗಲೇ ಭರತನಿಗೆ ಒಂದು ಮಗುವಾಗಿದ್ದಂತೆ ಸೂಚನೆ ಇದೆ. ಆದ್ದರಿಂದ ರಾಮನಿಗೆ ಹೆಣ್ಣಿನ ಬಗ್ಗೇ ಉಪೇಕ್ಷೆ ಇರಬಹುದು'

ಎಂದು ಶಂಕಿಸುವುದು ಸರಿಯಲ್ಲ. ಮೊದಲಿಗೆ ಸೀತೆಯ ವಯಸ್ಸನ್ನು ಆಲೋಚಿಸಬೇಕು. ಆರುವರ್ಷದ ಮಗುವಿಗೆ ವಿವಾಹವಾಗಿತ್ತು. ಹದಿನೆಂಟರ ಹರೆಯದಲ್ಲಿಯೇ ವನವಾಸ ಪ್ರಾರಂಭ. ಮುಂದೆ ಹತ್ತು ಸಾವಿರ ವರ್ಷಗಳು

ಬಾಳಿದವಳು. ಹದಿನೆಂಟು ವಯಸ್ಸಿನೊಳಗೇ ಮಕ್ಕಳನ್ನು ಹೆರುವುದು ಸಂಭವವೆ ? ಅಯೋಧ್ಯೆಯಲ್ಲಿ ಸೀತಾರಾಮರಿದ್ದ ಕಾಲದಲ್ಲಿ ಲಕ್ಷ್ಮಣ ಭರತ ಶತ್ರುಘ್ನರಿಗಾರಿಗೂ ಮಕ್ಕಳಾಗಿರಲಿಲ್ಲ. ರಾಮನಲ್ಲೇನು ವಿಶೇಷ ? ಭರತನಿಗೆ ಮಗುವಾಗಿದ್ದಂತೆ ಸೂಚನೆ ರಾಮಾಯಣದಲ್ಲಿಲ್ಲ. ಚಿತ್ರಕೂಟಕ್ಕೆ ಭರತ ಬಂದಾಗ ರಾಮ ಅವನನ್ನು ಕೇಳುವ ಕ್ಷೇಮಸಮಾಚಾರಗಳಲ್ಲಿ ಇದೂ ಒಂದು– 'ನಿನ್ನ ದಾಂಪತ್ಯ ಜೀವನ ಸಫಲವಾಗಿದೆ ತಾನೇ ?'. ದಾಂಪತ್ಯದ ಫಲ ಸುಖ ಮತ್ತು ಸಂತಾನ. ಸಂತಾನವಾಗಿದ್ದರೆ ಪ್ರತ್ಯಕ್ಷ ಕಾಣುತ್ತಿತ್ತು. ಸುಖ ಇದೆ ತಾನೆ ಎಂಬುದೆ ಪ್ರಶ್ನೆ, ವಿರಸವೇನಿಲ್ಲವಲ್ಲ ಎಂದು. ಅಂದರೆ, ಸತಿಪತಿಯರು ಅನ್ಯೋನ್ಯವಾಗಿರಬೇಕೆಂದು ರಾಮ ಉಪದೇಶಿಸುತ್ತಿದ್ದಾನೆ. ತಾನು ಆ ಉಪದೇಶಕ್ಕೆ ಸರಿಯಾಗಿ ಇಲ್ಲದಿರಬಹುದೇ ? ಗೃಹಸ್ಥನ ಧರ್ಮವೆ ಅದು.

> ಕಾಮನಾಪೂರಣಾತ್ ಸ್ತ್ರೀಣಾಂ ಧರ್ಮ; ಸ್ಯಾದನ್ಯಥಾನ್ಯಥಾ ।
> ದೋಷಾಭಾವೇ ವೃಷಸ್ಯಂತೀಂ ಸ್ವಪತ್ನೀಂ ಯೋಽವಮಾನಯೇತ್ ॥
>
> ವಿಷ್ಠಾಕ್ರಮಿಃ ಸ ಜಾಯೇತ ಸ್ತ್ರೀಹೀನೋ ಜನ್ಮಜನ್ಮನಿ :
> ಭಾವಂ ವಿತರ್ಕಯೇತ್ ಸ್ತ್ರೀಣಾಂ ತತೋ ಭುಂಜೀತ ತಾ ಪುಮಾನ್ ॥
>
> ವೃಥಾ ರೋಷಂ ನ ಕುರ್ವೀತ ವೃಥಾ ಕಾಮಂ ನ ವರ್ಜಯೇತ್ ।
> ನಾನುರಕ್ತಾಂ ವಿರಜ್ಯೇತ ಧರ್ಮಿಷ್ಠಾಂ ಚ್ಯಾವಯೇನ್ನ ತು ॥
>
> ಸಾಂತ್ವಪೂರ್ವಂ ಸದಾ ಬ್ರೂಯಾತ್ ನ ಸ್ತ್ರೀಮುದ್ವೇಜಯೇತ್ ಕ್ವಚಿತ್ ।
> ಸಾಪರಾಧಾಮಪಿ ಸ್ತ್ರೀಂ ನೋ ಹನ್ಯಾದ್ಧನ್ ಪತಿತೋ ಭವೇತ್ ॥

"ಗೃಹಸ್ಥನು ತನ್ನ ಮಡದಿಯ ಪ್ರಣಯಾಭಿಲಾಷೆಯನ್ನು ಪೂರೈಸುವುದು ಅವನ ಧರ್ಮ. ಪೂರೈಸದಿರುವುದು ಅಧರ್ಮ. ನಿಷಿದ್ಧ ದೇಶ ಕಾಲಗಳಲ್ಲಿ ಹೊರತು ಅವಳ ಬಯಕೆಯನ್ನು ತಿರಸ್ಕರಿಸಿದರೆ ಜನ್ಮಜನ್ಮಗಳಲ್ಲಿಯೂ ಮಡದಿಯ ಸುಖದಿಂದ ವಂಚಿತನಾಗಿ ಮಲದಲ್ಲಿ ಕ್ರಿಮಿಯಾಗಿ ಹುಟ್ಟುತ್ತಾನೆ. ಸ್ತ್ರೀ ಸಹಜ ಲಜ್ಜೆಯಿಂದ ಸುಮ್ಮನಿದ್ದರೂ ಅವಳ ಭಾವವನ್ನು ಊಹಿಸಿಕೊಂಡು ಅವಳನ್ನು ಕೂಡಬೇಕು. ವಿನಾಕಾರಣ ಅವಳಲ್ಲಿ ಕೋಪಮಾಡಬಾರದು,

ಅವಳಲ್ಲಿ ತನಗಿರುವ ಬಯಕೆಯನ್ನೂ ವರ್ಜಿಸಬಾರದು. ಧರ್ಮದಲ್ಲಿರುವವ ಳನ್ನು ಧರ್ಮಚ್ಯುತಿಗೊಳಿಸಬಾರದು. ಸದಾ ಸಮಾಧಾನದಿಂದಲೆ ಅವಳೊಡನೆ ವ್ಯವಹರಿಸಬೇಕು. ಅವಳಿಗೆ ಎಂದೂ ಉದ್ವೇಗ ಉಂಟುಮಾಡಬಾರದು. ಅವಳು ತಪ್ಪು ಮಾಡಿದರೂ ಹೊಡೆಯಕೂಡದು, ಹೊಡೆಯುವವನು ಪತಿತ ನಾಗುತ್ತಾನೆ." — ಎಂದು ಮುಂತಾಗಿ ಪುರಾಣಗಳಲ್ಲಿ ವೈದಿಕನ ಗೃಹಸ್ಥ ಧರ್ಮ ಸ್ಪಷ್ಟವಾಗಿ ಕಂಡು ಬರುತ್ತಿದೆ. ರಾಮ ಧಾರ್ಮಿಕನೆಂಬ ಮಾತಿಗೆ ಎರಡಿಲ್ಲ–

ಸನಾತನ ಮೌಲ್ಯಗಳಿಗಾಗಿ ವೈದಿಕ ಧರ್ಮಸಂರಕ್ಷಣೆಗಾಗಿ ರಾಮನ ಬಲಿದಾನಗಳ ಬೃಹತ್ಕಥೆಯೇ ರಾಮಾಯಣ.

ಅಲ್ಲವೆ ?

ವೈದಿಕಧರ್ಮ ಎಂದೂ ಹೆಂಡತಿಯನ್ನು ಉಪೇಕ್ಷಿಸುವುದನ್ನು ಒಪ್ಪುವು ದಿಲ್ಲ. ಈ 'ಸನಾತನ ಬರ್ಬರತೆ'ಯನ್ನು ರಾಮನಲ್ಲಿ ಆರೋಪಿಸಿ ಅದಕ್ಕೆ ವಿರುದ್ಧವಾಗಿ ಹೆಂಡತಿಯ ಬಗ್ಗೆ ಉಪೇಕ್ಷೆಯನ್ನೂ ಆರೋಪಿಸುವುದುಂಟೆ ? ರಾಮ ಜಿತೇಂದ್ರಿಯ ಹೌದು. ಪರಸ್ತ್ರೀಯರ ವಿಷಯದಲ್ಲಿ, ತನ್ನ ಪತ್ನಿಯ ವಿಷಯದಲ್ಲಿ ಅಲ್ಲ.

'ಚಿತ್ರಕೂಟದಂಥ ಸುಂದರ ವನಪ್ರದೇಶದಲ್ಲಿ ರಾಮನು ಸೀತೆಯನ್ನೂ ಲಕ್ಷ್ಮಣನನ್ನೂ ಕುರಿತು ಅದರ ಹೂಹಣ್ಣುಗಳ ಗಿಡಪಕ್ಷಿಗಳ ಜೇನು ಜಿಂಕೆಗಳ ವರ್ಣನೆ ಮಾಡುತ್ತಾನಾಗಲಿ ಸೀತೆಯೊಡನೆ ಯಾವ ಪ್ರಣಯ ಅಥವಾ ಶೃಂಗಾರ ಪ್ರಸಂಗದಲ್ಲಿ ತೊಡಗುವುದಿಲ್ಲ'

—ಹೀಗೆ ಹೇಳುವವರೆ,

ವನವಾಸದಲ್ಲಿ ಕೆಲವು ನಿರ್ದಿಷ್ಟವಾದ ಪ್ರಣಯ ಅಥವಾ ಶೃಂಗಾರದ ಸಂದರ್ಭ ಗಳಿವೆ. ಆ ಬಗ್ಗೆ ಸೀತೆ ಮಾತ್ರ ಹನುಮಂತನಿಗೆ ಹೇಳುತ್ತಾಳೆ.

ಎನ್ನುತಿರುವುದು ಪರಸ್ಪರ ವಿರುದ್ಧ.

'ರಾವಣನಿಂದ ಸೀತೆ ಅಪಹೃತಳಾದಾಗ ಸೀತೆಯ ಬಗೆಗಿನ ರಾಮನ ಸಂವೇದನೆ ಭೋಗಲಾಲಸೆಯಿಂದ ಕಾಮದಿಂದ ಉದ್ದೀಪನಗೊಂಡುದ್ದಾದ್ದರಿಂದ ಅದಕ್ಕೆ ಪ್ರೇಮದ ಆಯಾಮ ಅಷ್ಟಾಗಿ ಅಳವಡುವುದಿಲ್ಲ.'

ಈ ಮಾತು 'ರಾಮನಿಗೆ ಸ್ತ್ರೀಜಾತಿಯ ಬಗ್ಗೆ ಲೈಂಗಿಕ ಉಪೇಕ್ಷೆ' ಎಂದು ಪದೇ ಪದೇ ಹೇಳುವ ಮಾತಿಗೆ ವಿರುದ್ಧ.

ರಾಮನ ಪ್ರಲಾಪ ತನಗೆ ಸೀತೆ ಇಲ್ಲವಾದಳಲ್ಲ, ಅವಳ ಜೊತೆಗಿನ ಶೃಂಗಾರದ ಒಡನಾಟದ ವಿಲಾಸಗಳು ಇಲ್ಲವಾದವಲ್ಲ ಎಂದೆ ಹೊರತು ಸೀತೆ ಅಪಹೃತಳಾಗಿ ಯಾವ ಕ್ಷೋಭೆಗೋ ಸಿಕ್ಕು ನರಳುತ್ತಿರಬಹುದಾದ ಬಗೆಗಿನ ಸಂತಾಪವಲ್ಲ.'

ಎನ್ನುವ ಮಾತೂ ರಾಮಾಯಣದ ಅಕ್ಷರ ಸಾಕ್ಷ್ಯದ ಮುಂದೆ ನಿಲ್ಲುವಂಥದ್ದಲ್ಲ. 'ರಾವಣ ಸೀತೆಯನ್ನು ಒಯ್ಯುವಾಗ 'ಹಾ ನಾಥ' ಎಂದು ಕೂಗಿರುತ್ತಾಳೆ. ಅದು ಸದಾ ಎದೆಯೊಳಗೆ ಇದ್ದು ವಿಷದಂತೆ ನನ್ನ ಮೈಯೆಲ್ಲ ಸುಡುತ್ತಿದೆ. (ಯು. 5-7) ಸೀತೆಗೆ ನಾನೆ ಗತಿ. ಅಂಥವಳು ರಾಕ್ಷಸರ ನಡುವೆ ಈಗ ಅನಾಥಳಂತೆ ರಕ್ಷಕರಿಲ್ಲದವಳಾಗಿರುತ್ತಾಳೆ. (ಯು. 5–15) ಸೀತೆ ಸ್ವಭಾವದಿಂದ ತೆಳ್ಳಗಿನ ಶರೀರದವಳು. ಇನ್ನು ದುಃಖದಿಂದಲೂ ಉಪವಾಸದಿಂದಲೂ ಎಷ್ಟು ಕೃಶಳಾಗಿರಬಹುದು ! (ಯು. 5–18)– ಇಂಥ ಮಾತುಗಳು ಸ್ಪಷ್ಟವಾಗಿ ರಾಮನಲ್ಲಿ ಸೀತೆಯ ಬಗೆಗಿನ ಸಂವೇದನೆ ಎಷ್ಟು ನಿಃಸ್ವಾರ್ಥ ಶುದ್ಧ ಪ್ರೇಮದ್ದು ಎನ್ನುವುದನ್ನು ತೋರಿಸುವುದಿಲ್ಲವೆ ?

'ಸೀತೆಯ ಮುಖವನ್ನೆತ್ತಿ ಅವಳ ಚಿಂದುಟಿಯ ಸವಿಯನ್ನೆಂದು ಸವಿಯುವೆನೊ' ಎಂದು ಮುಂತಾಗಿ ರಾಮ ಹೇಳಿದರೂ ಕೊನೆಯಲ್ಲಿ 'ಎಂದು ನನ್ನ ಸೀತೆ ನನ್ನನ್ನಾಲಿಂಗಿಸಿ ಆನಂದಬಾಷ್ಪ ಸುರಿಸುವಳು ? (5-20)' ಎಂದು ಆತಂಕ ವ್ಯಕ್ತಪಡಿಸುವುದರಿಂದ ರಾಮನ ಸಂವೇದನೆ ಕಾಮದಿಂದ ಉದ್ದೀಪನಗೊಂಡದ್ದಲ್ಲವೆನ್ನುವುದು ಸ್ಪಷ್ಟ. ಗಿಡಮರ ಹೂಬಳ್ಳಿಗಳಲ್ಲಿ ಸೀತೆಯ ಸಾದೃಶ್ಯ ಕಂಡು ಪ್ರಲಾಪಿಸುವುದು ಕಾಮೋದ್ರೇಕಿತವೆನ್ನುವುದೂ ಉಚಿತವಲ್ಲ. 'ಈ ವಸಂತಮಾಸ ಲಂಕೆಯಲ್ಲಿಯೂ ಬಂದಿರುತ್ತದೆ. ಸೀತೆ ಪ್ರಾಣತ್ಯಾಗವನ್ನೇ ಮಾಡಿಯಾಳು' (ಕಿ 1-50) ನನ್ನ ವಿರಹ ತಡೆದುಕೊಂಡು ಸೀತೆ ಬದುಕಿರಲಾರಳು. (ಕಿ. 1–51) ನಾನಿಲ್ಲದೆ ಅವಳೆಂತು ಬದುಕಿದ್ದಾಳು ? (ಕಿ. 1-105) ಎಂದು ಮುಂತಾಗಿಯೂ ರಾಮ ಈ ಸಂದರ್ಭದಲ್ಲಿ ಹಲುಬುತ್ತಾನೆ.

ವಸ್ತುತಃ ವಿರಹಿಗಳು ತಮ್ಮ ಆತ್ಮೀಯ ಶೃಂಗಾರ ಚಿತ್ರಗಳನ್ನು ಬಣ್ಣಿಸ ಕೂಡದೆಂದರೆ ಹೇಗೆ ಸಾಧ್ಯ? ಅದು ವಿಪ್ರಲಂಭ ಶೃಂಗಾರ ರಸವಾಗುವುದಾದರೂ ಹೇಗೆ? ಎಂಬುದು ತಿಳಿಯಲಾಗದ ಸಂಗತಿ. ದುಷ್ಯಂತನು ಶಕುಂತಲೆಯ ವಿರಹದಲ್ಲಿ ಏನು ಮಾಡಿದ ?

ಕಾಳಿದಾಸನ ದುಷ್ಯಂತ ತಾನು ಶಕುಂತಲೆಯನ್ನು ಹಿಂದೆಂದೂ ನೋಡಿಯೇ ಇಲ್ಲವೆನ್ನುತ್ತ ಶಕುಂತಲೆಯ ಬಾಯಿಂದ 'ಅನಾರ್ಯ'ನೆಂದು ಕರೆಸಿಕೊಂಡು ಅನ್ಯಾಯವಾಗಿ ತ್ಯಾಗಮಾಡಿಯೂ, ಅದು ದೂರ್ವಾಸ ಶಾಪ ಪ್ರಭಾವದಿಂದುಂಟಾದ ಮರೆವಿನಿಂದ ಎಂದರೂ ಮುಂದೆ ಸ್ಮೃತಿ ಬಂದಾಗ ಅವಳಿಗೆ ತನ್ನಿಂದಾದ ಅಪಚಾರವನ್ನು ಕುರಿತು ಪರಿತಪಿಸದೆ, ಆಕೆ ಈಗ ಎಲ್ಲಿ ಏನು ದುಃಖ ಅನುಭವಿಸುತ್ತಿರಬಹುದೆಂದು ಆತಂಕಗೊಳ್ಳದೆ, ತನ್ನ ಬಗ್ಗೇ ತಾನು ಚಿಂತಿಸುತ್ತಾನೆ—'ನನ್ನ ಮನಸ್ಸನ್ನು ಆವರಿಸಿದ್ದ ಅಜ್ಞಾನವೇನೋ ತೊಲಗಿತು' ಆದರೆ ಜೊತೆಗೆ ಮನ್ಮಥನ ಬಾಣ ನನ್ನ ಮೇಲೆರಗಿತು !' ವಿದೂಷಕನ ಮುಂದೆ ಅವನಿಗೆ ಮುಜುಗರ ಉಂಟಾಗುವ ರೀತಿಯಲ್ಲಿ ತನ್ನ ಆತ್ಮೀಯ ಶೃಂಗಾರ ಚಿತ್ರಗಳನ್ನು ಬಣ್ಣಿಸುತ್ತಾನೆ—'ರತೋತ್ಸವದಲ್ಲಿ ನಾನು ಅವಳ ಎಳೆಯ ಚಿಗುರಿನಂತೆ ಮೋಹಕವಾದ ಅಧರದಲ್ಲಿ ಗಾಯವಾದೀತೆಂಬ ಭಯದಿಂದ ಮೆಲ್ಲಗೆ ಚುಂಬಿಸಿದ್ದೇನೆ....' ಗರ್ಭಿಣಿಯಾದ ಶಕುಂತಲೆಯನ್ನು ತಾನು ತ್ಯಾಗ ಮಾಡಿದ್ದಾನೆ, ಆದರೆ ಆತ ಪರಿತಪಿಸುವುದು—'ನನ್ನ ಪಿತೃಗಳಿಗೆ ಪಿಂಡೋದಕ ಕೊಡಬಹುದಾಗಿದ್ದ ಪುತ್ರ ನನಗಿಲ್ಲದಂತಾದನಲ್ಲ !'

ಆದರೂ ಕಾಳಿದಾಸ ಆದರ್ಶ ಶೃಂಗಾರ ಕವಿ ! ವಾಲ್ಮೀಕಿ ಅಲ್ಲ ! ಅಲ್ಲವೆ ?

## ಕಾಕಾಸುರ ವೃತ್ತಾಂತ

'ರಾಮ ಸೀತೆಯರ ಆತ್ಮೀಯತೆ ಕಾಮ ಸನ್ನಿವೇಶಗಳಲ್ಲಿಯೆ ಹೇಗೆ ಕೇಂದ್ರೀಕೃತವಾಗಿದೆ ಎಂಬುದನ್ನು ಸೀತೆ ಕಾಕಾಸುರ ವೃತ್ತಾಂತವನ್ನು ಹನುಮಂತನಿಗೆ ಹೇಳುವಲ್ಲಿ ಎತ್ತಿ ತೋರಿಸುತ್ತಾಳೆ. ಆ ಪ್ರಸಂಗದಲ್ಲಿ ಸೀತೆ ರಾಮನನ್ನು ಒಂದೇ ಕಡೆ ರಾಮನೆಂದು ಸಂಬೋಧಿಸುತ್ತಾಳೆ, ಮಿಕ್ಕೆಡೆಗಳಲ್ಲಿ ದೂರದ ಸಂಬಂಧಿಯಂತೆ ರಾಘವ ಕಾಕುತ್ಸ್ಥ ಮಹಾಬಾಹು ಶರಣಾಗತ ರಕ್ಷಕನಾಗಿಯೆ ಸಂಬೋಧಿತನಾಗಿರುವುದು ಗಮನಾರ್ಹ. ಅಲ್ಲದೆ ಈ

ಪರಾಕ್ರಮ ವಿಶೇಷಣಗಳು ಅವನು ಮುಂದೆ ಗುಬ್ಬಿಯ ಮೇಲೆ ಬಿಡುವ ಬ್ರಹ್ಮಾಸ್ತ್ರದ ಮತ್ತು ಆ 'ಗುಬ್ಬಿ'ಯನ್ನು ಕೊಲ್ಲದೆ ಅಂಶ ಮಾತ್ರ ಅಂಗವಿಕಲತೆ ಮಾಡುವ ಕ್ಷುಲ್ಲಕದಲ್ಲಿ ಕೊನೆಗಾಣುವುದರಿಂದ ಅವು ಕೇವಲ ಐರನಿ ವ್ಯಂಗ್ಯಗಳಾಗಿ ಸೀತೆಯ ಬಾಯಿಂದ ಹೊರ ಬಿದ್ದಿರಲು ಸಾಧ್ಯ. ಸೀತೆ ನಾಚಿಕೆ ಅಪಮಾನಕ್ಕೆ ತುತ್ತಾಗಿರುವಾಗ ರಾಮ ಪ್ರೇಕ್ಷಕನಾಗಿ ಉಪೇಕ್ಷೆ ತೋರುತ್ತ ಮತ್ತೊಂದು ರೀತಿ ಉಪಶಮನ ಮಾಡುವವನಂತೆ ಕಾಣುತ್ತ ಒಟ್ಟಿನಲ್ಲಿ ಈ ಲೈಂಗಿಕ ಹಿಂಸೆಯನ್ನು ಸುಮ್ಮಾನದಿಂದಲೆ ಆನಂದಿಸುತ್ತ ಕೊನೆಗೆ ಆ ಲೈಂಗಿಕ ದುರಾಕ್ರಮಣೆಗೆ ಕೇವಲ ಸಾಂಕೇತಿಕ ಶಿಕ್ಷೆ ಕೊಟ್ಟು ತಟಸ್ಥನಾಗಿ ಉಳಿದುಬಿಡುತ್ತಾನೆ. ಇಲ್ಲಿ ಸೀತೆ ರಾಮನಿಗೆ ಹಿಂದೆ 'ನೀನು ಹೆಂಡತಿಯನ್ನು ಇತರರಿಗೆ ಕೊಡುವ ಶೈಲೂಷ ನಟನೆನ್ನುವ ಮಾತು ಸೂಕ್ತವಾಗಿ ಕಾಣುತ್ತದೆ.

—ಈ ಆಪಾದನೆ ಬರಿ ಕ್ಷುಲ್ಲಕವಾದುದು.

ಒಂದು ಸಾಮಾನ್ಯ ಕಾಗೆಯಂತೆ ಕಾಕಾಸುರ ಬಂದು ಸೀತೆಯ ಸ್ತನಗಳಿಗೆ ಕುಕ್ಕಿದಾಗ ಅದನ್ನು ರಾಮ ನೋಡಿ ನಕ್ಕಿದ್ದೇನೊ ನಿಜ. ಆದರೆ ಅಷ್ಟರಿಂದಲೆ ಸೀತೆ ಲೈಂಗಿಕ ಹಿಂಸೆಗೊಳಗಾಗಿದ್ದಾಳೆ, ರಾಮ ಪ್ರೇಕ್ಷಕನಾಗಿ ಆನಂದಿಸುತ್ತಿದ್ದಾನೆ ಎನ್ನುವುದು ಅರ್ಥವಿಲ್ಲದ ಮಾತು. ಒಂದು ಕಾಗೆಯನ್ನು ಓಡಿಸಲಾಗದೆ ಅದರಿಂದಲೆ ಕುಕ್ಕಿಸಿಕೊಳ್ಳುತ್ತಿದ್ದಾಳೆ ಸೀತೆ ಎಂದು ರಾಮ ನಕ್ಕನಷ್ಟೆ. ಮರುಕ್ಷಣದಲ್ಲಿ, ಸೀತೆ ಅಪಮಾನವೆನಿಸಿ ಕಣ್ಣಲ್ಲಿ ನೀರು ತುಂಬಿಕೊಂಡುದುದನ್ನು ಕಂಡು, ಅವಳನ್ನು ಸಂತೈಸಿ ಮಲಗಿಸಿ ನಿದ್ದೆ ಬರಿಸಿದ. ಆಕೆ ನಿದ್ದೆ ಹೋದ ಬಳಿಕ ತಾನೂ ಮಲಗಿ ನಿದ್ದೆ ಹೋದ. ಸ್ವಲ್ಪ ಹೊತ್ತಿನ ಬಳಿಕ ಸೀತೆ ಎದ್ದೊಡನೆ ತಿರುಗಿ ಕಾಗೆ ಬಂದು ಸ್ತನಗಳಲ್ಲಿ ತೀವ್ರವಾಗಿ ಕುಕ್ಕಿ ರಕ್ತ ಬರಿಸಿತು. ಈ ಮೊದಲು ಕುಕ್ಕಿದುದು ತೀವ್ರವಾಗಿರಲಿಲ್ಲ. ಆದ್ದರಿಂದಲೆ ಸೀತೆ ಸುಖವಾಗಿ ಮಲಗಿ ನಿದ್ದೆ ಹೋಗಿದ್ದಳು. ಈಗ ಅದೇ ಕಾಗೆ ಅದೇ ಸ್ಥಳದಲ್ಲಿ ಇನ್ನೂ ತೀವ್ರವಾಗಿ ಕುಕ್ಕಿದುದು ಇದೇನೋ ಅಸುರರ ಲೈಂಗಿಕ ಹಿಂಸಾಚಾರವಿರಬಹುದೆಂದು ಶಂಕಿಸುವಂತಾದ್ದು. ಆದರೆ ರಾಮನಿದನ್ನು ನೋಡಲಿಲ್ಲ. ಆತ ನಿದ್ರಿಸುತ್ತಿದ್ದ. ಸೀತೆ ಎಬ್ಬಿಸಿದಳು. ಎಚ್ಚತ್ತು ನೋಡಿ ತಟ್ಟನೆ ನಡೆದ ಪ್ರಸಂಗವನ್ನು ಊಹಿಸಿ, ಕುಪಿತನಾಗಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದ್ದಾನೆ, ರಾಮ. ಕಾಕಾಸುರ ಸಮಸ್ತ ಲೋಕಗಳಲ್ಲಿಯೂ

ಆಶ್ರಯವನ್ನು ಅರಸುತ್ತ ಹಾರಿಹಾರಿ ಎಲ್ಲಿಯೂ ಆಸರೆ ಗಾಣದೆ ತಿರುಗಿ ಬಂದು ರಾಮನ ಪಾದಗಳಿಗೇ ಶರಣಾಗಿ ಬಿದ್ದ. ಇದಕ್ಕಿಂತ ಇನ್ನೂ ಹೆಚ್ಚಿನ ಶಿಕ್ಷೆ ಬೇಕೆ ? ಆದರೂ ಈ ಶರಣಾಗತಿ ಪಶ್ಚಾತ್ತಾಪ ತಾತ್ಕಾಲಿಕವಾಗಿರಬಾರ ದೆಂದು ಒಂದು ಕಣ್ಣನ್ನು ಕಿತ್ತು ತೆಗೆದ, ಶೂರ್ಪಣಖಿಯನ್ನು ಸ್ತ್ರೀ ಎಂದು ಕೊಲ್ಲದೆ ಬಿಟ್ಟು ವಿರೂಪಗೊಳಿಸಿದಂತೆ.

ಶರಣಾಗತರನ್ನು ರಕ್ಷಿಸುವುದು ರಾಮನ ಸ್ವಭಾವ. ಅಪರಾಧಿಗಳನ್ನೂ ಕ್ಷಮಿಸುವುದು ಸೀತೆಯ ಸ್ವಭಾವ. ಅಶೋಕವನದಲ್ಲಿ ತನಗೆ ಚಿತ್ರಹಿಂಸೆ ಕೊಡು ತ್ತಿದ್ದರು, ರಾಕ್ಷಸಿಯರು. ಆದರೂ ರಾವಣ ವಧೆಯಾದೊಡನೆ ಬಂದ ಹನುಮಂತ ಇವರನ್ನೆಲ್ಲ ಧ್ವಂಸಮಾಡಿ ಬಿಡಲೆ ಎಂದು ಸೀತೆಯನ್ನು ಕೇಳಿದಾಗ ಆಕೆ ಅನ್ನುವ ಮಾತು—'ನಾನು ರಾಕ್ಷಸಿಯರ ಕೈಯಲ್ಲಿ ಹಿಂಸೆ ಅನುಭವಿಸಿ ದುದು ನನ್ನ ದೌರ್ಭಾಗ್ಯ. ರಾಕ್ಷಸಿಯರನ್ನೇಕೆ ಕೊಲ್ಲಬೇಕು ? ಅವರೆಷ್ಟೆ ದುಷ್ಟೆಯರಾಗಿರಲಿ ಅವರಲ್ಲಿ ನಾವು ಕರುಣೆದೋರಬೇಕು. ಇದು ಆರ್ಯ ಸ್ವಭಾವ. ಏಕಂದರೆ ಯಾರು ತಾನೆ ಅಪರಾಧ ಮಾಡುವುದಿಲ್ಲ ? (ಯು. 113-45)' ಆದ್ದರಿಂದ ಸೀತಾ ರಾಮರು ಇಬ್ಬರೂ ಕಾಕಾಸುರನನ್ನು ಕ್ಷಮಿ ಸಿದರು.

ರಾಮನ ಪರಾಕ್ರಮ ಇಲ್ಲಿ ಬ್ರಹ್ಮಾಸ್ತ್ರ ಪ್ರಯೋಗದಲ್ಲಿ ಮೈದೋರಿ ಶರಣಾಗತ ರಕ್ಷಣೆ ದಯೆ ಅನುಕಂಪೆಗಳಲ್ಲಿ ಕೊನೆಗೊಂಡಿತು, ಹೊರತು, ಕ್ಷುಲ್ಲಕದಲ್ಲಿ ಕೊನೆಗೊಳ್ಳಲಿಲ್ಲ. ಸೀತೆ ಅಭಿಮಾನದಿಂದ ಹೇಳುತ್ತಾಳೆ—'ನನ್ನ ಸಲುವಾಗಿ ಕಾಗೆಯ ಮೇಲೂ ಬ್ರಹ್ಮಾಸ್ತ್ರ ಎಸೆದ, ರಾಮ. ವಧೆಗೆ ಯೋಗ್ಯನಾದ ಕಾಕಾಸುರನನ್ನು ಕೃಪೆಯಿಂದ ಕೊಲ್ಲದೇ ಬಿಟ್ಟ' ರಾಮ ಪರಾಕ್ರಮಿ, ಕರುಣೆ ಎಂದು ಈ ಎರಡು ಗುಣಗಳನ್ನು ಎತ್ತಿ ಹೇಳಿ, ಆತ ನನ್ನಲ್ಲಿ ಕರುಣೆ ಇಟ್ಟು ಶತ್ರುಗಳಲ್ಲಿ ಪರಾಕ್ರಮ ತೋರಿ ನನ್ನನ್ನು ಮುಕ್ತ ಗೊಳಿಸಲಿ ಎನ್ನುತ್ತಾಳೆ. ಕಾಗೆಯನ್ನು ಬಿಟ್ಟುದು ಕೃಪೆಯಿಂದ ಎಂದುದರಿಂದ. ಸೀತೆಯ ಮೇಲಿನ ಉಪೇಕ್ಷೆಯಿಂದ ಅಥವಾ ಅತ್ಯಾಚಾರ ದರ್ಶನದ ಸುಖಾಪೇಕ್ಷೆಯಿಂದ ಅಲ್ಲವೆನ್ನುವುದು ಇಲ್ಲಿ ಸ್ಪಷ್ಟ. 'ಪರಾಕ್ರಮಿ ನೀನು. ಪರಾಕ್ರಮ ತೋರಿ ರಾಕ್ಷಸರನ್ನೇಕೆ ಶಿಕ್ಷಿಸುತ್ತಿಲ್ಲ ? ಮಹಾ ಬಲಶಾಲಿ. ಸಮುದ್ರದಂತೆ ಗಾಂಭೀರ್ಯ ಅಕ್ಷೋಭ್ಯತೆ ಉಳ್ಳವ, ಸಮಸ್ತ ಭೂಮಂಡಲಕ್ಕೆ

ಪ್ರಭುವಾಗಬಲ್ಲವ, ಇಂದ್ರಸಂಘವ, ಅಸ್ತ್ರಜ್ಞರಲ್ಲೆಲ್ಲ ಶ್ರೇಷ್ಠನಾದವ, ಸತ್ವ ಉಳ್ಳವ, ನಾಗ ಗಂಧರ್ವ ಸುರ ಮರುತ್ತುಗಳಲ್ಲಿ ಯಾರೂ ಯುದ್ಧದಲ್ಲಿ ಇದಿರಲ್ಲದವ, ಇಂಥ ಪರಾಕ್ರಮಿ ನೀನು ಮತ್ತು ನಿನ್ನಾದೇಶದಂತೆ ನಡೆವ ಲಕ್ಷ್ಮಣ, ನೀವಿಬ್ಬರೂ ಯುದ್ಧಕ್ಕೆ ನಿಂತರೆ ದೇವತೆಗಳೂ ಇದಿರಿಸಲಾರರು. ಇಂಥವರೂ ನನ್ನನ್ನು ಉಪೇಕ್ಷಿಸಲು ಏನು ಕಾರಣವಿರಬಹುದು ? ಪೂರ್ವ ಜನ್ಮದ ಪಾಪವಿರಬಹುದು' ಎನ್ನುತ್ತಾಳೆ, ಸೀತೆ. ರಾಮನ ಪರಾಕ್ರಮ ವಿಶೇಷಣ ಗಳೆಲ್ಲ ಐರನಿ ವ್ಯಂಗ್ಯಗಳಾಗಿದ್ದ ಪಕ್ಷದಲ್ಲಿ ಸೀತೆಯ ಈ ಪರಿತಾಪಕ್ಕೆ ಏನು ಅರ್ಥ ? ಲೈಂಗಿಕ ದುರಾಕ್ರಮಣಿ ಕಾಕಾಸುರನೆಂದು ತಿಳಿದೊಡನೆ ಆತ ದೇವೇಂದ್ರನ ಮಗನಾಗಿದ್ದರೂ ಲೆಕ್ಕಿಸದೆ ಬ್ರಹ್ಮಾಸ್ತ್ರದಿಂದ ಅಟ್ಟಿಸಿ, ಆತ ಮೂಲೋಕವನ್ನೆಲ್ಲ ಸುತ್ತಿ ಸ್ವತಃ ದೇವೇಂದ್ರನಲ್ಲಿಯೂ ಆಸರೆಪಡೆಯಲಾರದೆ ತನ್ನ ಕಾಲಿಗೇ ಬಂದು ಬೀಳುವಂತೆ ಮಾಡಿ, ರಾಮ ತನ್ನ ಪರಾಕ್ರಮ ಮೆರೆಸಲಿಲ್ಲವೆ ? ಶರಣಾಗತನನ್ನು ರಕ್ಷಿಸಿ ತನ್ನ ಪರಾಕ್ರಮಕ್ಕೆ ಮೆರುಗು ತಂದು ಕೊಳ್ಳಲಿಲ್ಲವೆ ? ಇಂಥ ರಾಮ, ರಾಮಾಯಣ ಮಹಾಕಾವ್ಯದ ನಾಯಕ. ಅವನ ಪರಾಕ್ರಮ ಸದ್ಗುಣಗಳ ವಿಸ್ತೃತ ಅಭಿವ್ಯಕ್ತಿ ರಾಮಾಯಣ. ಯಾವ ಒಳ್ಳೆಯ ಭಾರತೀಯ ಕಾವ್ಯಕೃತಿಯೂ ನಾಯಕನನ್ನು ಹಳಿಯುವುದಿಲ್ಲ. ಅದು ನಮ್ಮ ಪರಂಪರೆಯಲ್ಲ.

"ಶಕುಂತಲೆ ತನ್ನನ್ನು ಮರೆತುಹೋದ ದುಷ್ಯಂತನಲ್ಲಿ ಮತ್ತೆ ಅವಳಲ್ಲಿ ನಂಬಿಕೆ ಹುಟ್ಟಿಸಲು ಹೇಳಬೇಕಾದ ಆತ್ಮೀಯ ಸಂದರ್ಭಗಳಂತೆ ಸೀತೆ ರಾಮನಿಗೆ ನಂಬಿಕೆಯಾಗುವುದಕ್ಕೆ ಹೇಳುವ ಗುರುತು—ಕಾಕಾಸುರ ವೃತ್ತಾಂತ—ಆತ್ಮೀಯವಾಗಿರಬೇಕಾದರೆ ಯಾವ ಮರೆವೂ ಇಲ್ಲದ ರಾಮನನ್ನು ಸೀತೆ ಶಕುಂತಲೆ ದುಷ್ಯಂತನನ್ನು ನಂಬಿಸುವಷ್ಟೆ ಕಷ್ಟಪಡಬೇಕಾಗಿದೆ ಎನ್ನುವುದು ಇನ್ನೊಂದು ಗಂಭೀರವಾದ ವಿಶೇಷ, ರಾಮನ ಸಾಧಾರಣ ಉಪೇಕ್ಷಾ ಮನೋಭಾವ ದುಷ್ಯಂತನ ಆಕಸ್ಮಿಕ ಮರೆವಿನದಷ್ಟೆ ಘೋರ ಅಭೇದ್ಯ ಸಂವೇದನಾ ಶೂನ್ಯ !"

—ಇಂಥ ಮಾತುಗಳೂ 'ವಿಚಾರ ಸಾಹಿತ್ಯ'ದ ಆಣಿ ಮುತ್ತುಗಳು ! 'ವಿಚಾರಿ ಪ್ರಕಾಶನ'ದ ಹೆಮ್ಮೆಯ ಕಾಣಿಕೆ ! ದುಷ್ಯಂತ ರಾಮರಲ್ಲಿ ಏನು ಹೋಲಿಕೆ ? ದುಷ್ಯಂತನಂತೆ ರಾಮ ಸೀತೆಯನ್ನು 'ನೀ ನನ್ನ ಸತಿಯಲ್ಲ, ನಿನ್ನ ಪರಿಚಯವೆ

ನನಗಿಲ್ಲ' ಎನ್ನುತ್ತಿದ್ದಾನೇನು ? ಸೀತೆ [illegible] ಈ ಹಸಿದ ಹೆಂಡತಿ' ಎಂದು ವಾದಿಸುತ್ತಿದ್ದಾಳೇನು ? ರಾಮನಿಗೆ ಹನುಮಂತ ಹೊಸಬ. ಹನುಮಂತನಿಗೆ ಸೀತೆ ಹೊಸಬಳು, ಸೀತೆಯನ್ನು ನಾ ನೋಡಿ ಬಂದೆನೆಂದು ಹನುಮಂತ ಹೇಳಿದರೆ ರಾಮ ಹೇಗೆ ನಂಬಬೇಕು ? ಎಂದೂ ಸೀತೆಯನ್ನು ಕಂಡರಿಯದ ಹನುಮಂತ ಈಗ ಸೀತೆಯನ್ನು ಕಂಡಿದುದು ನಿಜವೆ ? ಸೀತೆ ಎಂದು ತನ್ನನ್ನು ಹೇಳಿಕೊಂಡಿರಬಹುದಾದ ಒಬ್ಬಳನ್ನು [illegible] ಕಂಡದ್ದರೂ ಆಕೆ ರಾಕ್ಷಸರ ಮಾಯೆ ಯಾಕಿರಬಾರದು ? ಈ ಸಂದೇಹ ನಿವೃತ್ತಿಗಾಗಿ ರಾಮ ಗುರುತನ್ನು ಬಯಸಬಾರದೆ ?

"ಶಕುಂತಲೆ ದುಷ್ಯಂತನನ್ನು ನಂಬಿಸಲು ಹೇಳಿದುದು ಜಿಂಕೆಯನ್ನು ನೀರು ಕುಡಿಸುವ ಸಂದರ್ಭ. ಸೀತೆ ರಾಮನಿಗೆ ಹೇಳಿಕಳಿಸಿದುದು ಕಾಮ ಸನ್ನಿವೇಶದ ಸಂದರ್ಭ. ಇದರಿಂದ ಶಕುಂತಲೆ ದುಷ್ಯಂತರ ಸಂಬಂಧದ ಧಾತುವಿನಂತೆ ರಾಮಸೀತೆಯರ ಸಂಬಂಧ ಪ್ರೇಮ ಮೂಲದ್ದಾಗಿರದೆ ಪ್ರಬಲ ಕಾಮ ಪರಿವೃತವಾದದ್ದು".

—ಇದೂ ಸರಿಯಾದ ವಿಚಾರವಲ್ಲ. ಗುರುತು ಹೇಳುವುದು ನಂಬಿಕೆಗಾಗಿ. ಇನ್ನಾರೂ ನೋಡದಿದ್ದ, ರಾಮ ಮಾತ್ರ ನೋಡಿರಬಹುದಾದ ಯಾವುದಾದರೊಂದು ಸನ್ನಿವೇಶವನ್ನು ಗುರುತಿಗಾಗಿ ಹೇಳಬೇಕು. ಆ ಸನ್ನಿವೇಶ ಕಾಮದ್ದಾದರೇನು, ಬೇರಾದರೇನು ? ಯಾವುದರಿಂದಲೂ ನಂಬಿಕೆ ಬರಬಹುದು. ಇಬ್ಬರ ಸಂಬಂಧಧಾತುವನ್ನು ಅದರಿಂದಲೆ ಗುರುತಿಸಲು ಸಾಧ್ಯವೆ ? ಹಾಗಿದ್ದರೆ ದುಷ್ಯಂತ ಶಕುಂತಲೆಯರ ಸಂಬಂಧಧಾತು ಪ್ರೇಮ ಮೂಲ ಹೇಗೆ ? ಶಕುಂತಲೆ ಜಿಂಕೆ ಇವರೊಳಗಿನ ಪ್ರೇಮವೆ ದುಷ್ಯಂತ ಶಕುಂತಲೆಯರ ಸಂಬಂಧ ಧಾತುವೆ ? ಹಾಗಿದ್ದರೆ ವನ್ಯಮೃಗದ ಮೇಲಿನ ಪ್ರೀತಿಯಂಥ ಪ್ರೀತಿ ಶಕುಂತಲೆಗೆ ದುಷ್ಯಂತನಲ್ಲಿ ಎನ್ನಬೇಕಾದೀತು.

ವಸ್ತುತಃ ಕಾಕಾಸುರ ವೃತ್ತಾಂತ ಕಾಕಾಸುರನ ಅತ್ಯಾಚಾರ ಸನ್ನಿವೇಶ. ರಾಮಸೀತೆಯರೊಳಗಿನ ಕಾಮದ ಸನ್ನಿವೇಶವೆ ಅಲ್ಲ. ಸೀತೆಯನ್ನು ಪರ ಪುರುಷರಿಂದ ರಕ್ಷಿಸಿದ ರಾಮನ ಪೌರುಷದ ಉತ್ತಮ ಸನ್ನಿವೇಶವಿದು.

ರಾಮಸೀತೆಯರ ಸಂಬಂಧಧಾತು ಪ್ರೇಮ ಮೂಲವಾದುದು. ಎಂಥ ಕಷ್ಟ ಪ್ರಸಂಗದಲ್ಲಿಯೂ ಸತಿಯನ್ನು ಕಾಪಾಡುವಂಥ ವೀರ್ಯ ಶೌರ್ಯ ಪರಾಕ್ರಮಗಳಿಂದ ಬೆರೆತ ಗಾಢಪ್ರೇಮ ಮೂಲವಾದುದು ಎಂಬುದನ್ನು ಕಾಕಾಸುರ ವೃತ್ತಾಂತ ಸೂಚಿಸುತ್ತದೆ.

## ಶೋಕ ಪಾರಾಯಣ ?

'ವಿರಾಧನು ಸೀತೆಯನ್ನು ತೊಡೆಗೆ ಕೈ ಹಾಕಿ ಎಳೆದಿಟ್ಟುಕೊಂಡಾಗ ರಾಮನು ಉದ್ವಿಗ್ನನಾಗುವುದಿಲ್ಲ. ವಿಷಾದದಲ್ಲಿ ನಿಂತು ಶೋಕವನ್ನು ಮೆಲುಕು ಹಾಕುತ್ತಾನೆ. ಲಕ್ಷ್ಮಣನಾದರೋ ಒಡನೆಯೆ ಸಂಕ್ರುದ್ಧನಾಗಿ ವಿರಾಧನನ್ನು ಕೊಲ್ಲಲು ಆರ್ಭಟಿಸುತ್ತಾನೆ. ಆದ್ದರಿಂದಲೆ ಸೀತೆ ಮುಂದೆ ರಾವಣನು ತನ್ನನ್ನು ಹೊತ್ತುಕೊಂಡು ಹೋಗುವಾಗ ಹಾ ಲಕ್ಷ್ಮಣ ಮಹಾಬಾಹು ಎಂದು ಕೂಗುತ್ತಾಳೆ. ರಾಮನನ್ನಾದರೋ ಧರ್ಮ ರಕ್ಷಕನೆಂದು ನೆನೆದುಕೊಳ್ಳುತ್ತಾಳೆ.'

—ರಾಮಾಯಣದ ಅಕ್ಷರ ಸಾಕ್ಷ್ಯದಲ್ಲಿ ನಿಂತಾಗ. ಈ ಮಾತು ಎಷ್ಟು ಅರ್ಥಹೀನವೆಂಬುದನ್ನು ನೋಡಬಹುದು. ರಾಮನು ಹೇಳುತ್ತಾನೆ. 'ಲಕ್ಷ್ಮಣ, ನೋಡು ಸೀತೆಯನ್ನು. ವಿರಾಧನ ತೊಡೆಯಲ್ಲಿ! ಕೈಕಯಿಯ ಅಭೀಷ್ಟ ಫಲಿಸಿತು. ಅವಳಿಗೆ ರಾಜ್ಯದಿಂದ ತೃಪ್ತಿ ಇರಲಿಲ್ಲ. ನನ್ನನ್ನೂ ಕಾಡಿಗಟ್ಟಿದಳು. ಈಗ ಸೀತೆಗೆ ಪರಪುರುಷ ಸ್ಪರ್ಶವಾಯಿತಲ್ಲ! ಇದಕ್ಕಿಂತ ಹೆಚ್ಚಿನ ದುಃಖ ನನಗಿನ್ನೇನಿದೆ ? ಪಿತೃವಿಯೋಗದಿಂದಲಾಗಲಿ ರಾಜ್ಯಭ್ರಂಶದಿಂದಲಾಗಲಿ ಇಷ್ಟು ದುಃಖ ನನಗಾಗಲಿಲ್ಲ.' ಇದನ್ನು ಕೇಳಿ ಲಕ್ಷ್ಮಣನ ಕಣ್ಣಲ್ಲಿ ನೀರು ತುಂಬಿತು. ಕೋಪಗೊಂಡ ಹಾವಿನಂತೆ ಬುಸುಗುಟ್ಟುತ್ತ ಹೇಳಿದ 'ಎಲ್ಲರಿಗೂ ನಾಥನಾದ ನೀನೆ ಅನಾಥನಂತೆ ದುಃಖಿಸುವೆ ಏಕೆ ? ನಾನಿಲ್ಲವೆ ನಿನಗೆ ಸೇವಕನಾಗಿ ? ನಾನೀಗಲೆ ವಿರಾಧನನ್ನು ಬಾಣದಿಂದ ಹೊಡೆದು ಕೆಡವುತ್ತೇನೆ. ಭರತನಲ್ಲಿ ನನಗೆ ಯಾವ ಕೋಪ ಬಂದಿತ್ತೋ ಅದನ್ನೀಗ ವಿರಾಧನ ಮೇಲೆ ತೀರಿಸುವೆ.' ರಾಮಲಕ್ಷ್ಮಣರ ಈ ಸಂಭಾಷಣೆಗೆ ಮೊದಲು ವಿರಾಧ ಸೀತೆಯನ್ನೆತ್ತಿಕೊಂಡು ನಾಲ್ಕು ಶ್ಲೋಕಗಳಲ್ಲಿ 'ಏಯ್, ನೀವಾರು ? ಜಟಾವಲ್ಕಲಧಾರಿಗಳಾಗಿ ತಾಪಸರಾಗಿದ್ದೂ ಹೆಣ್ಣಿನ ಜೊತೆ ಬಾಳುತ್ತಿರುವಿರಿ,

ಇದು ಧರ್ಮವೆ ? ನೀವು ಪಾಪಿಗಳು. ಮುನಿವೃತ್ತಿಗೆ ಕಳಂಕ ತರುವವರು, ಈ ಕಾಡು ನನ್ನದು. ನಾನು ವಿರಾಧ. ಇಲ್ಲಿ ಮುನಿಗಳ ಮಾಂಸ ತಿನ್ನುತ್ತ ನಿತ್ಯ ಸಂಚರಿಸುವವನು. ಈ ಹೆಂಗಸು ರೂಪವತಿಯಾಗಿದ್ದಾಳೆ. ನನ್ನ ಹೆಂಡತಿ ಯಾಗುತ್ತಾಳೆ. ಪಾಪಿಗಳಾದ ನಿಮ್ಮ ರಕ್ತಪಾನ ಮಾಡುತ್ತೇನೆ. ಬನ್ನಿ ಯುದ್ಧಕ್ಕೆ' ಈ ಸಂದರ್ಭದಲ್ಲಿ ರಾಮ ಶೋಕವ್ಯಕ್ತಪಡಿಸಿ ನಾಲ್ಕು ಮಾತು ಹೇಳಿದ. ಅದು ತಪ್ಪು ! ತಕ್ಷಣ ಕಾರ್ಯ ಪ್ರವೃತ್ತನಾಗಬೇಕಿತ್ತು ಲಕ್ಷ್ಮಣನಂತೆ ! ಹೀಗೆ ಹೇಳುವವರು ಲಕ್ಷ್ಮಣನಾದರೂ ಏನು ಮಾಡಿದ ಎಂಬುದನ್ನು ಮೊದಲು ಹೇಳಬೇಕು. ವಿರಾಧ ನಾಲ್ಕು ಶ್ಲೋಕಗಳಲ್ಲಿ ರಾಮಲಕ್ಷ್ಮಣರನ್ನು ಪಾಪಿಗಳೆಂದು ನಿಂದಿಸುತ್ತಿದ್ದಾಗ ಲಕ್ಷ್ಮಣನೇಕೆ ಸುಮ್ಮನೆ ಕೇಳುತ್ತ ನಿಂತ ? ರಾಮನ ಸುದೀರ್ಘ ಶೋಕ ಭಾಷಣವನ್ನೂ ಕೇಳಿಕೊಂಡು ಏಕೆ ನಿಂತ ? ಕೇಳಿದೊಡನೆ ಏಕೆ ಕಂಬನಿ ಸುರಿಸಿದ ? ಬಳಿಕ ರಾಮನಿಗೆ ಸಮಾಧಾನ ಮಾಡ ಹೊರಟಿದ್ದಾದರೂ ಏಕೆ ? ವಿರಾಧನನ್ನೀಗಲೆ ಕೊಲ್ಲುತ್ತೇನೆ ಎಂದು ಮಾತಿನಲ್ಲಿ ಹೇಳುವುದಕ್ಕಿಂತ ಕೃತಿಯಲ್ಲಿಯೆ ತೋರಿಸಬಹುದಿತ್ತಲ್ಲ ? ಇಂಥ ಲಕ್ಷ್ಮಣ ನಿಜವಾಗಿ ಮಹಾ ಬಾಹುವೆ, ಇಲ್ಲ ಉತ್ತರಕುಮಾರನೆ ? ರಾಮನದೇನು ವಿಶೇಷ ತಪ್ಪಿದೆ ? ತಿರುಗಿ ವಿರಾಧ ತನ್ನ ಪರಿಚಯ ಹೇಳಿಕೊಂಡು 'ಸೀತೆಯನ್ನಿಲ್ಲೆ ಬಿಟ್ಟು ನೀವಿಬ್ಬರೂ ಎಲ್ಲಾದರೂ ಓಡಿ ಹೋಗಿ, ಬದುಕಿಕೊಳ್ಳಿ', ಎಂದಾಗ 'ಇಗೊ, ನೀನಿನ್ನು ಬದುಕಿ ಉಳಿಯಲಾರೆ' ಎನ್ನುತ್ತ ಬಿಲ್ಲಿಗೆ ಹಗ್ಗಕಟ್ಟಿ ಮೊದಲಿಗೆ ಬಾಣ ಎಸೆದವನು, ರಾಮ. ಲಕ್ಷ್ಮಣನಲ್ಲ. ಲಕ್ಷ್ಮಣ ಇಷ್ಟು ಹೊತ್ತು ಏನೂ ಮಾಡಿಲ್ಲ ಆತ ಹೇಳಿದುದೂ,. ಭರತನ ಮೇಲೆ ಕೋಪ ಮಾಡಿದ್ದನಂತೆ, ಅದನ್ನೀಗ ವಿರಾಧನಲ್ಲಿ ತೋರಿಸುತ್ತಾನಂತೆ ! ಇಂಥ ಲಕ್ಷ್ಮಣನನ್ನು 'ಮಹಾ ಬಾಹು' ಎಂದು ಕೂಗಿಕೊಂಡಳಂತೆ ಸೀತೆ. ರಾವಣ ತನ್ನನ್ನು ಎತ್ತಿ ಕೊಂಡೊಯ್ಯುವಾಗ ! ಇದುವೆ ಐರನಿ, ವ್ಯಂಗ್ಯವಾಗಿರಬಾರದೇಕೆ ? ಲಕ್ಷ್ಮಣನನ್ನು 'ಮಹಾ ಬಾಹು' ಎಂದು ಮಾತ್ರ, ಹೊರಗೆ ಕಾಣುವ ಆಕಾರದಿಂದ ಸಂಬೋಧಿಸಿದ್ದರೆ ರಾಮನನ್ನು 'ಮಹಾಬಾಹು' 'ಮಹಾಬಲ' ಎಂದು, ತೋಳುಉದ್ದ ಮಾತ್ರವಲ್ಲ ಬಲಶಾಲಿಯಾಗಿಯೂ ಇದ್ದಾನೆ ಎನ್ನು ತ್ತಾಳಲ್ಲವೆ ಸೀತೆ ? (ಅರ. 49-35)

ವಸ್ತುತಃ ವಾಲ್ಮೀಕಿಯೆ ಸೀತೆಯಂಥ ಸಾಧ್ವಿಯ ಮಾತಿನಲ್ಲಿ ಐರನಿ ವ್ಯಂಗ್ಯಗಳನ್ನು ನಿರೀಕ್ಷಿಸುವುದು ತಪ್ಪು. ಸೀತೆಯಲ್ಲಿ ರಾಮನದು ಉಪೇಕ್ಷೆಯ ಮನೋಭಾವವೆನ್ನುವುದೂ ಇನ್ನೂ ಹೆಚ್ಚಿನ ತಪ್ಪು. ರಾಮ ಶೋಕವನ್ನು ಮೆಲುಕುಹಾಕುವುದೆಲ್ಲ ಕೇವಲ ಪ್ರದರ್ಶನವೆ? ಇಲ್ಲಿ ರಾಮ ಅತ್ತರೆ ಪ್ರದರ್ಶನ. ಅಲ್ಲಿ ಕಾಕಾಸುರ ವೃತ್ತಾಂತದಲ್ಲಿ ಸಕ್ಕರೆ ಮಾತ್ರ ಅದು ಆನಂದದ ಸುಮ್ಮಾನ! ಏಕೆ ಇಂಥ ಆಗ್ರಹ, ದುರಭಿಮಾನ?

ವಿಚಾರ ಮಾಡಿದಾಗ, ರಾಮಲಕ್ಷ್ಮಣರಿಬ್ಬರಿಗೂ ವಿರಾಧನ ನಡತೆಯಿಂದ ಉದ್ವೇಗವುಂಟಾಗಿರಲಿಲ್ಲ. ರಾಕ್ಷಸರು, ಕಾಡಿನ ಮೃಗಗಳಂತೆ, ಹೆಣ್ಣಿನ ತೊಡೆಗೆ ಕೈಹಾಕಿದ ಮಾತ್ರಕ್ಕೆ ಲೈಂಗಿಕ ಆಕ್ರಮಣವೆನ್ನಲಾಗುವುದಿಲ್ಲ. ರಾವಣನೂ ಸೀತೆಯ ತೊಡೆಗೇ ಕೈಹಾಕಿ ಎತ್ತಿಕೊಂಡಿದ್ದ. ಆಗ ಅದು ಲೈಂಗಿಕ ಆಕ್ರಮಣವೇ ಆಗಿದ್ದರೆ ಶಾಪದಿಂದಾಗಿ ತಕ್ಷಣವೆ ಸಾಯುತ್ತಿದ್ದ. ಆತನಿಗೆ ಶಾಪದ ಭಯ ಇಲ್ಲವೆನ್ನುವಂತಿಲ್ಲ. ಸೀತೆಯನ್ನು ಬಲಾತ್ಕರಿಸಲಾರದೆ ಅವಳ ಕಾಲಿಗೆ ಬೀಳುತ್ತಾನೆ. ಲಂಕೆಯಲ್ಲಿ. ಆದ್ದರಿಂದ ವಿರಾಧನ ವರ್ತನೆಗೆ ರಾಮ ಉದ್ವಿಗ್ನನಾಗದೆ ಇದ್ದಾನೆ. ಆ ರಾಕ್ಷಸನನ್ನು ಕೊಲ್ಲುವುದರಲ್ಲಿಯೂ ಏನೂ ಸಂಭ್ರಮ ಆತನಿಗೆ ಇಲ್ಲ. ಅವನೊಬ್ಬ ಯಃಕಶ್ಚಿತ್! ರಾಮನ ಪೌರುಷದ ಮುಂದೆ ಆತನೊಬ್ಬ ಹುಳು. ಲಕ್ಷ್ಮಣನೆ ಹೇಳುವಂತೆ ರಾಮ ದೇವೇಂದ್ರಸಂಥ ಪರಾಕ್ರಮಿ (ಅರ. 2–23) ಆದ್ದರಿಂದ ಅವನ ವಿಷಯದಲ್ಲಿ ಏನೂ ಆತಂಕವಿಲ್ಲದೆ, 'ಇಂಥ ಕ್ಷುದ್ರ ಕಿರುಕುಳಗಳನ್ನು ಅನುಭವಿಸುತ್ತ ಇನ್ನು ಮುಂದೆ ಹದಿನಾಲ್ಕು ವರ್ಷಗಳ ಕಾಲ ವನವಾಸ ಮಾಡಬೇಕಾಗಿ ಬಂದಿತಲ್ಲ! ಕೈಕೇಯಿ ಏಕೆ ಹೀಗೆ ಮಾಡಿಬಿಟ್ಟಳು? ಭರತನಿಗೆ ರಾಜ್ಯ ಸಿಕ್ಕಿದರೆ ಸಾಲದಿತ್ತೆ?' ಎಂದು ರಾಮ, ಇಷ್ಟರವರೆಗೆ ತನ್ನೆದೆಯಲ್ಲಿ ಅದುಮಿ ಇಟ್ಟುಕೊಂಡಿದ್ದ ದುಃಖವನ್ನು ಈಗ ಆತ್ಮೀಯವಾಗಿ ಲಕ್ಷ್ಮಣನಲ್ಲಿ ತೋಡಿಕೊಳ್ಳುತ್ತಿದ್ದಾನೆ. ಲಕ್ಷ್ಮಣನೂ ತಡೆಯದೆ ಕಣ್ಣೀರು ಮಿಡಿಯುತ್ತಾನೆ. ಭರತನ ಮೇಲೆ ತನಗೆ ಕೋಪ ಆಗಲೇ ಬಂದಿತ್ತು, ರಾಮ ತಡೆದುಬಿಟ್ಟ. ಆಗ ನಾನು ಮಾಡಿದ ಕೋಪ ಕಾರ್ಯಕಾರಿ ಆಗದಿದ್ದುದರಿಂದ ನಮ್ಮ ಕೋಪತಾಪಗಳನ್ನೆಲ್ಲ ಇಂಥ ರಾಕ್ಷಸರ ಮೇಲೆ ತೋರಿಸಬೇಕಾಗಿ ಬಂದಿದೆ ಎಂದುಕೊಳ್ಳುತ್ತಾನೆ. 'ಬಾಷ್ಪ ಶೋಕ ಪರಿಪ್ಲುತ'ನಾಗುತ್ತಾನೆ. ಹೀಗೆ ಲಕ್ಷ್ಮಣನಿಗೆ

ವಿರಾಧನ ಮೇಲೆ ಕೋಪವಲ್ಲ, ಭರತನ ಮೇಲಿನ ಕೋಪವನ್ನೇ ವಿರಾಧನ ಮೇಲೆ ತೀರಿಸಬೇಕೆಂದಿದ್ದಾನಷ್ಟೆ. ರಾಮಲಕ್ಷ್ಮಣರಿಬ್ಬರಿಗೂ ತಮ್ಮ ವನವಾಸದ ದುರವಸ್ಥೆಯ ಬಗ್ಗೆಯೆ ಆಲೋಚನೆ! ಅದೂ, ಅಲ್ಲ ವಿರಾಧನ ಕೈಯಲ್ಲಿ ಸೀತೆ ಇರುವಾಗ! ಇದು ಉಪೇಕ್ಷೆಯಲ್ಲ. ಅಸದೃಶವಾದ ಆತ್ಮವಿಶ್ವಾಸ, ನಿರ್ಭೀತಿ. ಎಲ್ಲಿ ಹೋಗುತ್ತಾನೆ, ಈ ರಾಕ್ಷಸ, ನಮ್ಮ ಕೈಯಿಂದ ತಪ್ಪಿಸಿಕೊಂಡು ? ಜೀವಂತನಾಗಿ ಹೇಗೆ ಉಳಿಯುತ್ತಾನೆ ? ಎಂದು ಇಬ್ಬರಿಗೂ ದೃಢ ವಿಶ್ವಾಸ ಇದೆ. ರಾಮ ಹಾಗೇ ಹೇಳುತ್ತಾನೆ (ಅರ. 3-9)

## ಸೀತೆಗೆ ರಾಮ ಮನೋಭಿರಾಮ

ಆದ್ದರಿಂದ 'ಸೀತೆಗೆ ರಾಮನಲ್ಲಿ ಅತೃಪ್ತಿ, ಲಕ್ಷ್ಮಣನ ಮೇಲೆಯೆ ಆಶಾಭಾವನೆ, ಆದ್ದರಿಂದಲೆ 'ಹಾ ಲಕ್ಷ್ಮಣ, ಮಹಾಬಾಹೋ' ಎಂದು ಕೂಗುತ್ತಾಳೆ' ಎಂದೆಲ್ಲ ಹೇಳುವುದು ನಿರಾಧಾರ. ರಾವಣ ಸೀತೆಯನ್ನು ಎತ್ತಿ ಕೊಂಡೊಯ್ಯುವಾಗ ಮೊದಲಿಗೆ ಲಕ್ಷ್ಮಣನನ್ನೆ ಕೂಗಿದುದು. ಆತನಿಗೆ ತಾನು ಅನ್ಯಾಯವಾಗಿ ಕಠೋರ ಮಾತುಗಳನ್ನಾಡಿ ಆಶ್ರಮದಿಂದ ದೂರ ತೊಲಗಿಸಿ ಬಿಟ್ಟೆ, ತಪ್ಪು ಮಾಡಿದೆ, ಅದರ ಫಲವಿದು ಎಂಬ ಪಶ್ಚಾತ್ತಾಪದಿಂದ.

'ಹನುಮಂತನು ಸೀತೆಯನ್ನು ಕುರಿತು ರಾಮಲಕ್ಷ್ಮಣರಿಗೆ ಏನನ್ನಾದರೂ ಹೇಳಿ ಕಳಿಸಬೇಕಾಗಿದ್ದರೆ ಹೇಳು ಎಂದು ಕೇಳಲು ಸೀತೆ ಕಳಿಸುವುದು ರಾಮನಿಗೆ ಕೇವಲ ಒಂದೇ ಶ್ಲೋಕದ ಲೋಕಾಭಿರಾಮದ ಸಂದೇಶ. ಲಕ್ಷ್ಮಣನಿಗಾದರೋ ಎಂಟು ಶ್ಲೋಕಗಳ ವಿಸ್ತಾರದ ಆತ್ಮೀಯ ಗುಣಗಾನ. ಮನೋಜ್ಞ ದೇಹಾಂಗ ಗುಣಗಾನ, ವಿಶೇಷಾಂಗಗಳ ಶೌರ್ಯ ರೂಪಗಳ ಮೆಚ್ಚುಗೆಯ ಶೃಂಗಾರ ಚಿಂತನ. ಇದರಲ್ಲಿ ಸೀತೆ ತನಗೆ ಲಕ್ಷ್ಮಣನಲ್ಲಿ ರುವ ಗುಪ್ತ ಅನುರಕ್ತತೆಯನ್ನು ಹೊರ ಚೆಲ್ಲುತ್ತಿದ್ದಾಳೆ.'

—ಇದು ಶುದ್ಧಾಂಗವಾಗಿ ಸುಳ್ಳು, ಹನುಮಂತ ಹೇಳುತ್ತಾನೆ, 'ದೇವಿ, ನೀನಿಲ್ಲಿ ರಾವಣನ ಮುಂದೆ, ರಾಕ್ಷಸಿಯರ ಮುಂದೆ, ಹಾಗೂ ನನ್ನ ಮುಂದೆ, ನಡೆದುಕೊಂಡ ರೀತಿ, ಹೇಳಿದ ಮಾತು, ಎಲ್ಲವನ್ನೂ ನಾನು ರಾಮನಿಗೆ ತಿಳಿಸುತ್ತೇನೆ. ಗುರುತಿಗಾಗಿ ಮಾತ್ರ ಏನಾದರೂ ಹೇಳು

ಸೀತೆ ಈಗ ಇನ್ನೇನು ಹೇಳಲಿಕ್ಕಿದೆ ? ಗುರುತಿಗಾಗಿ ಸುದೀರ್ಘವಾಗಿ ಕಾಕಾಸುರ ವೃತ್ತಾಂತ ಹೇಳಿದ್ದಾಳೆ. ಇನ್ನೇನೂ ಹೇಳುವುದು ಉಳಿದಿರಲಿಲ್ಲವಾದ್ದರಿಂದ 'ರಾಮನಿಗೆ ನಮಸ್ಕಾರ ಹೇಳು, ಲಕ್ಷ್ಮಣನ ಕ್ಷೇಮ ವಿಚಾರಿಸಿದೆನೆನ್ನು.' ಎನ್ನುತ್ತಾಳೆ. ಇಲ್ಲಿ ಹನುಮಂತ ಹೇಳುವುದೇನಿದ್ದರೂ ರಾಮನಿಗೆ ಮಾತ್ರ. ಲಕ್ಷ್ಮಣನನ್ನು ಕೇವಲ ಕ್ಷೇಮದ ಬಗ್ಗೆ ಕೇಳಬೇಕಷ್ಟೆ. ಆದರೆ ಲಕ್ಷ್ಮಣನ ಬಗ್ಗೆ ಪುತ್ರವಾತ್ಸಲ್ಯದಿಂದ ಮತ್ತು ತಾನು ಆತನಿಗೆ ಅನ್ಯಾಯದ ಬಿರುನುಡಿ ಆಡಿ ಆಶ್ರಮದಿಂದ ದೂರ ಮಾಡಿದ್ದನ್ನು ನೆನೆದು ಪಶ್ಚಾತ್ತಾಪದಿಂದ ಹನುಮಂತನ ಮುಂದೆ ಆತನ ಗುಣಗಾನ ಮಾಡುತ್ತಾಳೆ. ಅದರಲ್ಲಿಯೂ ಲಕ್ಷ್ಮಣನ ಗುಣಗಾನಕ್ಕೆ ಎಂಟು ಶ್ಲೋಕಗಳಾದರೆ ರಾಮನ ಪರಾಕ್ರಮ ಸದ್ಗುಣಗಳನ್ನೇ ಕೊಂಡಾಡುವಂಥ ಕಾಕಾಸುರ ವೃತ್ತಾಂತ ಮೂವತ್ತೈದು ಶ್ಲೋಕಗಳ ಒಂದು ಇಡಿಯ ಸರ್ಗವೆ ಆಗಿ ಬಿಟ್ಟಿದೆ.

ಲಕ್ಷ್ಮಣನನ್ನು ಕೊಂಡಾಡಲು ಕಾರಣ ಆತ ಮಾಡಿದ ನಿಃಸ್ವಾರ್ಥ ಸೇವೆ ಮಹಾತ್ಯಾಗಗಳಿಂದ ಹೇಳಬೇಕು ಹೊರತು, ಲೈಂಗಿಕ ಆಕರ್ಷಣೆ ಎಂದಲ್ಲ. 'ತನ್ನೆಲ್ಲ ಸುಖವನ್ನು ತೊರೆದು ರಾಮನ ಜೊತೆಗೆ ಕಾಡಿಗೆ ಬಂದಿದ್ದಾನೆ, ರಾಮನನ್ನು ತಂದೆಯಂತೆ ನನ್ನನ್ನು ತಾಯಿಯಂತೆ ನೋಡಿಕೊಳ್ಳುತ್ತಿದ್ದಾನೆ' ಎಂದು ಮುಕ್ತಕಂಠದಿಂದ ಸೀತೆ ಲಕ್ಷ್ಮಣನನ್ನು ಕೊಂಡಾಡುವುದನ್ನು ಗಮನಿಸಬೇಕು. ಲೈಂಗಿಕ ಆಕರ್ಷಣೆ ಎನ್ನುವ ಪಕ್ಷದಲ್ಲಿ 'ನನ್ನನ್ನು ತಾಯಿಯಂತೆ ನೋಡಿಕೊಳ್ಳುತ್ತಾನೆ' ಎಂಬ ಅಂಶವನ್ನು ಸೀತೆ ದುಃಖದಿಂದಲೆ ಹೇಳಬೇಕಾಗಿತ್ತು. ಹೀಗೆ ಲಕ್ಷ್ಮಣನಿಗೆ ತಾಯಿಯಂತಿರುವ ಸೀತೆ ಲಕ್ಷ್ಮಣನನ್ನು 'ಪ್ರಿಯದರ್ಶನಃ' ಎಂದುದು ತಪ್ಪೆ ? ತಾಯಿ ತನ್ನ ಮಗುವನ್ನು ಎಷ್ಟು ಮುದ್ದಾಗಿದೆ ಎಂದರೆ ಅವಳ ಶೀಲದಲ್ಲಿ ಶಂಕೆಯೆ ? ಸೀತೆ ಲಕ್ಷ್ಮಣನ ಗುಣಗಾನ ಮಾಡಿದ ಮೇಲೂ ತಿರುಗಿ, ತನ್ನ ನಾಥನಾದ ಪೊರನಾದ ರಾಮನಿಗೆ (ಸು. 38–64) ಈ ಮಾತು ಪುನಃ ಪುನಃ ಹೇಳಿಸುತ್ತ ತಾನು ಒಂದು ತಿಂಗಳ ಕಾಲ ಮಾತ್ರ ರಾಮನ ನಿರೀಕ್ಷೆಯಲ್ಲಿ ಜೀವಹಿಡಿದುಕೊಂಡು ಇರುತ್ತೇನೆ, ಆ ಕಾಲ ಮೀರಿದರೆ ಬದುಕಿರುವುದಿಲ್ಲ ಎಂಬ ಸಂದೇಶವನ್ನು ನೀಡುತ್ತಾಳೆ. ಇದೂ ಲೋಕಾಭಿರಾಮದ ಸಂದೇಶವೆ ?

ಸೀತೆಗೆ ರಾಮ ಅಭಿರಾಮನಾದ್ದರಿಂದಲೆ ವನವಾಸಕ್ಕೆ ಹೊರಡುವಾಗ ನಿಷ್ಠುರವಾಗಿ ರಾಮನನ್ನು ಬೈದಳು—'ನನ್ನನ್ನೇಕೆ ಕರೆದುಕೊಂಡು ಹೋಗ ಲೊಲ್ಲೆ ? ನೀನೇನು ಗಂಡುವೇಷದ ಹೆಣ್ಣೊ ಅಥವಾ ಹೆಂಡತಿಯನ್ನು ಹೆರವರಿಗೆ ಮಾರುವ ಜಾಯಾ ಜೀವಿಯೊ ?' ಎಂದಳು. ಅವಳಿಗೆ ವನವಾಸ ದಲ್ಲಿ ಮೋಹವಿರಲಿಲ್ಲ. ಗಂಡನಿಲ್ಲದ ಸ್ವರ್ಗವೂ ನರಕ ಸಮಾನವೆಂದೆ ಹಾಗೆ ಹೇಳಿದ್ದಳು. ಇಲ್ಲದಿದ್ದರೆ ಹದಿನಾಲ್ಕು ವರ್ಷಗಳ ಕಾಲ ವನವಾಸವೆಂದರೆ ಮೋಜಿನ ವನವಿಹಾರವಾಗುವುದಿಲ್ಲ. ಭೀಕರ ವನವಾಸವನ್ನಾದರೂ ಗಂಡನು ಬಳಿಯಲ್ಲಿದ್ದರೆ ವನವಿಹಾರವೆಂದೆ ತಿಳಿಯುವ ಸಾಧ್ವಿ ಆಕೆ. ಇಂಥವಳನ್ನು ರಾಮ ಬಿಟ್ಟು ಹೋಗುವುದು ನ್ಯಾಯವಲ್ಲ ಕರುಣೆಯಿಂದ ಹಿಂಜರಿಯುತ್ತಿದ್ದಾನಷ್ಟೆ.

ಲಕ್ಷ್ಮಣನಿಗೆ ಊರ್ಮಿಳೆ ಏಕೆ ಹೀಗೆ ಹೇಳಿ ಅಗ್ರಹಪಡಿಸಲಿಲ್ಲ ? ಎಂಬ ಪ್ರಶ್ನೆ ಇಲ್ಲಿ ಬರಬಹುದು. ಊರ್ಮಿಳೆಯೂ ಸೀತೆಯಂತೆಯೆ ಪ್ರಣಯಿನಿ, ಪತಿವ್ರತೆಯಾಗಿರಬಹುದು. ಇಲ್ಲವೆನ್ನಲು ಕಾರಣವಿಲ್ಲ. ಆದರೂ ಲಕ್ಷ್ಮಣ ಬಯಸಿದ್ದ ಸೀತಾರಾಮರ ಸೇವೆಯ ಮಹಾಕಾರ್ಯ ಪೂರೈಸಬೇಕಾದರೆ ಊರ್ಮಿಳೆ ಇದರಲ್ಲಿ ಸಹಕರಿಸಬೇಕು. ತಾನೂ ಜೊತೆಯಲ್ಲಿ ಬಂದು ಅದಕ್ಕೆ ಅಡ್ಡಿಯಾಗ ಬಾರದು ಎಂದು ದೂರ ಉಳಿಯಲು ಸಿದ್ಧಳಾದಳು.

ರಾಮನ ಪರಿಸ್ಥಿತಿಯೆ ಬೇರೆ. ಆತ ವನವಾಸದ ದುಃಖ ಅನುಭವಿಸ ಬೇಕಾಗಿದೆ. ಆ ದುಃಖದಲ್ಲಿ ಅರ್ಧಾಂಗಿನಿಯಾದ ಸೀತೆ ಭಾಗಿಯಾಗಲೆಬೇಕು. ಸೀತೆ ಅದಕ್ಕೇ ತಾನೂ ಬರುವೆನೆಂದು ಆಗ್ರಹ ತೊಡುತ್ತಿದ್ದಾಳೆ. ಪ್ರೀತಿ ಕರುಣೆ ಗಳಿಂದಾಗಿ ರಾಮ ನಿರಾಕರಿಸುತ್ತಿದ್ದಾನೆ. ಇದರಿಂದ ರಾಮಸೀತೆಯರಿಬ್ಬರಿಗೂ ಅನಿಷ್ಟ ಪ್ರಸಂಗವಿದೆ. ಸೀತೆಗೆ ತನ್ನ ಸತೀಧರ್ಮಕ್ಕೆ ಸರಿಯಾಗಿ ನಡೆದಂತಾಗು ವುದಿಲ್ಲವೆಂಬುದೊಂದು ಅನಿಷ್ಟ. ತನಗೆ ಪ್ರೀತಿಯ ರಾಮನ ಸಾನ್ನಿಧ್ಯ ಇಲ್ಲದಂತಾಗುವುದಿನ್ನೊಂದು ಅನಿಷ್ಟ. ರಾಮನಿಗಾದರೊ ಹೆಂಡತಿಯನ್ನು ಜೊತೆಗೆ ಕರೆದೊಯ್ದು ಅರಣ್ಯದಲ್ಲಿ ಸುರಕ್ಷಿತವಾಗಿಟ್ಟುಕೊಳ್ಳುವ ಶಕ್ತಿ ಧೈರ್ಯ ಗಳಿಲ್ಲವೆಂದು ಜನರಾಡಿಕೊಳ್ಳುವ ಭಯ, ಮತ್ತು ಹೆಂಡತಿಯಲ್ಲಿ ಪ್ರೀತಿ ಇಲ್ಲ ವೆಂದೊ ಸ್ತ್ರೀಜಾತಿಯ ಕುರಿತೆ ಲೈಂಗಿಕ ಉಪೇಕ್ಷೆ ಎಂದೊ ಜನ ತಿಳಿದು ಕೊಳ್ಳುವ ಪ್ರಸಂಗಗಳೂ ಸೇರಿ ಗಾಯದ ಮೇಲೆ ಬರೆ ಎಳೆದಂತಾಗಿದೆ. ಸೀತೆ

ಈ ಎಲ್ಲ ಅನಿಷ್ಟಗಳನ್ನು ತಪ್ಪಿಸುವ ಉದ್ದೇಶದಿಂದ ಪ್ರಣಯ ಕೋಪದಿಂದ ನುಡಿದಳು (ಅಯೋ. 27.1) 'ಅರಮನೆಯಲ್ಲಿಯೆ ಇದ್ದು ಸತೀಧರ್ಮ ಪಾಲಿಸಲು ಉಪದೇಶಿಸುವಿರು ? ಸತೀಧರ್ಮ ಹೇಗೆ ಪಾಲಿಸಬೇಕೆನ್ನುವುದನ್ನು ನನಗೆ ತಂದೆತಾಯಿಗಳೆ ಹೇಳಿಕೊಟ್ಟಿದ್ದಾರೆ.' ಎಂದಳು. ಇದಕ್ಕೆ ರಾಮ 'ವನವಾಸ ಬಲು ಕಷ್ಟ' ಎಂದು ಹೇಳುತ್ತಾನೆ. ಸೀತೆ ಹೇಳುತ್ತಾಳೆ 'ಪತಿ ಇಲ್ಲದೆ ಸತಿ ಬದುಕುವುದೆ ಇಲ್ಲ. ವಿಷ ಅಗ್ನಿ ಜಲಗಳಿಂದ ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ' ಇಷ್ಟು ಆಗ್ರಹದಿಂದ ಬಗೆಬಗೆಯಾಗಿ ಹೇಳಿದರೂ 'ವನವಾಸ ನಿನಗೆ ತಕ್ಕುದಲ್ಲ' ಎಂದೆ ರಾಮ ಅನ್ನುತ್ತಿದ್ದಾನೆ. ಸೀತೆ ಏನು ಮಾಡಬೇಕು ? 'ವಿಪ್ರಲಪಕ್ಷ'ನಾದ ತನ್ನ ರಾಮನನ್ನು ಬಿಟ್ಟುಕೊಡಲಾರದೆ ಪ್ರಣಯ ಅಭಿಮಾನಗಳಿಂದ ಕಠೋರವಾಗಿ ನುಡಿದಳು (ಅಯೋ. 30-2) ಆಗ ನುಡಿದ ಮಾತು - 'ಗಂಡು ವೇಷದ ಹೆಣ್ಣು' 'ಜಾಯಾ ಜೀವಿ.' ಜನರು ಆಡಬಹುದಾದ ಮಾತನ್ನೇ ತಾನು ಹೇಳಿ ರಾಮನನ್ನು ಪ್ರೀತಿಯಿಂದಲೆ ಎಚ್ಚರಿಸಿದ್ದಾಳೆ. ಇದು ನಿಜವಾದ ಕೋಪವಲ್ಲ. ಚೆನ್ನಾಗಿ ಬಿಗಿದಪ್ಪಿ ದೊಡ್ಡ ಧ್ವನಿಯಿಂದ ಅಳುತ್ತ ಈ ಮಾತುಗಳನ್ನಾಡಿದ್ದಳು ಸೀತೆ (ಅಯೋ. 30-22)

ರಾಮ ಸೀತೆಯ ಈ ಪ್ರೀತಿ ದುಗುಡಗಳನ್ನು ಕಂಡು ಕೊನೆಗೆ ಒಪ್ಪುತ್ತಾನೆ. 'ನಾನು ನಿನ್ನನ್ನು ವನದಲ್ಲಿ ರಕ್ಷಿಸಿಕೊಳ್ಳುವೆನೋ ಇಲ್ಲವೊ ಎಂಬ ಭಯವೂ ಇಲ್ಲ. ನಿನ್ನಲ್ಲಿ ಉಪೇಕ್ಷೆಯೂ ಇಲ್ಲ' ಎಂಬ ಅಭಿಪ್ರಾಯದಿಂದ 'ನನಗೆ ಎಲ್ಲೂ ಯಾವುದರ ಭಯವೂ ಇಲ್ಲ, ನೀನು ದುಃಖಿನಿಯಾಗಿದ್ದರೆ ನನಗೆ ಸ್ವರ್ಗವೂ ಬೇಡ' ಎಂದು ಹೇಳುತ್ತಾನೆ.

## ಸೀತಾ ಕಲ್ಯಾಣ

'ರಾಮನಿಗೆ ಸೀತೆಯಲ್ಲಿ ಉಪೇಕ್ಷೆ ರಾಮನು ಬಿಲ್ಲನ್ನು ಮುರಿದಂದಿನಿಂದಲೆ ಶುರುವಾಗುತ್ತದೆ. ತನ್ನನ್ನು ರಾಮನು ಆಗಲೆ ಪರಿಗ್ರಹಿಸಲು ಒಪ್ಪಲಿಲ್ಲ. ತಂದೆಯಾದ ದಶರಥನ ಇಚ್ಛೆಯನ್ನರಿಯದೆ ವಿವಾಹ ಸಾಧ್ಯವಿಲ್ಲವೆಂದು ತಿಳಿಸಿ ಬಿಟ್ಟನೆಂದು ಸೀತೆ ಅನಸೂಯೆಗೆ ಹೇಳುವಾಗ ರಾಮನ ಪಿತೃಭಕ್ತಿಯ ಹಿನ್ನೆಲೆಯಲ್ಲಿ ರಾಮನಿಗೆ ವೀರ್ಯಶುಲ್ಕಳಾಗಿ ಲಭಿಸಿದ ಅಸಾಧಾರಣ ಸುಂದರಿಯ ಬಗ್ಗೆ ಮಾನವ ಸಹಜವಾದ ಪ್ರೇಮ ಸಂವೇದನೆ ಏನೋ

ಧರ್ಮದ ಆಕರ್ಷಣೆ ಸಿಕಿತ ಹೆಣ್ಣಿನ ಬಗ್ಗೆ ಇರಬೇಕಾದ ಮಾನವೀಯ ಅನುರಾಗವಲ್ಲದಿದ್ದರೂ ಅನುಕಂಪ ಕಂಡು ಬರುವುದಿಲ್ಲ. ಒಂದು ವೇಳೆ ತಂದೆ ಒಪ್ಪದಿದ್ದಲ್ಲಿ ಅವಳ ಗತಿ ಏನು ಎನ್ನುವ ಯೋಚನೆ ಕಳಕಳಿ ಅಥವಾ ಕಳವಳ ರಾಮನಲ್ಲಿ ಸುಳಿಯುವುದಿಲ್ಲ. ಸೀತೆಯು ಹೇಳುವ 'ಪ್ರತಿಜಗ್ರಾಹ' ಎನ್ನುವ ಮಾತಿನಲ್ಲಿ ತೋರಿ ಬರುವ ಆಗ್ರಹದ ಹಿಡಿಯುವಿಕೆ ಬರಸೆಳೆದು ಹಿಡಿಯುವ ಪ್ರೇಮಾಗ್ರಹದ ಸೂಚನೆಯು ರಾಮನಲ್ಲಿ ಹೇಗೆ ಇಲ್ಲದಾಯಿತು ಎನ್ನುವುದನ್ನು ಒತ್ತಿ ಹೇಳುತ್ತದೆ. ಇಲ್ಲಿ ಸೀತೆಗೆ ರಾಮನಿಂದಾದ ಪ್ರಥಮ ಪ್ರೇಮ ವಂಚನೆಯು ಹೆಗ್ಗುರುತು ಅಚ್ಚೊತ್ತಿ ನಿಲ್ಲುತ್ತದೆ'

—ಈ ಆಕ್ಷೇಪದೊಳಗೇ ಅದಕ್ಕೆ ಸಮಾಧಾನವೂ ಬಂದಿರುವುದೊಂದು ಸೋಜಿಗ. 'ಪಿತೃಭಕ್ತಿಯ ಹಿನ್ನೆಲೆಯಲ್ಲಿ ರಾಮ ಸೀತೆಯನ್ನು ದಶರಥನ ಒಪ್ಪಿಗೆ ಇಲ್ಲದೆ ವಿವಾಹವಾಗಲು ಒಪ್ಪಲಿಲ್ಲ' ಎಂದ ಮೇಲೆ ಇನ್ನು ಆಕ್ಷೇಪವೆಲ್ಲಿದೆ ? ಪಿತೃಭಕ್ತಿ ಸೀತೆಯಲ್ಲಿನ ಪ್ರೇಮವನ್ನು ಮೀರಿಸುವಂಥಾದ್ದು ಎಂದರೆ ಆ ಪ್ರೇಮ ಎಷ್ಟರದು ಎಂದು ಶಂಕಿಸುವುದಾದರೆ ರಾಜ್ಯದ ಮೇಲೆ ಪ್ರಜೆಗಳ ಮೇಲೆ ಇರುವ ಅನುರಾಗವನ್ನು ರಾಮನ ಪಿತೃಭಕ್ತಿ ಮೀರಿಸಿತೆಂದು ಪ್ರಜೆಗಳ ಮೇಲೆ ರಾಮನಿಗೆ ಬೇಜವಾಬ್ದಾರಿ ಅಥವಾ ಅನುರಾಗ ಶೂನ್ಯತೆ ಇದೆ ಎಂದು ಶಂಕಿಸಬಹುದೆ ? ರಾಮನ ಪಿತೃ ಭಕ್ತಿ ವೃದ್ಧನಾದ ಆ ಪಿತನನ್ನೆ ಆಹುತಿ ತೆಗೆದುಕೊಂಡಿತು. ಇದು ಪಿತೃಭಕ್ತಿಯೆ ? ಎಂದು ಶಂಕಿಸಬಹುದೆ ? ಇಂಥ ನಿಷ್ಠುರವಾದ ಧರ್ಮನಿಷ್ಠೆ 'ಒಂದು ವೇಳೆ ತಂದೆ ಒಪ್ಪದಿದ್ದಲ್ಲಿ ಅವಳ ಗತಿ ಏನು ?' ಎಂದು ಒಂದು ಹೆಣ್ಣಿನ, ಅದರಲ್ಲೂ ಕೈಹಿಡಿಯಬಿರುವ ಹೆಣ್ಣಿನ ಭವಿಷ್ಯವನ್ನು ಆಲೋಚಿಸುವುದೆ ? ಭರತ ರಾಮನಿಗೆ ತಂದೆಯ ಸಾವಿನ ಬಗ್ಗೆ ಹೇಳಿದೊಡನೆ ರಾಮ ದುಃಖ ತಡೆಯದೆ ಮೂರ್ಛೆ ಹೋಗುತ್ತಾನೆ. ಆದರೂ ಗತಿಸಿದ ತಂದೆಯನ್ನೂ ಸತ್ಯವಾದಿಯನ್ನಾಗಿ ಮಾಡುವ ಛಲ ರಾಮನದು, ಭರತನಿಗೂ ಹಾಗೇ ಮಾಡಲು ಉಪದೇಶಿಸುತ್ತಾನೆ. ಹೆಣ್ಣಿನ ಬಗ್ಗೆ ಎಷ್ಟು ಅನುರಾಗ ಅನುಕಂಪೆ ಇದ್ದರೂ ಅದೆಲ್ಲ ಈ ನಿಷ್ಠುರ ಧರ್ಮದ ಮುಂದೆ ಏನೂ ಅಲ್ಲ. ಇದರಿಂದ ರಾಮನಿಗೆ ಸೀತೆಯ ಬಗ್ಗೆ ಅನುರಾಗ ಅನುಕಂಪೆಗಳಿರಲಿಲ್ಲ ಎಂದು ಊಹಿಸಿದರೆ ತಪ್ಪಾಗುತ್ತದೆ.

ಈಗ ರಾಮನಲ್ಲಿ ಕಂಡು ಬರುತ್ತಿರುವ, ಪಿತನ ಸಾವಿಗೇ ಕಾರಣವಾದ ಪಿತೃಭಕ್ತಿ ಮತ್ತು ತಾನು ಪ್ರೀತಿಸಿದ ಒಂದು ಹೆಣ್ಣಿನ ಬಾಳನ್ನೇ ಹಾಳು ಮಾಡಬಲ್ಲ ಸನಾತನ ಬರ್ಬರತೆ ನಮಗೆ ಆದರ್ಶವಾಗಬೇಕೆ ? ಎಂಬ ಪ್ರಶ್ನೆ ಬರಬಹುದು. ಆದರೆ ಸನಾತನ 'ಬರ್ಬರ'ತೆ ಮೇಲುನೋಟಕ್ಕೆ ಒರಟಾಗಿ ಕಂಡು ಬಂದರೂ ಕೊನೆಯಲ್ಲಿ ಹಿತಕರವೆ. ಸತ್ಯ ಹರಿಶ್ಚಂದ್ರನಂಥವರ ಕಥೆ ಇದಕ್ಕೆ ಸಾಕ್ಷಿ. 'ಯತೋ ಧರ್ಮಸ್ತತೋ ಜಯಃ' ಎಂಬುದೆ ಮಹಾಭಾರತದ ಸಂದೇಶ. ಭಾರತೀಯ ಸಂಸ್ಕೃತಿಯ ಅಂತಃಸತ್ವವೆ ಈ ಸನಾತನ 'ಧರ್ಮ' ಎಂದಿಗೂ ವಿಫಲವಾಗದ ಧಾರಕ ಶಕ್ತಿ. ಈ ಧರ್ಮಕ್ಕೆ ವಿರುದ್ಧವಾಗಿ ಹೋದಾಗ ತತ್ಕಾಲದಲ್ಲಿ ಲಭ್ಯವಾಗಬಲ್ಲ ಪಿತನ ಉಳಿವು, ಹೆಣ್ಣಿನ ನಲಿವು ಇವೆರಡೂ ಕೊನೆಯಲ್ಲಿ ತನಗೆ ಅಳಿವಾಗಬಹುದು. ಏಕೆಂದರೆ ದಶರಥ ಅಸತ್ಯವಾದಿ ಎಂಬ ಅಪಕೀರ್ತಿ, ಆತ ಸತ್ತರೂ ಉಳಿದು ಬಿಡುತ್ತದೆ. ಹೆಣ್ಣಿನ ನಲಿವೂ ಮುಂದೆ ಗಂಡಿಗೆ ತಂದೆತಾಯಿ ಸೋದರ ಸೋದರಿಯರಿಂದ ಎಲ್ಲ ಬಂಧು ಬಳಗದಿಂದ ದೂರ ಓಡಲು ಪ್ರಚೋದಕವಾಗಬಹುದು. ಒಂದು ಹೆಣ್ಣಿನ, ಅಪರಿಚಿತ ವ್ಯಕ್ತಿಯೊಬ್ಬಳ ಕೈ ಹಿಡಿದು ಬಾಳಿನುದ್ದಕ್ಕೂ ಅವಳನ್ನು ಸಂಗಾತಿಯಾಗಿ ಮಾಡಿಕೊಳ್ಳುವುದರಲ್ಲಿ ಮುಂದೆ ಪಿತೃಗಳಿಗೆ ವಿಧ್ಯುಕ್ತವಾಗಿ ಪಿಂಡದಾನ ಮಾಡಬಲ್ಲ ಸಂತತಿಗಾಗಿ ಪತ್ನಿಯೊಬ್ಬಳನ್ನು ಆರಿಸಿಕೊಳ್ಳುವ ಮಹತ್ವಪೂರ್ಣ ಕಾರ್ಯದಲ್ಲಿ, ತನ್ನನ್ನು ಹೆತ್ತು ಹೊತ್ತು ಸಾಕಿ ಸಲಹಿದ 'ಆತ್ಮಾವೈ ಪುತ್ರನಾಮಾಸಿ' ಎನ್ನುವಂಥ ಪ್ರೀತಿಯ ತಂದೆ ತಾಯಿಗಳನ್ನು 'ಭ್ರಾತಾ ಸ್ವಾ ಮೂರ್ತಿರಾತ್ಮನಃ' ಎಂಬಂಥ ರಕ್ತ ಸಂಬಂಧದ ಸೋದರ ಸೋದರಿಯರನ್ನೂ ಒಂದು ಮಾತು ಕೇಳದೆ ಕೃತಘ್ನನೆನಿಸುವಷ್ಟು ಆತುರಪಡುತ್ತ ಹೆಣ್ಣಿನ ಕೈ ಹಿಡಿಯುವವನು ಮುಂದೆ ಆ ಬಂಧುಗಳನ್ನೆಲ್ಲ ತೊರೆದು ದೂರ ಹೋಗಲು ಹೇಸುವವನಲ್ಲ. ಕೃತಘ್ನತೆಯ ಪಾಪಕ್ಕೆ ಪರಿಹಾರವೆ ಇಲ್ಲವಂತೆ. ಹೆಣ್ಣೂ ಹೀಗೆ ಗಂಡಿನ ಮನೆ ಒಡೆಯುವವಳಾಗುವುದು ಹಿತಕರವಲ್ಲ. ತಾತ್ಕಾಲಿಕ ಸುಖವನ್ನು ಶಾಶ್ವತ ಹಿತ ದೃಷ್ಟಿಯಿಂದ, ಎದೆಗಟ್ಟಿಮಾಡಿಕೊಂಡು, ಬಿಡಲು ಹೇಳುತ್ತದೆ, ಧರ್ಮ. ಇದನ್ನು 'ಬರ್ಬರ'ತೆ ಎನ್ನುವುದಾದರೆ ಇಂಥ ಬರ್ಬರತೆಯೆ ಇರಲಿ.

ಧರ್ಮ ಕೇವಲ ಹಿತ ಒಂದನ್ನೆ ದೃಷ್ಟಿಯಲ್ಲಿಟ್ಟುಕೊಳ್ಳುವುದಿಲ್ಲ, ಜೊತೆಗೆ ಅದಕ್ಕೆ ವಿರುದ್ಧವಾಗದಂಥ ರೀತಿಯ ಸುಖಕ್ಕೂ ಕಾರಣವಾಗುತ್ತದೆ. ತಂದೆ

ತಾಯಿ ಬಂಧು ಬಳಗದವರ ಅನುಮತಿಯಿಂದ ಅವರೆಲ್ಲರ ಸಮಕ್ಷಮದಲ್ಲಿ ಅವರೊಡನೆ ಆನಂದವನ್ನು ಹಂಚಿಕೊಳ್ಳುತ್ತ ಅವರ ಪ್ರೀತಿ ಆಶೀರ್ವಾದ ಪ್ರಶಂಸೆಗಳೊಡನೆ ತಾನು ಪ್ರೀತಿಸಿದ, ವೀರ್ಯಶುಲ್ಕದಲ್ಲಿ ತಾನು ಗೆದ್ದಿರುವ ಹೆಣ್ಣನ್ನು ಮದುವೆಯಾಗುವುದರಲ್ಲಿರುವ ಸುಖ, ಬಂಧುಬಳಗದವರನ್ನೆಲ್ಲ ದೂರಮಾಡಿ ಕಳ್ಳನಂತೆ ಒಂದು ಹೆಣ್ಣನ್ನು ಹೊತ್ತು ಪಲಾಯನ ಮಾಡುವುದರಲ್ಲಿ ಸಿಕ್ಕೀತೆ ? ಸೀತೆಗೂ ತನ್ನ ಹಾಗೂ ತನ್ನ ಪತಿಯ ಬಂಧುಬಳಗದವರೆಲ್ಲರ ಮುಂದೆ ಹೆಮ್ಮೆಯ ವೈಭವದ ವಿವಾಹವಾಗಬೇಕೆಂಬ ಬಯಕೆ ಇಲ್ಲದಿರುತ್ತದೆಯೇ ? ಆದ್ದರಿಂದಲೇ ಅನಸೂಯೆಯ ಮುಂದೆ 'ಕಿಂಪುನರ್ಯೋ ಗುಣೈಃ ಶ್ಲಾಘ್ಯಃ' ಎಂದು ಮುಂತಾಗಿ ಪತಿಯ ಗುಣಗಳನ್ನು ಹೆಮ್ಮೆಯಿಂದ ಹೇಳುತ್ತ ಕೊನೆಯಲ್ಲಿ. 'ಬಿಲ್ಲು ಮುರಿದು ವೀರ್ಯ ಶುಲ್ಕಳಾದ ನನ್ನನ್ನು ಗೆದ್ದುಕೊಂಡೂ ತಂದೆಯ ಅನುಮತಿಗೆ ಕಾದು ಅವನ ಉಪಸ್ಥಿತಿಯಲ್ಲಿಯೆ ನನ್ನನ್ನು ಮದುವೆ ಮಾಡಿಕೊಂಡ. ಹೀಗೆ ಗುರುಹಿರಿಯರೆದುರಲ್ಲಿ ನನ್ನ ವಿವಾಹ ನಡೆದುದರಿಂದ ನನಗೆ ರಾಮನಲ್ಲಿ ಅನುರಾಗ (ಅಯೋ. 118-54)' ಎನ್ನುತ್ತಾಳೆ ಸೀತೆ. ರಾಮನಿಗೂ ಸೀತೆಯ ಮೇಲೆ ಈ ಕಾರಣದಿಂದಲೇ ಹೆಚ್ಚಿನ ಅನುರಾಗವಂತೆ- 'ಪ್ರಿಯಾ ತು ಸೀತಾ ರಾಮಸ್ಯ ದಾರಾಃ ಪಿತೃಕೃತಾ ಇತಿ' (ಬಾಲ 77-26) ಹೀಗೆ ರಾಮ ಬಿಲ್ಲು ಮುರಿದಂದಿನಿಂದಲೆ ಸೀತೆಗೆ ಪ್ರಿಯವಾದುದನ್ನೆ ಮಾಡಿ, ಅವಳ ಹೃದಯವನ್ನೂ ಗೆದ್ದು ಮದುವೆಯಾದ. ಇದು ರಾಮನ ಪ್ರೇಮ ವಂಚನೆಯೂ ಅಲ್ಲ, ಸೀತೆಯ ಪಾಲಿಗೆ ಆತ್ಮಾಭಿಮಾನದ ನೋವಿನ ಘಟನೆಯೂ ಅಲ್ಲ.

ಸೀತೆ ಇಲ್ಲಿ ಹೇಳಿದ ಮಾತು – 'ದೀಯಮಾನಾಂ ನ ತು ತದಾ ಪ್ರತಿಜಗ್ರಾಹ ರಾಘವ: ' ಇಲ್ಲಿ ಪ್ರತಿಜಗ್ರಾಹ ಎಂದರೆ 'ಆಗ್ರಹದ ಪ್ರೇಮಾಗ್ರಹದ ಬರ ಸೆಳೆದು ಹಿಡಿವ ಕ್ರಿಯೆ' ಎಂದೆಲ್ಲ ಅರ್ಥವಿಲ್ಲ. ಅದಕ್ಕೆ ವ್ಯಾಕರಣ ಸಮ್ಮತಿ ಇಲ್ಲ. ಕೊಡುವ ಕ್ರಿಯೆಗೆ ಪ್ರತಿಯಾಗಿ ಸ್ವೀಕರಿಸುವ ಕ್ರಿಯೆ ಎಂದಷ್ಟೇ ಅರ್ಥವಾಗುತ್ತದೆ. ಆಗ್ರಹ ಎಂಬ ಅರ್ಥ 'ಆ' ಎಂಬ ಉಪಸರ್ಗವಿದ್ದಾಗ ಸಿಕ್ಕೀತು. ಅದು ಇಲ್ಲ. 'ಪ್ರತಿ' ಎಂಬ ಉಪಸರ್ಗ ಮಾತ್ರವಿದೆ. 'ಪ್ರತಿಗ್ರಹ'ದೊಳಗೆ 'ಆಗ್ರಹ'ಕ್ಕೆ ಎಲ್ಲಿ ಅವಕಾಶವಿದೆ ? ಇದು ಆಗ್ರಹವಲ್ಲವೆ ?

"ಮಾರೀಚನು 'ಹಾ ಸೀತೆ ಹಾ ಲಕ್ಷ್ಮಣ' ಎಂದು ಕೂಗಿ ಸತ್ತಾಗ ರಾಮ ಭಯಗೊಂಡು ಕೂಡಲೆ ಹಿಂತಿರುಗುವುದಿಲ್ಲ. ಇನ್ನೊಂದು ಜಿಂಕೆಯನ್ನು ಕೊಂದು ಅದರ ಮಾಂಸ ಸಂಗ್ರಹಿಸಿ ಅನಂತರ ತ್ವರೆಯಿಂದ(!) ಓಡಿಬರುತ್ತಾನೆ!'–

-- ಈ ಆಕ್ಷೇಪ ಹುರುಳಿಲ್ಲದುದು. ರಾಮನಿಗೆ ಬರಿಗೈಯಲ್ಲಿ ಓಡಿಬರುವಷ್ಟು ಆತಂಕವೆ ? 'ಲಕ್ಷ್ಮಣ, ನೀನಿಲ್ಲೆ ಇರು. ಸನ್ನದ್ಧನಾಗಿ ಬಹಳ ಜಾಗರೂಕತೆಯಿಂದ ಸೀತೆಯನ್ನು ಕಾಪಾಡುತ್ತಿರು. ನಮ್ಮ ಎಲ್ಲ ಕೃತ್ಯವು ಇವಳ ರಕ್ಷಣೆಯಲ್ಲೆ ಕೇಂದ್ರೀಕೃತವಾಗಿದೆ' (ಅರ. 43-46) ಎಂದು ಹೇಳಿ ರಾಮ ಲಕ್ಷ್ಮಣನನ್ನು ನಿಲ್ಲಿಸಿ ಹೋಗಿದ್ದ. ಆತ ಸೀತೆಯನ್ನು ಬಿಟ್ಟು ದೂರಹೋದಾನೆಂದು ರಾಮ ಭಾವಿಸಲು ಕಾರಣವಿರಲಿಲ್ಲ. ತನ್ನ ಧ್ವನಿಯಂತೆ ಮಾರೀಚ ಕೂಗಿದುದರಿಂದ ಅವರಿಬ್ಬರೂ ಕೇಳಿ ಕಳವಳಿಸುತ್ತಿರಬಹುದೆಂದು ರಾಮ ತ್ವರೆಮಾಡಿದ, ಮಾಂಸವನ್ನೂ ತಂದು ತಾನು ಕ್ಷೇಮವೆಂದು ತಿಳಿಸಿ, ಅವರನ್ನು ಆನಂದಗೊಳಿಸಬೇಕೆಂದು ಬಗೆದ.

## ರಾಮನಿಗೆ ಸೀತೆಯಿಂದೇನು !

ಲಂಕೆಯ ಯುದ್ಧದಲ್ಲಿ ಸುಗ್ರೀವನಿಗೆ ರಾವಣನಿಂದಾದ ಪೆಟ್ಟುಗಳ ಬಗ್ಗೆ ಶೋಕಿಸುತ್ತ 'ಗೆಳೆಯ, ಏನಾದರೂ ನಿನಗೆ ಹೆಚ್ಚು ಕಡಿಮೆಯಾಗಿಬಿಟ್ಟಿದ್ದರೆ ಗತಿ ಏನು ? ಆಗ ನನಗೆ ಸೀತೆಯಿಂದಾಗಬೇಕಾದದ್ದೇನು ?' ಎನ್ನುತ್ತಾನೆ.

ನಿಜ. ಇದರಿಂದ ರಾಮನಿಗೆ ಸೀತೆಯ ಬಗ್ಗೆ ಉಪೇಕ್ಷೆಯೆಂದು ತಿಳಿಯಬಾರದು. 'ಒಂದನ್ನು ಹೊಗಳುವ ಉದ್ದೇಶದಿಂದ ಇನ್ನೊಂದನ್ನು ತೆಗಳುವುದೆಂದು ಹೇಳುವ 'ನಹಿ ನಿಂದಾ' ನ್ಯಾಯ ಒಂದಿದೆ. ವೈದಿಕ ಸಾಹಿತ್ಯದಲ್ಲಿ ಇದಕ್ಕೆ ಹೇರಳ ನಿದರ್ಶನಗಳಿವೆ. 'ಯಾಗಶಾಲೆಯಲ್ಲಿ ಕಿಟಕಿ ಇಡಬೇಕು. ಇಲ್ಲದಿದ್ದರೆ ಹೊಗೆಯಲ್ಲಿ ಉಸಿರುಕಟ್ಟಿ ಸಾಯಬೇಕಾಗುತ್ತದೆ. ಸತ್ತಮೇಲೆ ಸ್ವರ್ಗ ಎಂಬುದು ಒಂದು ಉಂಟೆ ಇಲ್ಲವೆ, ಯಾರಿಗೆ ಗೊತ್ತು ?' ಎನ್ನುತ್ತದೆ. 'ಸ್ವರ್ಗಕ್ಕಾಗಿ ಯಾಗ ಮಾಡಿರಿ' ಎನ್ನುವ ವೇದ ! ಇಲ್ಲಿ ಸ್ವರ್ಗದ ಅಸ್ತಿತ್ವವನ್ನೇ ಪ್ರಶ್ನಿಸುವ ಮಾತಿಗೆ ಕಿಟಕಿ ಇಡುವುದು ಆವಶ್ಯಕವೆಂದು ಹೊಗಳುವ ಅಭಿಪ್ರಾಯವೆ ಹೊರತು ಸ್ವರ್ಗ ಇಲ್ಲವೆಂದಲ್ಲ. ಸ್ವರ್ಗವೆ ಇಲ್ಲದಿದ್ದರೆ ಯಾಗ

ಏಕೆ ? ಯಾಗಶಾಲೆ ಏಕೆ ? ಅದರಲ್ಲಿ ಕಿಟಿಕಿ ಏಕೆ ? ಪ್ರಕೃತ ಸುಗ್ರೀವ ನನ್ನು ಪ್ರಶಂಸೆಮಾಡಿ ಹುರಿದುಂಬಿಸುವುದಕ್ಕಾಗಿ ರಾಮ ಈ ಮಾತನಾಡಿದ್ದ. ಇದು ಸುಗ್ರೀವನಿಗೆ ಅರ್ಥವಾಗುತ್ತದೆ, ಸೀತೆಗಿಂತಲೂ ತಾನೆ ಹೆಚ್ಚು ರಾಮನಿಗೆ ಎಂದು ತಿಳಿಯುವಷ್ಟು ಆತ ಹೆಡ್ಡನಲ್ಲ.

ಲಂಕೆಯ ಯುದ್ಧದಲ್ಲಿ ಲಕ್ಷ್ಮಣನು ಮೂರ್ಛಿತನಾಗಿ ಬಿದ್ದಾಗ 'ಸೀತೆಯಂತಹ ನಾರಿ ಇನ್ನೊಬ್ಬಳು ದೊರೆತಾಳು ಲಕ್ಷ್ಮಣನಂಥ ತಮ್ಮ ದೊರೆತಾನೆ ?' ಎಂದು ರಾಮ ಹೇಳಿದ.

ಇದರಿಂದಲೂ ಸೀತೆಯಲ್ಲಿ ಅವನಿಗೆ ಉಪೇಕ್ಷೆ ಎನ್ನುವುದು ಸರಿಯಲ್ಲ. ತಂದೆ ತಾಯಿಗಳು ಮೊದಲು, ಅನಂತರ, ಸೋದರಿಯರು. ಅನಂತರ ಹೆಂಡಿರು ಮಕ್ಕಳು. ಇದು ನಮ್ಮ ಆದರ್ಶ, ಸಂಸ್ಕೃತಿ. ಹೆಂಡತಿಮಕ್ಕಳೆ ಎಲ್ಲರಿಗಿಂತ ಮೊದಲಲ್ಲ. ಆದ್ದರಿಂದ ಹೆಂಡತಿಗಾಗಿ ಹೋರಾಡುತ್ತ ಸೋದರನನ್ನು ಕಳೆದು ಕೊಳ್ಳಲು ರಾಮ ಸಿದ್ಧನಿಲ್ಲ. ಅಂದಮಾತ್ರಕ್ಕೆ ಹೆಂಡತಿ ಬೇಕಾಗಿಲ್ಲವೆಂದಾಗು ವುದಿಲ್ಲ.

## ಮಾನಿಷಾದದ ಧ್ವನಿ ಪ್ರಪಂಚ

ಹೀಗೆ ಯಾವ ರೀತಿಯಿಂದ ವಿಚಾರ ಮಾಡಿದರೂ ರಾಮಸೀತೆಯರೊಳ ಗಿನ ಸಂಬಂಧಧಾತು ಶುದ್ಧ ನಿಃಸ್ವಾರ್ಥ ಪ್ರೇಮ ಮೂಲವಾದುದು, ಗಾಢ ವಾದುದು ಎಂಬುದು ಸ್ಪಷ್ಟ. ಆದ್ದರಿಂದ ಅಗ್ನಿ ಪರೀಕ್ಷೆಯಲ್ಲಾಗಲಿ ಸೀತಾ ಪರಿತ್ಯಾಗದಲ್ಲಾಗಲಿ ರಾಮ ಹೃದಯ ಶೂನ್ಯನಾಗಿರಲಿಲ್ಲ, ಆಗಿದ್ದಂತೆ ನಟಿಸುತ್ತ ಅಂತರಂಗದಲ್ಲಿ ಇನ್ನೂ ಹೆಚ್ಚಿನ ದುಃಖದಿಂದ ಬೇಯುತ್ತಿದ್ದ. ಬಾಣದಂತೆ ಮರ್ಮವೇಧಕವಾದ ಸುಳ್ಳು ಅಪವಾದವನ್ನು ಪ್ರಜಾಕೋಟಿ ರಾಮನ ಮೇಲೆ ಹಾಕಿದೆ. ಅದರ ಏಟಿಗೆ ತತ್ತರಿಸಿ ಅಯೋಧ್ಯೆಯ ನೆಲದಲ್ಲಿ ರಾಮ ಕುಸಿದು ಬಿದ್ದಿದ್ದಾನೆ. ಅತ್ತ ಆಶ್ರಮದಲ್ಲಿ ಕುಳಿತು ಸೀತೆ ರಾಮನಿಗಾಗಿ ರೋದಿಸುತ್ತಿ ದ್ದಾಳೆ. ತಪ್ಪು ಯಾರದು ? ಇಬ್ಬರದೂ ಅಲ್ಲ. ನಿಷ್ಕಾರಣ 'ವೈರನಿಲಯ'ವಾದ ಪ್ರಜಾಕೋಟಿ ಎಂಬ ಬೇಡನು ಮಾಡಿದ ಕೆಲಸವಿದು. ಅವನಾದರೂ

ನಿಷ್ಕಾರಣವಾಗಿ ಏಕೆ ಹಾಗೆ ಮಾಡಿದ ? ಅದು ಅವನ ಸ್ವಭಾವ. ಒಟ್ಟಿನಲ್ಲಿ ಇದೊಂದು ದೊಡ್ಡ ದುರಂತ. ಹೃದಯ ವಿದ್ರಾವಕ. ಕರುಳು ಕತ್ತರಿಸುವಂಥ ಘಟನೆ. ಕೋಮಲವಾದ ಕರುಣರಸಪೂರಿತವಾದ ಸಹೃದಯರ ಕಣ್ಣಲ್ಲಿ ನೀರೂರಿಸುವ ಪವಿತ್ರ ರಾಮಾಯಣದ ಕಾವ್ಯಾರ್ಥವನ್ನು ವಾಲ್ಮೀಕಿ ಮೊದಲಲ್ಲೆ 'ಮಾನಿಷಾದ' ಶ್ಲೋಕದಲ್ಲಿ ಧ್ವನಿ ಗರ್ಭಿತವಾಗಿ ಹೇಳಿ ಬಿಟ್ಟಿದ್ದಾನೆ. ಆದಿ ಕಾವ್ಯದ ಮೂಲಸ್ರೋತಸ್ಸು ಈ ಪುಟ್ಟ ಶ್ಲೋಕದಲ್ಲಿದೆ. ಮಹತ್ತಾದ ಕಾವ್ಯಾರ್ಥದ ಧ್ವನಿ ಪ್ರಪಂಚ ಇಲ್ಲಿ ಅಡಗಿದೆ.

ಉತ್ತರಕಾಂಡ ಪ್ರಕ್ಷಿಪ್ತ, ರಾಮ ಪಟ್ಟಾಭಿಷೇಕದ ವರೆಗಿನ ಆರು ಕಾಂಡ ಗಳನ್ನು ಮಾತ್ರ ವಾಲ್ಮೀಕಿ ಬರೆದನೆಂದು ಹೇಳುವುದು ಧ್ವನಿ ಪ್ರಸ್ಥಾನ ಪ್ರವರ್ತಕ ನಾದ ಆನಂದ ವರ್ಧನನೆ ಅನ್ನುವಂತೆ ರಾಮಾಯಣ ಕಾವ್ಯ ಕರುಣರಸ ಪ್ರಧಾನ ವೆನ್ನುವುದಕ್ಕೆ ವಿರುದ್ಧವಾಗುತ್ತದೆ. ಪ್ರಣಯಿಗಳ ಜೋಡಿ ತಿರುಗಿ ಒಂದಾಗ ದಂತೆ ಪೂರ್ತಿವಿಯೋಗ ಹೊಂದಿದರೆ ಮಾತ್ರ ಕರುಣರಸವಾಗುತ್ತದೆ. ಮುಂದೆ ಸುಖ ಬರುವ ಸಂಭವವಿದ್ದರೆ ಕಷ್ಟದ ಮೊನೆ ಅಷ್ಟಾಗಿ ತೋರುವುದಿಲ್ಲ. ಆದ್ದರಿಂದ ಸೀತಾವಿಯೋಗ ರಾಮನ ಪಟ್ಟಾಭಿಷೇಕದಲ್ಲಿ ಕೊನೆಯಾದರೆ, ಸುಖಾಂತವಾದರೆ ಕರುಣರಸವೆ ಆಗುವುದಿಲ್ಲ. ಮಾನಿಷಾದ ಶ್ಲೋಕದಲ್ಲಿ ಕ್ರೌಂಚ ಪಕ್ಷಿಗಳ ಜೋಡಿಯ ಪೂರ್ತಿವಿಯೋಗ ರಾಮಸೀತೆಯರ ಪೂರ್ತಿ ವಿಯೋಗಕ್ಕೆ ಪ್ರತಿಮೆಯಾಗಿ ನಿಲ್ಲುವುದರಿಂದ ವಾಲ್ಮೀಕಿ ಮುನಿಗೂ ಉತ್ತರ ಕಾಂಡದ ಕಥೆ ಮನಸ್ಸಿನಲ್ಲಿ ಇತ್ತೆನ್ನುವುದು ಸ್ಪಷ್ಟ.

ಕೆಲವು ವ್ಯಾಖ್ಯಾನಕಾರರು ಉತ್ತರಕಾಂಡವನ್ನು ಬಿಟ್ಟು ರಾವಣ ವಧೆ ಯನ್ನು ಕಾವ್ಯಾರ್ಥವೆಂದು ಭಾವಿಸಿದ್ದುಂಟು. 'ರಾವಣ ಮಂಡೋದರಿಯರೆ ಹಕ್ಕಿಗಳ ಜೋಡಿ. 'ಮಾನಿಷಾದ' ಅಂದರೆ ಲಕ್ಷ್ಮೀನಿವಾಸನಾದ ರಾಮನೆ ಬೇಡ,' ಎನ್ನುತ್ತಾರೆ. ಆದರೆ ರಾವಣ ಮಂಡೋದರಿಯರ ಜೋಡಿ ವಾಸ್ತವದಲ್ಲಿ ಒಂದು ಜೋಡಿಯೆ ಅಲ್ಲ. ಮಂಡೋದರಿ ಪತಿವಿರಹಕ್ಕೆ ಶೋಕಿಸುವಳಾದರೂ, ಅವಳಂತೆ ಅಂತಃಪುರದ ಇತರ ಸ್ತ್ರೀಯರೂ ಗೋಳಿಡುತ್ತಾರೆ. ರಾವಣನಂತೂ ಪರಸ್ತ್ರೀಗಾಮಿ, ಈ ಜೋಡಿ 'ಚಾರು ನಿಸ್ವನ'ವೂ ಅಲ್ಲ, 'ರಾವಣ', ಅಂದರೆ ಭಯಂಕರ ಶಬ್ದದ ಜೋಡಿ. ಮತ್ತು ಕರುಣಾಮಯನಾದ ರಾಮನನ್ನು

ಇಲ್ಲಿ ವೈರನಿಲಯನಾದ ಬೇಡನೆಂದು ಹೇಳುವುದೂ ಉಚಿತವಲ್ಲ. ಶ್ಲೋಕದ ವಾಚ್ಯದಲ್ಲಿ ಬೇಡನಿಗೆ ಶಾಪವೆಂದು ಈ ವ್ಯಾಖ್ಯಾನಕಾರರು ಹೇಳುವುದರಿಂದ ಧ್ವನಿಯಲ್ಲಿ ಅದಕ್ಕೆ ವಿರುದ್ಧವಾಗಿ, ಬೇಡನು 'ಮಾನಿಷಾದ'ನಾದ ರಾಮನಾದ್ದರಿಂದ, ಬಲಾತ್ಕಾರವಾಗಿ, ಆಶೀರ್ವಾದವೆನ್ನಬೇಕಾಗುತ್ತದೆ. ವಾಚ್ಯದಲ್ಲಿ ಶೋಕ ಶ್ಲೋಕವಾದರೂ ಧ್ವನಿಯಲ್ಲಿ ಹಾಗೆ ಆಗುವುದಿಲ್ಲ ರಾವಣ ನಾಶಕ್ಕೆ ಯಾರೂ ಶೋಕ ಪಡುವ ಪ್ರಸಂಗವಿಲ್ಲ.

ವಾಲ್ಮೀಕಿ ಬೇಡನಿಗೆ ಶಾಪವಿತ್ತು ಶಾಪದಿಂದಾಗಿ ತಪಃಶಕ್ತಿ ವ್ಯಯವಾದುದಕ್ಕೆ ದುಃಖಪಡುತ್ತ 'ಕಿಮಿದಂ ವ್ಯಾಹೃತಂ ಮಯಾ ?' ತಪಃಶಕ್ತಿ ವ್ಯಯ ಮಾಡಿದ ಈ ಹಾಳು ಶಾಪ ವಾಕ್ಯವನ್ನು ನಾನು ಏಕಾದರೂ ಹೇಳಿಬಿಟ್ಟೆನೊ ಎಂದು ಪರಿತಪಿಸುತ್ತಾನೆ ಎನ್ನುತ್ತಾರೆ. ಆದರೆ ಮುಂದೆ 'ಶ್ಲೋಕೋ ಭವತು' ಅಂದರೆ, ಬಾರಿ ಬಾರಿಗೆ ಹೇಳಿಕೊಳ್ಳಬಹುದಾದ ಮಾತಾಗಲಿ ಎನ್ನುತ್ತ ಶಿಷ್ಯರಿಗೆ ಹೇಳಿಕೊಟ್ಟು ಅವರ ಬಾಯಿಂದಲೂ ಕೇಳಿ ಆನಂದಿಸಿ ಹೆಮ್ಮೆಪಟ್ಟುಕೊಳ್ಳುವುದು ಸಮರ್ಥನೀಯವಾಗಲಾರದು. ಛಂದಸ್ಸು ಒಂದಿದೆ ಎಂಬ ಒಂದೆ ಕಾರಣಕ್ಕೆ ಅನಿಷ್ಟ ಶಾಪ ವಾಕ್ಯ ಒಂದು ಹೆಮ್ಮೆಯ ಸಂಗತಿಯಾದೀತೆ ? ಹಕ್ಕಿಯನ್ನು ಕೊಂದ ಮಾತ್ರಕ್ಕೆ ಕುಲ ಕಸುಬಿನಲ್ಲಿದ್ದ ಬೇಡನೊಬ್ಬನಲ್ಲಿ ಕೋಪಗೊಳ್ಳುವುದೆ ವಾಲ್ಮೀಕಿಯಂಥ ಮುನಿಗೆ ಅನಿಷ್ಟ. ಆ ಕೋಪದಿಂದ ತಪಃ ಶಕ್ತಿ ವ್ಯಯ ಮಾಡುವಂಥ ಶಾಪ ವಾಕ್ಯ ಒಂದು ಹೊರಡುವುದೂ ಅನಿಷ್ಟ, ಆ ಶಾಪಕ್ಕೆ ಬೇಡ ತುತ್ತಾಗುವುದೂ ಅನಿಷ್ಟ. 'ಕಿಮಿದಂ ವ್ಯಾಹೃತಂ ಮಯಾ ?' ಎಂಬಲ್ಲಿ ನೆಲದಲ್ಲಿ ಬಿದ್ದು ಹೊರಳಾಡುವ ಗಂಡುಹಕ್ಕಿಯ ಬಗ್ಗೆಯಾಗಲಿ ಮರದ ಮೇಲೆ ಕುಳಿತು ಆಕ್ರಂದನ ಮಾಡುವ ಹೆಣ್ಣು ಹಕ್ಕಿಯ ಕುರಿತಾಗಲಿ ಶೋಕಿಸದೆ ತಪಃಶಕ್ತಿ ಖರ್ಚಾಯಿತಲ್ಲ ಎಂದು ಶೋಕಿಸುವುದು ನಾಚಿಕೆಗೇಡು. - ಏನೂ ಅರಿಯದ ಬೇಡನಿಗೆ ಉಪದೇಶ ಮಾಡದೆ ಅನ್ಯಾಯವಾಗಿ ಶಾಪ ಕೊಟ್ಟು ತನ್ನ ತಪಃಶಕ್ತಿ ಹಾಳಾಯಿತೆಂದು ಶೋಕಿಸುವುದು ಬರಿಯ ಹುಡುಗುತನವಾದೀತು.

'ಮಾನಿಷಾದ' ಒಂದು ವೇಳೆ ಶಾಪ ವಾಕ್ಯವೆಂದಿಟ್ಟುಕೊಂಡರೂ ಅದು ವಾಸ್ತವ ಶಾಪವಲ್ಲ, ಭರ್ತೃಹರಿ ತನ್ನ ಒಂದು ಸುಭಾಷಿತದಲ್ಲಿ ಹೀಗೆ ಹೇಳುತ್ತಾನೆ—'ಎಲೆ ಚಾತಕ ಪಕ್ಷಿಯೆ, ಆಕಾಶದಲ್ಲಿ ಎಷ್ಟೋ ಮೋಡಗಳಿರಬಹುದು,

ಎಲ್ಲ ಮೋಡಗಳೂ ಮಳೆಗರೆಯುವುದಿಲ್ಲ. ಎಲ್ಲೋ ಒಂದೆರಡು ಮಾತ್ರ. ಉಳಿದುವು ಸುಮ್ಮನೆ ದೊಡ್ಡದಾಗಿ ಶಬ್ದಮಾಡುತ್ತವೆ, ಅಷ್ಟೆ. ನೀನು ವ್ಯರ್ಥವಾಗಿ ಎಲ್ಲ ಮೋಡಗಳ ಮುಂದೆಯೂ ಮಳೆಯನ್ನು ಯಾಚಿಸಬೇಡ.' ಮೇಲು ನೋಟಕ್ಕೆ ಇದು ಚಾತಕ ಪಕ್ಷಿಗೆ ಉಪದೇಶ. ವಸ್ತುತಃ ಏನೂ ದಾನ ಮಾಡದೆ ಉದಾರಿಗಳೆಂದು ಹೇಳಿಕೊಳ್ಳುವ ಲೋಭಿಗಳಾದ ಶ್ರೀಮಂತರಿಗಿದು ಕಿವಿಮಾತು. ಹಾಗೇ ಪ್ರಕೃತದಲ್ಲಿಯೂ ಬೇಡನಿಗೆ ಕೊಟ್ಟ ಶಾಪ, ವಾಸ್ತವವಾಗಿ ರಾಮನಿಗೆ ಬಂಧು ವಿಯೋಗ ಉಂಟುಮಾಡಿದವರೆಲ್ಲರ ಬಗ್ಗೆಯೂ ಕವಿಯು ತೋರುವ ಆಕ್ರೋಶದ ಸಂಕೇತ. ತಪಃಶಕ್ತಿ ವ್ಯಯ ಉಂಟು ಮಾಡಬಲ್ಲ ವಾಸ್ತವ ಶಾಪವಲ್ಲ, ಕೇವಲ ಸಾಂಕೇತಿಕ.

ಹಕ್ಕಿಗಳ ಜೋಡಿಯ ಸಂಕೇತವನ್ನು ವಿಶಾಲಾರ್ಥದಲ್ಲಿ ತೆಗೆದುಕೊಂಡಾಗ ದಶರಥರಾಮರ ತಂದೆ ಮಕ್ಕಳ ಜೋಡಿ, ದಶರಥ ಮತ್ತು ರಾಣಿಯರ ಪತಿ ಪತ್ನಿಯರ ಜೋಡಿ, ರಾಮ ಭರತರ ಮತ್ತು ರಾಮಲಕ್ಷ್ಮಣರ ಸೋದರರ ಜೋಡಿ ಇವುಗಳ ವಿಯೋಗಕ್ಕೆ ಕಾರಣರಾದವರ ಬಗ್ಗೆಯೂ ಕವಿಯ ಆಕ್ರೋಶ ವ್ಯಕ್ತವಾಗುತ್ತದೆ. ಸೀತಾ ರಾಮರ ಪವಿತ್ರ ಪ್ರೇಮದ ಮಧುರ ದಾಂಪತ್ಯ ಕವಿಗೆ ಅನುಪಮ ಸುಂದರವಾಗಿ 'ಚಾರುನಿಸ್ವನ' ವಾಗಿ ಕಂಡಿದ್ದರಿಂದ ಅದನ್ನು ನಾಶಪಡಿಸಿದವರ ಮೇಲಂತೂ ಕವಿ ಮಹಾ ಆಕ್ರೋಶ ವ್ಯಕ್ತಪಡಿಸಿದ್ದಾನೆ. ಅಸಂಖ್ಯ ರಾಕ್ಷಸವಧೆ, ಶೂರ್ಪಣಖಿ ಅಯೋಮುಖಿಯರ ಕಿವಿಮೂಗು ಕೊಯ್ಯುವುದು, ಲಂಕಾದಹನ, ರಾಕ್ಷಸಿಯರ ವಿಲಾಪ ಮುಂತಾದುವೆಲ್ಲ ಕವಿಯ ಆಕ್ರೋಶದ್ದೇ ಅಭಿವ್ಯಕ್ತಿ ಎನ್ನಬೇಕು. ಹೀಗೆ ಈ ಶ್ಲೋಕ ಇಡಿಯ ರಾಮಾಯಣದ ವಿಶ್ವರೂಪವನ್ನೇ ತನ್ನಲ್ಲಿ ಅಡಗಿಸಿಟ್ಟುಕೊಂಡಿದೆ ಎನ್ನಬಹುದು.

## ರಾಮ ರಾಜ್ಯದಲ್ಲಿ ಪ್ರಜಾ ಪ್ರಭುತ್ವ

ಸೀತಾ ಪರಿತ್ಯಾಗ ಕಾಲದಲ್ಲಿ ತನ್ನ ಸೋದರರಿಗೆ ಈ ವಿಷಯದಲ್ಲಿ ಮತ್ತೆ ವಿಚಾರ ಬೇಡ. ಇದಕ್ಕೆ ಅಡ್ಡ ಬಂದರೆ ನನಗೆ ಅಸಮಾಧಾನ ಉಂಟಾಗುತ್ತದೆ. ನನ್ನ ತೋಳಿನಾಣೆ ನೀವು ಪ್ರತಿ ನುಡಿದರೆ ನಿಮ್ಮನ್ನು ಹಗೆಗಳೆಂದೆ ತಿಳಿಯುತ್ತೇನೆ ಎನ್ನುತ್ತಾನೆ. ಭರತನಿಗೆ ಚಿತ್ರಕೂಟದಲ್ಲಿ ಮಂತ್ರಾಲೋಚನೆ ಇಲ್ಲದೆ ಯಾವ ಕಾರ್ಯವನ್ನು ಮಾಡದಿರಲು ಉಪ

ದೇಶಿಸಿದ ರಾಮನೆ ಈಗ ತಮ್ಮಂದಿರ ಬಾಯಿ ಕಟ್ಟುವುದಲ್ಲದೆ ಸಮಸ್ತ ಭಕ್ತ ಸಂದೋಹ ವಿಮರ್ಶಕರ ಬಾಯಿ ಮುಚ್ಚಿಸಿಬಿಟ್ಟಿದ್ದಾನೆ'

ಈ ಆಕ್ಷೇಪವೂ ಅನುಚಿತ. ರಾಮ ಭರತನಿಗೆ ಉಪದೇಶಿಸಿದುದು ರಾಜ ಕಾರ್ಯಕ್ಕೆ ಸಂಬಂಧಪಟ್ಟ ವಿಚಾರದಲ್ಲಿ. ವೈಯಕ್ತಿಕ ವಿಚಾರದಲ್ಲಿ ಅಲ್ಲ. 'ನಿನ್ನ ಮಂತ್ರಾಲೋಚನೆ ರಹಸ್ಯವಾಗಿರದೆ ರಾಷ್ಟ್ರದಲ್ಲೆಲ್ಲೂ ಎಲ್ಲರಿಗೂ ತಿಳಿಯುವಂತಾ ಗುವುದಿಲ್ಲವಷ್ಟೆ? ನೀನು ಮಾಡಿ ಮುಗಿಸಿದ ಅಥವಾ ಮುಗಿಯುವ ಹಂತದಲ್ಲಿ ರುವ ಕಾರ್ಯವನ್ನೇ ಪರರಾಜರು ತಿಳಿಯುವಂತಿರುತ್ತದೆ ತಾನೇ ? ನೀನು ಮಾಡಬಯಸಿದ ಕಾರ್ಯವನ್ನು ಮೊದಲೇ ಅವರು ತಿಳಿಯಲು ಶಕ್ಯವಿಲ್ಲ ತಾನೆ?' ಇಲ್ಲೆಲ್ಲ ರಾಜಕೀಯದ ಬಗ್ಗೆಯೆ ರಾಮನ ಉಪದೇಶ. ವೈಯಕ್ತಿಕ ವಿಷಯದಲ್ಲಿ ಅಲ್ಲವೆನ್ನುವುದು ಸ್ಪಷ್ಟ. ಸೀತಾ ಪರಿತ್ಯಾಗ ರಾಮನ ವೈಯಕ್ತಿಕಕ್ಕೆ ಸಂಬಂಧ ಪಟ್ಟುದು. ವಿಭೀಷಣ ಸ್ವೀಕಾರ, ಶಂಬೂಕವಧೆ ಮುಂತಾದ ರಾಜಕೀಯ ವಿಷ ಯದಲ್ಲಿ ಮಂತ್ರಾಲೋಚನೆ ಮಾಡಿದ್ದಾನೆ ರಾಮ.

ಒಂದು ವೇಳೆ ಸೀತಾ ಪರಿತ್ಯಾಗ ರಾಜಕೀಯಕ್ಕೆ ಸಂಬಂಧಿಸಿದುದೆಂದಿಟ್ಟು ಕೊಂಡರೂ, ಆ ವಿಚಾರದಲ್ಲಿ ತಟಸ್ಥರಾಗಿ ಆಲೋಚನೆ ನೀಡಬಲ್ಲ ಮಂತ್ರಿಗಳು ರಾಮನಿಗೆ ಸಿಗಲಾರರು. ಅವನ ಮಂತ್ರಿಗಳೆಲ್ಲಾ ರಾಮನ ಪಕ್ಷಪಾತಿಗಳು, ರಾಮನ ಸೀತಾ ಪರಿತ್ಯಾಗ ವಿಚಾರವನ್ನು ಅವರು ಎಷ್ಟು ಮಾತ್ರಕ್ಕೂ ಒಪ್ಪ ಲಾರರೆನ್ನುವುದು ಸ್ಪಷ್ಟ. ದಶರಥ ರಾಮ ಪಟ್ಟಾಭಿಷೇಕದ ಬಗ್ಗೆ ತನ್ನ ಆಸೆ ವ್ಯಕ್ತ ಪಡಿಸಿ ಮಂತ್ರಿಗಳ ಮುಂದೆ ಆ ವಿಚಾರ ಮಂಡಿಸಿದ, 'ಅನ್ಯಾ ಮಧ್ಯಸ್ಥಚಿಂತಾತು ವಿಮರ್ದಾಭ್ಯಧಿಕೋದಯಾ' (ಅಯೋ 2–16) ತಟಸ್ಥರಾದ ನೀವು ಆಲೋ ಚನೆ ಕೊಡಬೇಕು ಎಂದ. ಯುವರಾಜಪಟ್ಟವನ್ನು ಜ್ಯೇಷ್ಠನೆಂದು ರಾಮನಿಗೆ ಕೊಡಬೇಕೆ ? ಅಥವಾ ಗುಣವಂತನೆಂದು ಭರತನಿಗೊ ಉಳಿದ ತಮ್ಮಂದಿರಿಗೊ ಕೊಡಬೇಕೆ ? ಎಂಬಲ್ಲಿ ಅಭಿಪ್ರಾಯ ಭೇದ ಬರಬಹುದು. ಇಲ್ಲಿ ಭರತನ ಸೋದರ ಮಾವ ಮತ್ತು ತಾತರಿಗೂ ರಾಮನ ಮಾವ ಜನಕನಿಗೂ ಉದ್ದೇಶ ಪೂರ್ವಕವಾಗಿಯೇ ಮಂತ್ರಾಲೋಚನೆಗೆ ಕರೆ ನೀಡಲಿಲ್ಲ. ಏಕೆಂದರೆ ಅವರೆಲ್ಲರೂ ದಶರಥನಿಗೆ ಆಪ್ತಬಂಧುಗಳು, ತನ್ನ ಇಷ್ಟವನ್ನೆಂದೂ ವಿರೋಧಿಸಲಾರರು ಅಥವಾ ತಟಸ್ಥರಾಗಲಾರರು. ಆದುದರಿಂದ 'ಪಶ್ಚಾತ್ತೌ ಶ್ರೋಷ್ಯತಃ ಪ್ರಿಯಂ'

ರಾಮ ಪಟ್ಟಾಭಿಷೇಕದ ಸಂತೋಷದ ಸಮಾಚಾರ ಅವರಿಗೆ ತಿಳಿಯಲಿ, ಸಾಕು, ಎಂದುಕೊಳ್ಳುತ್ತಾನೆ. ದಶರಥ. ಹೀಗೆ ಮಂತ್ರಾಲೋಚನೆಗೆ ತಟಸ್ಥರಾದ ಮಂತ್ರಿಗಳು ಬೇಕು, ರಾಮನಿಗೆ ಪ್ರಕೃತ ವಿಷಯದಲ್ಲಿ ತಟಸ್ಥರಾಗಿ ಸಲಹೆ ನೀಡಬಲ್ಲ ಮಂತ್ರಿಗಳಿಲ್ಲ.

ರಾಮಪಟ್ಟಾಭಿಷೇಕ ರಾಜಕೀಯ ಸಂಬಂಧಿಯಾದ್ದರಿಂದ ದಶರಥ ಮಂತ್ರಾಲೋಚನೆ ನಡೆಸಿದ. ಆದರೆ ರಾಮನನ್ನು ಕಾಡಿಗ ಅಟ್ಟುವುದು ದಶರಥನ ವೈಯಕ್ತಿಕವಾದ ವರದಾನಕ್ಕೆ ಸಂಬಂಧಿಸಿದ್ದರಿಂದ ಮಂತ್ರಾಲೋಚನೆ ಮಾಡದೆಯೆ ರಾಮನನ್ನು ಕಾಡಿಗೆ ಕಳಿಸಿದ. ತನ್ನ ಪ್ರಾಣವನ್ನೂ ಬಿಟ್ಟ. ರಾಮನೂ ತನಗೆ ಪ್ರಾಣ ಸಮಾನಳಾದ ಸೀತೆಯನ್ನು ಬಿಡುತ್ತಿದ್ದಾನೆ, ಇದು ಆತನಿಗೆ ಆತ್ಮಹತ್ಯೆಯಂಥ ಕಾರ್ಯ. ವೈಯಕ್ತಿಕವೂ ಹೌದು, ಯಾವ ಮಂತ್ರಿಗಳೂ ಒಪ್ಪಲಾಗದುದೂ ಹೌದು, ಹೀಗೆ ರಾಮ ತಮ್ಮಂದಿರ ಬಾಯಿ ಕಟ್ಟಿದ್ದಾನೆ ಹೊರತು ವಿಮರ್ಶಕರ ಬಾಯಿ ಮುಚ್ಚಿಸಿದ್ದಾನೆ ಎನ್ನಲಾಗುವುದಿಲ್ಲ.

## ಕೊಲ್ಲುವ ಹಕ್ಕು

‘ಸೀತೆ ವನವಾಸದ ಪ್ರಾರಂಭದಲ್ಲಿ ರಾಮನಿಗೆ ‘ನಿನಗೆ ರಾಕ್ಷಸರನ್ನು ವಿನಾ ಕಾರಣ ಕೊಲ್ಲಲು ಏನು ಅಧಿಕಾರವಿದೆ ? ನೀನು ನಿನಗೆ ತೊಂದರೆ ಮಾಡದ ರಾಕ್ಷಸರನ್ನೇಕೆ ಕೊಲ್ಲುತ್ತಿ ? ನೀನೇಕೆ ಅರಣ್ಯದಲ್ಲಿ ಮುಂದುವರಿದು ರಾಕ್ಷಸರ ಪ್ರಪಂಚ ದುರಾಕ್ರಮಣ ಮಾಡುತ್ತಿ ? ಜಟಾವಲ್ಕಲದಲ್ಲಿ ಬಂದ ತಾಪಸಿ ಧನುರ್ಬಾಣ ತಂದದ್ದೇಕೆ ? ಎಂದು ತರಾಟೆಗೆ ತೆಗೆದುಕೊಳ್ಳುತ್ತಾಳೆ. ಇಲ್ಲಿ ಸೀತೆ ತನ್ನ ಭೂತ ದಯೆಯನ್ನು ಸಾರುವಂತೆ ತನ್ನ ಪ್ರಜ್ಞಾ ಶ್ರೀಮಂತಿಕೆಯನ್ನೂ ರಾಮನಿಂತಲೂ ಹೆಚ್ಚಿನ ವ್ಯಕ್ತಿ ವಿಕಾಸತೆಯನ್ನೂ ಆ ಮೂಲಕ ವ್ಯಕ್ತಿ ವಿಶೇಷತೆಯನ್ನೂ ರುಜುವಾತು ಪಡಿಸುತ್ತಾಳೆ’

—ಇದು ವಾಲ್ಮೀಕಿಯ ಅಭಿಪ್ರಾಯವಲ್ಲ. ಆತ ತನ್ನ ಅಭಿಪ್ರಾಯ ವ್ಯಕ್ತಪಡಿಸಲು ಸೀತೆಯ ಮೇಲಿನ ಪ್ರಶ್ನೆಗಳಿಗೆಲ್ಲ ರಾಮನ ಬಾಯಿಯಿಂದ ಸಮಂಜಸವಾದ ಉತ್ತರ ಹೇಳಿಸಿದ್ದಾನೆ. ಹೆಚ್ಚು ಕಡಿಮೆ ಈ ಪ್ರಶ್ನೆಗಳನ್ನೇ ವಿರಾಧನೂ

ಕೇಳಿದ್ದಾನೆ. ಅವನು ಬಿಲ್ಲುಬಾಣಗಳ ಬಗ್ಗೆ ಮಾತ್ರವಲ್ಲ, ಸೀತೆಯ ಬಗ್ಗೆಯೂ 'ಒಬ್ಬಳು ಹೆಣ್ಣನ್ನು ಏಕೆ ಜೊತೆಗೆ ಇಟ್ಟುಕೊಂಡಿದ್ದೀರಿ ?' ಎಂದು ಕೇಳಿದ್ದಾನೆ. ಅದು ಅಧರ್ಮವೆಂದಿದ್ದಾನೆ. ವಾಲ್ಮೀಕಿಯ ಅಭಿಪ್ರಾಯದಲ್ಲಿ ರಾಮ ಸ್ತ್ರೀಯರೂ ರಾಕ್ಷಸರೂ ಧರ್ಮವನ್ನು ಬೋಧಿಸುವಷ್ಟು ಅಜ್ಞಾನಿಯೆ ? ಅವನಿಗಿಂತ ರಾಕ್ಷಸರೇ ಪ್ರಜ್ಞಾಶ್ರೀಮಂತರೇ ? ಹಾಗಾದರೆ ಈ ಧರ್ಮವೆಂದರೇನು ? ಪ್ರಜ್ಞೆಯೆಂದರೇನು ?

ರಾಮ ವನವಾಸಕ್ಕೆ ಬಂದುದು ಬ್ರಾಹ್ಮಣರ ತಾಪಸಧರ್ಮ ಆಚರಿಸಲು ಅಲ್ಲ. ವರ್ಣಾಶ್ರಮ ಧರ್ಮದ ಕಟ್ಟುಪಾಡು ದೃಢವಾಗಿದ್ದ ಕಾಲ ಅದು. ಆ ಕಟ್ಟುಪಾಡನ್ನು ಒಲ್ಲದ ವಿರಾಧ ರಾಮಲಕ್ಷ್ಮಣರನ್ನು ಆಕ್ಷೇಪಿಸಿದ್ದು ಸ್ವಾಭಾವಿಕ. ಸೀತೆ ಆಕ್ಷೇಪಿಸಿದ್ದು ಸ್ವಾಭಾವಿಕವಲ್ಲ. ಅವಳ ಅಂತರಂಗದಲ್ಲಿ ಬೇರೆಯೇ ಇತ್ತು. ವಿರಾಧನಿಗೆ ಸೀತೆಯ ಮೇಲೆ ಕಣ್ಣು. ಬಿಲ್ಲುಬಾಣಗಳ ಹೆದರಿಕೆ. ಆದ್ದರಿಂದ 'ಈ ಹೆಣ್ಣನ್ನೂ ಬಿಲ್ಲುಬಾಣಗಳನ್ನೂ ಇಟ್ಟುಕೊಂಡುದು ಅಧರ್ಮ' ಎನ್ನುತ್ತಿದ್ದಾನೆ. ಸೀತೆಯು ಅಯೋಧ್ಯೆಯಿಂದ ದಂಡಕಾರಣ್ಯದವರೆಗೆ ಬರುವತನಕವೂ ಸುಮ್ಮನಿದ್ದು, ಈಗ ಬಿಲ್ಲುಬಾಣಗಳು ಅಧರ್ಮವೆನ್ನಲು ಏನೋ ಕಾರಣವಿದೆ. ವಿರಾಧನ ಪ್ರಸಂಗ ಈಗ ತಾನೆ ಆಗಿಹೋಗಿದೆ. ಈ ವಿರಾಧನಂಥ ರಾಕ್ಷಸರು ಇನ್ನೆಷ್ಟುಮಂದಿ ತನ್ನನ್ನು ಅಪಹರಿಸಲು ಬರುವರೊ ಎಂದು ಆತಂಕ ಸೀತೆಗೆ. ರಾಮನ ವಿರಹದ ಯೋಚನೆಯನ್ನು ಆಕೆ ಸಹಿಸಲಾರಳು. ಅದನ್ನು ಅಂತರಂಗದಲ್ಲಿ ಮುಚ್ಚಿಟ್ಟುಕೊಂಡು ರಾಮನಿಗೆ ಬಿಲ್ಲುಬಾಣ ತ್ಯಜಿಸಿ ಬ್ರಾಹ್ಮಣ ಧರ್ಮ ಆಚರಿಸಲು ಉಪದೇಶಿಸುತ್ತಿದ್ದಾಳೆ. ರಾಮ ಒಪ್ಪುವುದಿಲ್ಲ. ಆತ ಕ್ಷತ್ರಿಯ. ಕ್ಷತ್ರಿಯರು ಕಾಡಿನಲ್ಲಿರಲಿ, ನಾಡಿನಲ್ಲೆ ಇರಲಿ, ವರ್ಣಾಶ್ರಮ ಧರ್ಮ ರಕ್ಷಕರಾಗಿದ್ದು ಆ ಧರ್ಮವನ್ನು ವಿರೋಧಿಸುವವರನ್ನು ಶಿಕ್ಷಿಸಲೇ ಬೇಕು. (ಅರ. 1–20) ಆದ್ದರಿಂದ ಬಿಲ್ಲುಬಾಣಗಳು ಬೇಕು. ತನಗೆ ತೊಂದರೆ ಮಾಡದ ರಾಕ್ಷಸರನ್ನು ರಾಮ ತಾನೇಕೆ ಕೊಲ್ಲಬೇಕು ಎಂಬ ಪ್ರಶ್ನೆಗೆ ರಾಮ ಉತ್ತರ ಕೊಟ್ಟಿದ್ದಾನೆ. ಮುನಿಗಳ ರಕ್ಷಣೆಗಾಗಿ, ಅವರ ವೈರಿಗಳನ್ನು ತನ್ನ ವೈರಿಗಳೆಂದೆ ಬಗೆದು ಕೊಲ್ಲಬೇಕಾಗುತ್ತದೆ. ವನದಲ್ಲಿ ಜೀವಿಸುವ ಹಕ್ಕು ರಾಕ್ಷಸರಿಗೆ ಇದೆ ಎನ್ನುವುದೇನೋ ನಿಜವೆ. ಆದರೆ ಪರಸ್ಪರ ಪ್ರೀತಿಯಿಂದ

ನೆಮ್ಮದಿಯಿಂದ ಇದ್ದಷ್ಟು ಕಾಲ ಮಾತ್ರ ಆ ಹಕ್ಕು. ಹಿಂಸಾನಿರತರಾದವರಿಗೆ ಆ ಹಕ್ಕು ಇರುವುದಿಲ್ಲ. ಮುನಿಗಳನ್ನು ತಿನ್ನುತ್ತ ವನದಲ್ಲಿ ತಾನು ಸಂಚರಿಸುವವನೆಂದು ವಿರಾಧ ಹೇಳಿದ್ದಾನೆ. ಇಂಥವರನ್ನು ಕ್ಷತ್ರಿಯನಾದವನು ದಂಡಿಸಲೇಬೇಕು.

'ವೈದಿಕರು ಸ್ವತಃ ತಪಃಶಕ್ತಿಯಿಂದ ರಾಕ್ಷಸರನ್ನು ನಾಶಮಾಡಬಲ್ಲರು. ಆದರೆ ಅವರಿಗೆ ಅದನ್ನು ಖರ್ಚುಮಾಡಲು ಇಷ್ಟವಿಲ್ಲ. ಅವರಿಗೆ ಸುಲಭವಾಗಿ ಕ್ಷತ್ರಿಯನೊಬ್ಬನು ದೊರೆತಿದ್ದಾನೆ. ತನ್ನ ಮೇಲೆ ಶಸ್ತ್ರಧಾರಣೆಯ ಹೊರೆಯನ್ನು ಹೇರಿಕೊಂಡು ಇಡೀ ರಾಮಾಯಣದ ಹಿಂಸಾಗಾಥಕ್ಕೆ ಕಾರಣನಾಗುತ್ತಾನೆ.'

—ಇಲ್ಲಿ ವೈದಿಕರೆಲ್ಲ ಸ್ವಾರ್ಥಿಗಳು, ರಾಮ ಸ್ವಭಾವತಃ ಹಿಂಸಾಚಾರಿ ಎಂದಂತಾಯಿತು. ಇದು ತಪ್ಪು. ವೈದಿಕರು ತಮ್ಮ ತಪಃಶಕ್ತಿಯನ್ನು ರಾಕ್ಷಸವಧಕ್ಕೆ ಉಪಯೋಗಿಸಿದ್ದಾದರೆ ಅಂತರ್ಮುಖರಾಗಿ ಅಧ್ಯಾತ್ಮ ಚಿಂತನೆಮಾಡುವುದನ್ನು ಬಿಟ್ಟಂತಾಗುತ್ತದೆ. ಕ್ಷತ್ರಿಯರಿಗೆ, ಅಧ್ಯಾತ್ಮಚಿಂತನೆಯಲ್ಲಿ ಅಂತರ್ಮುಖರಾದವರನ್ನು ಕಾಪಾಡುವುದು ಕರ್ತವ್ಯ. ಅವರಿಂದ ಆ ತಪಸ್ಸಿನ ಕಾಲಂಶ ಅವರಿಗೂ ಸಿಗುತ್ತದೆ. (ಅರ. 6–24) ಆದ್ದರಿಂದ ರಾಮ ಕರ್ತವ್ಯವೆಂದು ಶಸ್ತ್ರಧಾರಣೆ ಮಾಡಿದ್ದಾನೆ ಹೊರತು ಹಿಂಸಾಚಾರ ಸ್ವಭಾವದಿಂದಲ್ಲ. ರಾಮಾಯಣದ ಹಿಂಸಾಗಾಥಕ್ಕೆ ರಾಮ ಕಾರಣನಾದುದೇನೊ ನಿಜವೆ. ಆದರೆ ರಾಕ್ಷಸರ ಕೈಯಲ್ಲಿ ಒಂದೇ ಸಮನೆ ಹಿಂಸೆಗೊಳಗಾಗುತ್ತಿದ್ದ ವೈದಿಕರ ರಕ್ಷಣೆಗೆ ಈ ಹಿಂಸಾ ಗಾಥವನ್ನು ಬಿಟ್ಟು ಬೇರೆ ಮಾರ್ಗವಿರಲಿಲ್ಲ.

'ರಾಮನ ವೈದಿಕ ನಿಷ್ಠೆ ಸೀತೆಯಲ್ಲಿನ ಲಕ್ಷ್ಮಣನಲ್ಲಿನ ಅನುರಕ್ತತೆಯನ್ನು ಗೌಣಗೊಳಿಸುವಷ್ಟರದ್ದು. ಏಕೆ, ಅವರಿಬ್ಬರನ್ನೂ ತ್ಯಾಗ ಮಾಡಿ ತಾನೂ ಮಹಾಪ್ರಸ್ಥಾನದಲ್ಲಿ ದರ್ಭೆಹಿಡಿದು ಓಂಕಾರ ಜಪಿಸುತ್ತ ತನ್ನನ್ನು ಬಲಿದಾನ ಮಾಡಿಕೊಳ್ಳುತ್ತಾನೆ' –

ಇದನ್ನು ಆಕ್ಷೇಪವೆಂದು ಬಗೆಯಲಾಗದು. ಆದರ್ಶ ಕ್ಷತ್ರಿಯರಾಜನಲ್ಲಿ ಇಂಥ ಗುಣವಿರಬೇಕು ಎಂದೆ ನಾವು ಬಯಸುತ್ತೇವೆ.

# ಶೂದ್ರ ತಪಸ್ವಿ

'ನಾನು ಶೂದ್ರಯೋನಿಯಲ್ಲಿ ಜನಿಸಿದವನು. ನನ್ನ ಹೆಸರು ಶಂಬೂಕ. ರಾಮ, ಈ ಶರೀರ ಸಹಿತವಾಗಿ ದೇವತ್ವವನ್ನು ಬಯಸುತ್ತಿದ್ದೇನೆ. ನಾನು ಸುಳ್ಳು ಹೇಳುವುದಿಲ್ಲ. ದೇವಲೋಕವನ್ನು ಬಯಸಿ ಉಗ್ರತಪಸ್ಸನ್ನಾಚರಿಸುತ್ತಿದ್ದೇನೆ,' ಎಂದು ತಲೆಕೆಳಗಾಗಿಯೆ ಇದ್ದ ಶೂದ್ರ ತಪಸ್ವಿ ಹೇಳುತ್ತಿರುವಂತೆಯೆ ವಾಲ್ಮೀಕಿಯ ರಾಮನು ಯಾವ ಒಂದು ಮಾನವೀಯವಾದ ಅಳುಕು ಆತಂಕ ಅನುಕಂಪದ ಲವಲೇಶವೂ ಇಲ್ಲದಂತೆ ಕರ್ತವ್ಯದ ಕೀಲು ಗೊಂಬೆಯಂತೆ ಯಾಂತ್ರಿಕವಾಗಿ ಶಂಬೂಕನ ಶಿರಚ್ಛೇದ ಮಾಡುತ್ತಾನೆ. ಅದೇ ಸಂದರ್ಭ ದಲ್ಲಿ ಭವಭೂತಿಯ ರಾಮ ಮಾನವೀಯತೆಯ ಚಿಲುಮೆಯಲ್ಲಿ ಚಿಮ್ಮಿ, ಕೊಲ್ಲಬೇಕೆಂದಿದ್ದ ಬಲಗೈ ಏಳದವನಾಗುತ್ತಾನೆ. ಸೀತೆಯನ್ನು ಕಾಡಿಗಟ್ಟಿದ ಕೈಗೆ ಕರುಣೆ ಎಲ್ಲಿ ಎನ್ನುತ್ತಾನೆ. ಭವಭೂತಿಯ ಮಾನವೀಯ ರಾಮನೆದುರು ವಾಲ್ಮೀಕಿಯ ರಾಮ ಒಬ್ಬ ಯಾಂತ್ರಿಕ ಕೊಲೆ ಗಡುಕನಾಗಿ ನಿಲ್ಲುತಾನೆ.'

—ಈ ಆಕ್ಷೇಪ ಆಕ್ಷೇಪಣೀಯವಾದುದು. ಭವಭೂತಿ ತನ್ನ ರಾಮ ನನ್ನು ಮಾನವೀಯನನ್ನಾಗಿ ಮಾಡುವ ಭರದಲ್ಲಿ ವಾಲ್ಮೀಕಿಯ ರಾಮನನ್ನು ಕೊಲೆಗಡುಕನನ್ನಾಗಿ ಮಾಡುತ್ತಿದ್ದಾನೆಯೆ ? ಹಾಗಿದ್ದರೆ 'ಇದಂ ಕವಿಭ್ಯಃ ಪೂರ್ವೇಭ್ಯಃ ನಮೋ ವಾಕಂ ಪ್ರಶಾಸ್ಮಹೇ' ಎಂದು ವಾಲ್ಮೀಕಿಮುನಿಗೆ ಭಕ್ತಿ ಪೂರ್ವಕ ನಮನಮಾಡಿ ಉತ್ತರ ರಾಮ ಚರಿತ್ರೆ ನಾಟಕದ ಕೃತಿ ರಚಿಸಲು ಅದರಲ್ಲಿ ವಾಲ್ಮೀಕಿಯ ಗುಣಗಾನಮಾಡಲು ಮುಂದಾಗುವನೆ ? ವಸ್ತುತಃ ವಾಲ್ಮೀಕಿಯ ರಾಮ ಸಹಜವಾಗಿ ಕ್ಷಾತ್ರಧರ್ಮದ ಪ್ರತೀಕವಾಗಿ ನಿಲ್ಲುತ್ತಾನೆ. ಆ ಧರ್ಮದಂತೆ ಲೆಕ್ಕವಿಲ್ಲದಷ್ಟು ರಾಕ್ಷಸರನ್ನು ಒಂದಿಷ್ಟೂ ಕರುಣೆ ತೋರದೆ ಕೊಂದವ ರಾಮ. ಒಬ್ಬ ಶೂದ್ರ ತಪಸ್ವಿಯನ್ನು ಕೊಲ್ಲಲು ಕರುಣೆಯಿಂದ ಹಿಂಜರಿಯುವುದು ಸಂಭವನೀಯವಲ್ಲ. ಕ್ಷತ್ರಿಯ ವೀರನು ಹೀಗೆ ತನ್ನ ಜಾತಿಗೆ ಅಸಹಜವಾದ ಕರುಣೆ ತುಂಬಿದ್ದರೆ ರಣರಂಗಕ್ಕೇ ಕಾಲಿಡಲಾರ. ಶೌರ್ಯ ದಿಂದ ಕಾದಾಡಲಾರ. ಕ್ಷತ್ರಿಯರಿಗೆ ಕರುಣೆ ಎಂಬುದೆ ಇರಬಾರದೆಂದಲ್ಲ. ಅಧರ್ಮಿಗಳಲ್ಲಿ ಇರಬಾರದು. ಧಾರ್ಮಿಕರ ಬಗ್ಗೆ ಎಲ್ಲ ಕರುಣೆ ಇರಬೇಕು. ಶೂದ್ರ ತಪಸ್ವಿ ಅಧರ್ಮಿ ಎಂದಮೇಲೆ ಭವಭೂತಿಯ ರಾಮ ಕರುಣೆ ತೋರು

ವುದು ಆವನ ಕ್ಷಾತ್ರಧರ್ಮಕ್ಕೇ ಕಳಂಕ ತರುವಂತಹುದು. ಶೂದ್ರನೊಬ್ಬ ತಪಸ್ಸು ಮಾಡಿದ ಮಾತ್ರಕ್ಕೆ ಅದು ಅಧರ್ಮವಾಗುವುದೆಂದು ನಾವು ಒಪ್ಪುವುದಿಲ್ಲ ಎಂದರೆ ಆ ಮಾತು ಬೇರೆ. ರಾಮ ಮತ್ತು ಅವನ ಕಾಲದ ಎಲ್ಲ ಪ್ರಜೆಗಳೂ ಒಪ್ಪುವವರು. ಆಗಿನ ಆ ವಾತಾವರಣದಲ್ಲಿ ವಾಲ್ಮೀಕಿಯ ರಾಮನ ವರ್ತನೆ ಸಮರ್ಥನೀಯವೆ ಸರಿ. ಭವಭೂತಿಯ ರಾಮ ಅತ್ತ ಪೂರ್ತಿ ವಾಲ್ಮೀಕಿಯ ಕಾಲದವನೂ ಅಲ್ಲ, ಆಧುನಿಕ ಕಾಲದವನೂ ಅಲ್ಲದ ತ್ರಿಶಂಕು ಆಗಿದ್ದಾನೆ. ಅಧರ್ಮಿಯಾದ ಶೂದ್ರ ತಪಸ್ವಿಯನ್ನು ಕೊಲ್ಲುತ್ತ ವಾಲ್ಮೀಕಿಯ ಕಾಲದಲ್ಲಿ ಒಂದು ಕಾಲಿಟ್ಟರೆ, ಶೂದ್ರ ತಪಸ್ಸು ಮಾಡುವುದು ಅಧರ್ಮವಲ್ಲ ಎಂಬ ಭಾವನೆಯಿಂದ ಅವನಲ್ಲಿ ಕರುಣೆ ತೋರುತ್ತ ಆಧುನಿಕ ಕಾಲದಲ್ಲಿ ತನ್ನ ಎರಡನೆ ಕಾಲಿಡುತ್ತ ನಿಲ್ಲುತ್ತಾನೆ!

ಆಧುನಿಕ ಕಾಲದ ದೃಷ್ಟಿಯಿಂದ ವಾಲ್ಮೀಕಿರಾಮಾಯಣ ಓದಿದರೂ ರಾಮ ಯಾಂತ್ರಿಕ ಕೊಲೆ ಗಡುಕನಾಗಬೇಕಾಗಿಲ್ಲ. ರಾಮ ಶೂದ್ರ ತಪಸ್ವಿಯನ್ನು ಕೊಂದುದು ಶೂದ್ರನಾಗಿದ್ದು ತಪಸ್ಸು ಮಾಡಿದ್ದನೆಂಬ ಕಾರಣದಿಂದಲ್ಲ, ಆತ ದುರ್ಮತಿಯಾಗಿದ್ದನೆಂದು. (ಉ. 74–30) ಆತ 'ದುರ್ಮತಿ' ಎನ್ನಲು ಕಾರಣ ಮುಖ್ಯವಾಗಿ ಸಶರೀರನಾಗಿ ದೇವತ್ವ ಪಡೆಯಲು ಆಶಿಸಿದುದು (ಉ. 76–2) ಈ ಆಸೆ ದುರಾಸೆ. ದೇವತೆಗಳು ಒಪ್ಪುವಂಥಹುದಲ್ಲ. ರಾಮನ ಪೂರ್ವಜನೆ ಆದ ತ್ರಿಶಂಕು ವಿಶ್ವಾಮಿತ್ರನಂಥ ಉಗ್ರ ತಪೋಬಲವುಳ್ಳವನ ಸಹಾಯದಿಂದಲೂ ಸಶರೀರವಾಗಿ ಸ್ವರ್ಗವನ್ನು ಪ್ರವೇಶಿಸಲಾರದೆ 'ತ್ರಿಶಂಕು' ಆದ! ಅಲ್ಪ ಮಾನವನಾದ ಶಂಬೂಕ ದೇವತೆಗಳ ನಿಯಮಕ್ಕೆ ವಿರುದ್ಧವಾಗಿ ಸಶರೀರವಾಗಿ ದೇವತ್ವ ಪಡೆಯಲು ತಪಸ್ಸುಮಾಡಿ ದೇವತೆಗಳ ಆಗ್ರಹದಿಂದ ಲೋಕವೆಲ್ಲ ಕಷ್ಟಕ್ಕೊಳಗಾಗುವಂತೆ ಮಾಡಿದ ಸ್ವಾರ್ಥಿ. ಲೋಕಕ್ಕೆ ದುಃಖ ಉಂಟು ಮಾಡುತ್ತ ತನ್ನ ಸುಖ ಸಂಪಾದಿಸುವ ಈ ಪ್ರವೃತ್ತಿ ಲೋಕ ಸುಖಕ್ಕಾಗಿ ತನ್ನ ಸುಖವನ್ನೆ ಬಲಿದಾನ ಮಾಡುವ ರಾಮನ ಸ್ವಭಾವಕ್ಕೇ ವಿರುದ್ಧ. ಆದ್ದರಿಂದ ರಾಮ ಶಂಬೂಕನನ್ನು ಕೊಂದ. ಇದು ಹೂಮಳೆಗರೆದ ದೇವತೆಗಳ ಮಾತಿನಿಂದ ಸ್ಪಷ್ಟವಾಗುತ್ತದೆ. ಅವರು 'ರಾಮ, ನೀನು ಶೂದ್ರ ತಪಸ್ವಿಯನ್ನು ಕೊಂದು ಜಾತಿ ಪದ್ಧತಿಯನ್ನು ಕಾಪಾಡಿದೆ' ಎಂದಿಲ್ಲ. 'ಸ್ವರ್ಗ ಭಾಙ್ನಹಿ ಶೂದ್ರೋಽಯಂ' 'ಈ ಶೂದ್ರನಿಗೆ ಸ್ವರ್ಗಸಿಗದಂತೆ

ಮಾಡಿದಿ' ಎಂದರು. ಇಲ್ಲಿ ಸ್ವರ್ಗವೆಂದರೆ ಹಿಂದೆ ಶಂಬೂಕನೇ ಹೇಳಿದಂತೆ ಸಶರೀರ ಸ್ವರ್ಗ.

ವಾಸ್ತವವಾಗಿ ಬರಿ ಸಶರೀರ ಸ್ವರ್ಗವೂ ಅಲ್ಲ, ಶಂಬೂಕನೇ ಹೇಳಿದಂತೆ ದೇವತ್ವ, ಮಹಾದೇವತ್ವ ಅಂದರೆ ರುದ್ರದೇವರ ಪದವಿ ಸಿಗಬೇಕು. ಪಾರ್ವತೀ ದೇವಿಯನ್ನು ಕೂಡಬೇಕು ಎಂಬ ದುರ್ಮತಿಯವ ಈ ಶಂಬೂಕ. ಹಿಂದೆ ಭಸ್ಮಾಸುರನೂ ಶಿವನ ತಲೆಯ ಮೇಲೆ ಕೈಯಿಟ್ಟು ಭಸ್ಮ ಮಾಡಿ ಪಾರ್ವತೀ ದೇವಿಯನ್ನು ಪಡೆಯಬೇಕೆಂದು ಬಯಸಿದ್ದ. ಹೀಗೆ ಇನ್ನೂ ಅನೇಕ ಅಸುರರು ಪಾರ್ವತಿಯನ್ನು ಬಯಸಿದ್ದರು, ಇಂಥ ನೀಚ ಬುದ್ಧಿಯವನನ್ನು ರಾಮ ಕೊಂದುದು ದೇವತೆಗಳಿಗೆ ಆನಂದ ಉಂಟು ಮಾಡಿತು. ಹೂ ಮಳೆಗರೆದರು, ಇಲ್ಲಿ ರಾಮನು ಕರುಣೆ ತೋರುವ ಸಂದರ್ಭವೇ ಇಲ್ಲ. ಸುಮ್ಮನೆ ಅವನನ್ನು ಅಮಾನವೀಯನೆನ್ನುವುದು ಅನ್ಯಾಯವಾಗುತ್ತದೆ.

ಭವಭೂತಿಯ ಶಂಬೂಕ ಇಂಥ ದುರ್ಮತಿಯವನಲ್ಲ, ರಾಮನ ಕೈಯಿಂದ ಹತನಾದೊಡನೆ ದಿವ್ಯರೂಪದಿಂದ ಸ್ವರ್ಗಕ್ಕೇ ಹೋಗುತ್ತಾನೆ. ಅವನು ಒಳ್ಳೆಯವನಾದ್ದರಿಂದಲೆ ರಾಮ ಕರುಣೆ ತೋರಿದ್ದು ಸಹಜ. ಕರುಣೆ ತೋರದಿದ್ದಲ್ಲಿ ಆತ ನಿಜವಾಗಿಯೂ ಕೊಲೆಗಡುಕನಾಗುತ್ತಿದ್ದ. ಮೂಲಕತೆಯನ್ನು ತಮ್ಮ ಕಾವ್ಯ ನಾಟಕಗಳಲ್ಲಿ ರಸಾನುಗುಣವಾಗಿ ಮಾರ್ಪಾಡು ಮಾಡುವ ಸ್ವಾತಂತ್ರ್ಯವಿರುವುದರಿಂದ ಭವಭೂತಿ ತನ್ನ ಶೂದ್ರ ತಪಸ್ವಿಯ ಪಾತ್ರಕ್ಕೆ ದೇವತಾ ಪುರುಷನೊಬ್ಬನನ್ನೆ ಆರಿಸಿಕೊಂಡ. ರಾಮನೂ ಶೂದ್ರ ತಪಸ್ವಿಯನ್ನು ಶೂದ್ರನೆಂಬ ಕಾರಣದಿಂದಲೆ ಕೊಲ್ಲಲು ಹಿಂಜರಿದ. ಅಶರೀರವಾಣಿಯ ಪ್ರೇರಣೆ ಬಲವತ್ತಾಗಿದ್ದುದರಿಂದ ಉಪಾಯಗಾಣದೆ ಕೊಂದ.

ವಾಲ್ಮೀಕಿಯ ರಾಮನಿಗೂ ಮುನಿಗಳು ಶೂದ್ರ ತಪಸ್ವಿಯನ್ನು ಕೊಲ್ಲೆಂದು ಎಲ್ಲೂ ಹೇಳಲಿಲ್ಲ. 'ದುಷ್ಕೃತಂ ಯತ್ರ ಪಶ್ಯೇಥಾಸ್ತತ್ರ ಯತ್ನಂ ಸಮಾಚರ (ಉ. 74-33) 'ದುಷ್ಕರ್ಮ ಕಂಡಲ್ಲಿ ಅದನ್ನು ನಿವಾರಿಸಲು ಯತ್ನಿಸು' ಎಂದಿಷ್ಟೇ ಹೇಳಿದ್ದರು. ಆದರೆ ಶಂಬೂಕ ತಾನು ರುದ್ರಪದವಿಯನ್ನು ಬಯಸಿದ್ದೇನೆ. ಸಶರೀರನಾಗಿ ಆ ಪದವಿಯನ್ನೇರಬೇಕೆಂದು ಉಗ್ರ, ಭಯಂಕರ ಅಂದರೆ ಲೋಕಕ್ಕೆ ಹಾನಿಕರವಾದ ತಪಸ್ಸು ಮಾಡುತ್ತಿದ್ದೇನೆ ಎಂದುದನ್ನು ಕೇಳಿದಾಗ ತಟ್ಟನೆ ಖಡ್ಗವನ್ನು ಬೀಸಿ ಅವನ ತಲೆಯನ್ನು ತರಿದ,

ದೇವ ಎಂದರೆ ಮಹಾದೇವ ಹೇಗೆ '? ಎಂದರೆ, ರುದ್ರ ಎಂದರೆ ಮಹಾರುದ್ರ, ಹೊರತು ಉಳಿದ ಏಕಾದಶ ರುದ್ರರಲ್ಲಿ ಒಬ್ಬನಲ್ಲ ಎನ್ನುವ ಹಾಗೆ. ಅಥವಾ ವ್ಯಾಸ ಎಂದರೆ ವೇದವ್ಯಾಸ, ಭೀಮ ಎಂದರೆ ಭೀಮಸೇನ ಎನ್ನುವಂತೆಯೆ ದೇವ ಎಂದರೆ ಮಹಾದೇವ, ಅಸುರರು ಸಾಮಾನ್ಯವಾಗಿ ದೇವ ಪದವಿ ಎಂದರೆ ರುದ್ರ ದೇವರ ಪದವಿಯನ್ನೆ ಬಯಸಿ ತಪಸ್ಸು ಮಾಡುವುದು ಪುರಾಣಕತೆಗಳಲ್ಲಿ ಕಂಡಿದೆ. ಆದ್ದರಿಂದಲೂ ಇಲ್ಲಿ ದೇವನೆಂದರೆ ರುದ್ರದೇವನೆ. ಹಾಗೆ ರಾಮಾಯಣ ವ್ಯಾಖ್ಯಾನಗಳಲ್ಲಿ ಕೆಲವು ಅಭಿಪ್ರಾಯವಟ್ಟಿವೆ.

ಶೂದ್ರ ತಪಸ್ವಿ ಒಂದುವೇಳೆ ಇಂಥ ದುರ್ಮತಿಯವನಲ್ಲವೆಂದರೂ ರಾಮ ತಪ್ಪಿತಸ್ಥನಾಗುವುದಿಲ್ಲ. ಆ ಪಕ್ಷದಲ್ಲಿ ರಾಮ ತನ್ನ ಅಂತರಂಗದಲ್ಲಿಯೆ ದುಃಖಪಟ್ಟಿದ್ದ. ಹೊರಗೆ ವ್ಯಕ್ತಪಡಿಸಲಿಲ್ಲ ಎನ್ನೋಣ. ಭವಭೂತಿಯ ರಾಮ ನಾಟಕದ ರಾಮನಾದ್ದರಿಂದ, ತನ್ನ ಅಂತರಂಗವನ್ನು ತೋಡಿಕೊಂಡ. ವಾಲ್ಮೀಕಿಯ ರಾಮ ಒಳಗೇ ಅದುಮಿಟ್ಟುಕೊಂಡ. ಸೀತಾ ಪರಿತ್ಯಾಗದಲ್ಲಿಯೂ ಆತ ಭವಭೂತಿಯ ರಾಮನಂತೆ ಅಳಲಿಲ್ಲ, ಕೇವಲ ಕಣ್ಣೀರು ಹಾಕಿ ತಲೆ ತಗ್ಗಿಸಿಕೊಂಡು ಕುಳಿತು ದುಃಖಿಸಿದ. ಅಂಥವನು ಶಂಬೂಕ ವಧೆಯಲ್ಲಿ ಅಳುತ್ತಾನೆಯೆ ? ಭವಭೂತಿ ಇದನ್ನು ಮನಸ್ಸಿನಲ್ಲಿಟ್ಟುಕೊಂಡು ವಾಲ್ಮೀಕಿಯ ರಾಮನನ್ನೆ ಕುರಿತು ಈ ಮಾತನ್ನು ಹೇಳಿರಬಹುದು—'ಸೀತಾ ವಿವಾಸನ ಪಟೋಃ ಕರುಣಾ ಕುತಸ್ತೇ ?' 'ಸೀತಾ ಪರಿತ್ಯಾಗದಲ್ಲಿಯೂ ಮುಕ್ತಕಂಠದಿಂದ ಅಳದಿದ್ದ ನೀನು. ಶಂಬೂಕ ವಧೆಯಲ್ಲಿ ನೀನೆಲ್ಲಿ ಅಳುವೆ. ಹೇಳು !' ಅಷ್ಟೊಂದು ಗೂಢಾಕಾರೇಂಗಿತನಾದವ ವಾಲ್ಮೀಕಿಯ ರಾಮ. ಆವನೇನೂ ಹೃದಯ ಶೂನ್ಯನಲ್ಲ ಎಂದು ಭವಭೂತಿ ವಾಲ್ಮೀಕಿಯ ರಾಮನನ್ನೆ ಮಾನವೀಯನನ್ನಾಗಿ ಮಾಡಿ ತೋರಿಸುತ್ತಿದ್ದಾನೆ ಎನ್ನಬಹುದಲ್ಲವೆ ? ಈಗ 'ಇದಂ ಕವಿಭ್ಯ : ಪೂರ್ವೇಭ್ಯ :' ಎಂದು ವಾಲ್ಮೀಕಿಗೆ ಭವಭೂತಿ ನಮಿಸಿದುದೂ ಉಚಿತವೆ. ಬೇರೆ ಬೇರೆ ನೆವದಿಂದ, ನಾಟಕದಲ್ಲಿ ನಿಂತೆ, ಹೊರಗಿನ ಮಾತನ್ನಾಡುವ ಕಲೆ ಭವಭೂತಿಗೆ ಸಿದ್ಧಿಸಿದೆ. ಉದಾ : ಮಾಲತೀ ಮಾಧವದಲ್ಲಿ ತನ್ನನ್ನೆ ಪರೋಕ್ಷವಾಗಿ ಅಲ್ಲಲ್ಲಿ ಹೊಗಳಿಕೊಳ್ಳುತ್ತಾನೆ–ಅಹೋ ವೈದಗ್ಧ್ಯಂ ಅಹೋ ಉಪನ್ಯಾಸಶುದ್ಧಿ : ಶಾಸ್ತ್ರೇಷು ನಿಷ್ಠಾ ! ಸರಸರಮಣೀಯತಾ ಸಂವಿಧಾನಸ್ಯ ! ಅಸ್ತಿವಾ ಕುತಶ್ಚಿದ್ ಏವಂಭೂತಂ ವಿಚಿತ್ರರಮಣೀಯೋಜ್ವಲಂ ಮಹಾಪ್ರಕರಣಂ ?. –ಇತ್ಯಾದಿ.

# ರಾಮನ ಸಂವೇದನಾ ಶೀಲತೆ

ರಾಜನಾಗಿ ಕ್ಷತ್ರಿಯನಾಗಿ ಶಂಬೂಕನನ್ನು ಕೊಂದ ರಾಮ ಮನುಷ್ಯನಾಗಿ ಎಲ್ಲಿ ಸಂವೇದಿಸಿದ್ದಾನೆ ?

ತನಗೆ ಮಹಾ ಶತ್ರುವೆನಿಸಿದ ದುಷ್ಟ ರಾವಣನ ವಧೆಯಲ್ಲಿಯೆ ಮನುಷ್ಯನಾಗಿ ಸಂವೇದಿಸಿದ್ದಾನೆ. ಆತ ಬದುಕಿರುವಾಗ ಅಲ್ಲ, ಸತ್ತಮೇಲೆ. ವಿಭೀಷಣ ಅವನಿಗೆ ಅಂತ್ಯ ಸಂಸ್ಕಾರ ಮಾಡಲು ನಿರಾಕರಿಸಿದ. ಅಣ್ಣನೆ ಆದರೂ ಅಧರ್ಮಿ ಎಂದು. ಆಗ ರಾಮ ಹೇಳಿದ. 'ರಾವಣ ಎಷ್ಟು ಅಧರ್ಮಿಯಾದರೂ ಅವನೊಬ್ಬ ವೀರ, ಮಹಾತ್ಮ. ದೈವಾನು ಕೂಲವಿಲ್ಲದಿದ್ದುದರಿಂದ ಯುದ್ಧದಲ್ಲಿ ಮಡಿದ. ನನಗೂ ಆತನಿಗೂ ವೈರ ಏನಿದ್ದರೂ ಬದುಕಿದ್ದಾಗ. ಸತ್ತಮೇಲೆ ಏನು ವೈರ ? ಅವನಿಗೆ ಸದ್ಗತಿಯಾಗಲಿ, ಉತ್ತರಕ್ರಿಯೆ ಮಾಡು. ನೀನು ಮಾಡುವುದಿಲ್ಲ ಎನ್ನುವುದಾದರೆ ನಾನೆ ಮಾಡುತ್ತೇನೆ. ಅವನು ನಿನಗೆ ಹೇಗೆ ಸೋದರನೊ ನನಗೂ ಹಾಗೇ ಸೋದರನೆಂದು ತಿಳಿದಿದ್ದೇನೆ' ಎನ್ನುತ್ತಾನೆ.

'ವ್ಯಸನೇಷು ಮನುಷ್ಯಾಣಾಂ ಭೃಶಂ ಭವತಿ ದುಃಖಿತಃ' (ಅಯೋ. 2–41) ಮನುಷ್ಯರಿಗೆ ಯಾರಿಗೆ ಆಗಲಿ ದುಃಖಬಂದರೆ ರಾಮ ಸಹಿಸಲಾರ ಎಂದು ಅಯೋಧ್ಯೆಯ ಜನರು ಮುಕ್ತ ಕಂಠದಿಂದ ಹೊಗಳಿದ್ದಾರೆ.

ಧರ್ಮ ವಿರೋಧವಿಲ್ಲದಿದ್ದಲ್ಲೆಲ್ಲ ರಾಮ ಮಾನವೀಯತೆಯಿಂದ ಸ್ಪಂದಿಸುವವನೆ. ಅಧರ್ಮವಿದ್ದಲ್ಲಿ ಹೃದಯವನ್ನು ಗಟ್ಟಿ ಮಾಡಿಕೊಳ್ಳುತ್ತಾನೆ.

ರಾವಣನ ದೂತನಾಗಿ ಬಂದ ಶುಕನೆಂಬ ರಾಕ್ಷಸನನ್ನು ಕಪಿಗಳೆಲ್ಲ ಚಿತ್ರಹಿಂಸೆ ಮಾಡತೊಡಗಿದಾಗ ರಾಮ ನಿಷೇಧಿಸಿದ. ಏಕೆಂದರೆ ರಾಕ್ಷಸನಾಗ ದೂತನಾಗಿ ಬಂದಿದ್ದ. ಅವನನ್ನು ಹಿಂಸಿಸುವುದು ಧರ್ಮವಲ್ಲ, ಎಂದು. ಮತ್ತೊಮ್ಮೆ ಶುಕ ಸಾರಣರು ಗೂಢಚಾರಿಗಳಾಗಿ ಬಂದರು. ಕಪಿಗಳು ಕೊಲ್ಲುತ್ತಿದ್ದರು. ರಾಮ ಬಿಡಿಸಿದ. ಏಕೆಂದರೆ ರಾವಣನಾಜ್ಞೆಯಂತೆ ಬಂದವರು, ಎಂದು.

ರಾವಣ ವಧೆಯಾದ ಮೇಲೆ ರಾಮನ ಸಂದೇಶವನ್ನು ಹೊತ್ತು ಬಂದ ಹನುಮಂತ ಅಶೋಕವನದ ರಾಕ್ಷಸಿಯರನ್ನು ಅವರು ಹಿಂದೆ ಸೀತೆಗೆ ಕೊಟ್ಟಿದ್ದ

ಕೊಂದು ಬಿಡುವುದೆ ? ಯಾರು ತಾನೆ ಅಪರಾಧ ಮಾಡುವುದಿಲ್ಲ ?' ಎಂದಾಗ ಹನುಮಂತ 'ಅಮ್ಮ. ನೀನು ನಿಜವಾಗಿಯೂ ರಾಮನಿಗೆ ತಕ್ಕ ಮಡದಿ' ಎನ್ನುತ್ತಾನೆ. ರಾಮನು ಹೇಗೆ ಕರುಣಾಸಾಗರನೋ ಹಾಗೇ ಸೀತೆಯೂ ಎಂಬುದು ಅವನ ಅಭಿಪ್ರಾಯ.

ಶರಣಾಗತ ರಕ್ಷಕನೆನ್ನುವುದು ರಾಮನಿಗೆ ಬಿರುದು. ಮೊರೆಹೊಕ್ಕವರನ್ನು ರಕ್ಷಿಸುವುದು ಸ್ವಪ್ರತಿಷ್ಠೆಗಾಗಿಯಾಗಲಿ. ಪುಣ್ಯ ಸಂಪಾದನೆಗಾಗಿ ಆಗಲಿ ಅಲ್ಲ. 'ಆನೃಶಂಸ್ಯಾರ್ಥಂ' (ಯು. 18–2) – ಮಾನವೀಯತೆಗಾಗಿ ಎನ್ನುತ್ತಾನೆ, ರಾಮ. ಸೀತೆ ಅಶೋಕವನದಲ್ಲಿ ದುಃಖಿಸುತ್ತ ರಾಮನ ಮಾನವೀಯತೆಯನ್ನು ಕುರಿತು ನೆನೆಯುತ್ತಾಳೆ—'ಆನೃಶಂಸ್ಯಂ ಪರೋ ಧರ್ಮ ಸ್ತ್ವತ್ತ ಏವ ಮಯಾ ಶ್ರುತಂ' (ಸುಂ. 38–39) 'ಮಾನವೀಯತೆಯೆ ಪರಮ ಧರ್ಮ ಎಂಬುದನ್ನು ನಿನ್ನಿಂದಲೆ ನಾನು ಕೇಳಿದುದು' ಎನ್ನುತ್ತಾಳೆ. ಕಾಗೆಯ ರೂಪದಿಂದ ಬಂದ ಅಸುರ ಸೀತೆಯ ಮೇಲೆ ಆಕ್ರಮಣ ಮಾಡಿದರೂ ಕೊನೆಯಲ್ಲಿ ಪಶ್ಚಾತ್ತಾಪದಿಂದ ಶರಣಾದಾಗ ಎಷ್ಟು ಕರುಣೆಯಿಂದ ಅವನನ್ನು ಜೀವಸಹಿತ ಬಿಟ್ಟ ನೆಂಬುದನ್ನು ಸೀತೆ ಹೆಮ್ಮೆಯಿಂದ ನೆನೆಯುತ್ತಾಳೆ—ವಧೆಗೆ ಅರ್ಹನಾದ ಅಸುರನನ್ನೂ ಕೃಪೆಯಿಂದ ರಾಮ ಕಾಪಾಡಿದ ! (ಸುಂ. 38–33)

ಕಷ್ಟಕ್ಕೊಳಗಾದವರ ಬಗ್ಗೆ ರಾಮನ ಹೃದಯದಲ್ಲಿ ತುಂಬಿದ ಕರುಣೆ ಅನುಕಂಪೆಗಳು ಅನ್ಯಾದೃಶವಾದುವು. ತನ್ನ ಸುಖವನ್ನೆ ತಾನು ಮರೆಯುವಂತೆ ಗೌಣವಾಗಿಸುವಂತೆ ಮಾಡುವಂಥವು. ರಾವಣ ವಧೆಯಾದಾಗ ಇಡೀ ಲಂಕೆ ಗೋಳಿಡುವುದನ್ನು ಕಂಡ ರಾಮ ತನ್ನ ಪ್ರೀತಿಯ ಸೀತೆಯ ಬಳಿಗೆ ಧಾವಿಸುವುದನ್ನೇ ಮರೆತ. ರಾವಣನ ಹಾಗೂ ಇತರ ವೀರರ ಉತ್ತರಕ್ರಿಯೆಗಳಾದ ಬಳಿಕ ವಿಭೀಷಣನ ಪಟ್ಟಾಭಿಷೇಕವೂ ಜರುಗಿ ಲಂಕೆಯ ಪ್ರಜೆಗಳೆಲ್ಲ ಸಮಾಧಾನದ ನಿಟ್ಟುಸಿರು ಬಿಡತೊಡಗಿದಾಗಲೆ ಸೀತೆಯ ಕುರಿತು ರಾಮ ಆಲೋಚಿಸತೊಡಗಿದ. ತಾನು ಬೇಗನೆ ನಿನ್ನನ್ನು ನೋಡಲು ಬರುವೆನೆಂದು ಹನುಮಂತನ ಮೂಲಕ ಸಂದೇಶ ಕಳಿಸಿದ.

ಅನಂತರದ ರಾಮನ ವರ್ತನೆ ಕಠೋರವಾದುದು ಮಾತ್ರ ಕಾರಣಾಂತರದಿಂದ.

ಆರ್ತರನ್ನು ದೀನರನ್ನು ಎಲ್ಲ ವಿಧದಿಂದ ಕಾಪಾಡುವವ ರಾಮನೆಂಬುದು ಅಪರಿಚಿತಳಾದ ತಾರೆಗೂ ಗೊತ್ತಿತ್ತು—

'ನಿವಾಸವೃಕ್ಷ: ಸಾಧೂನಾಂ ಆಪನ್ನಾನಾಂ ಪರಾಗತಿ: ।
ಆರ್ತಾನಾಂ ಸಂಶ್ರಯಶ್ಚೈವ' (ಕಿ. 15–19)

'ಸಜ್ಜನರಿಗೆ ಆಸರೆ ನೀಡುವ ವೃಕ್ಷ, ಆಪತ್ತಿಗೊಳಗಾದವರಿಗೆ ಪರಮಗತಿ. ತಪ್ಪು ಮಾಡಿದರೂ ಪಶ್ಚಾತ್ತಾಪಗೊಂಡವರಿಗೆ ಆಶ್ರಯದಾತ ರಾಮ' ಎನ್ನುತ್ತಾಳೆ. ಅವಳು ಹೇಳಿದುದು ಸುಳ್ಳಾಗಲಿಲ್ಲ. ಮುಂದೆ ವಾಲಿವಧೆಯಾದಾಗ ತಾರೆ ಅಳುವುದನ್ನು ಕಂಡು ರಾಮ ಬಹಳ ನೊಂದುಕೊಂಡ. ಸಂತೈಸಿದ.

'ರಾಮನು ವಾಲಿಯನ್ನು ಕೊಂದನಂತರ ತಾರೆಯ ಆಕ್ರಂದನ ವಿಲಾಪ ರಾಮನಲ್ಲಿ ಒಡನೆಯೆ ಯಾವ ರೀತಿಯ ಅನುಕಂಪ ಪರಿತಾಪಗಳನ್ನೂ ಹುಟ್ಟಿಸುವುದಿಲ್ಲ. ಅಂಗದ ತಾರೆ ಸುಗ್ರೀವ ಹನುಮಂತ ಎಲ್ಲರೂ ದುಃಖಿಸುತ್ತಾರೆ. ಆದರೆ ರಾಮನು ಕೋದಂಡ ಊರಿ ನೋಡುತ್ತ ನಿಲ್ಲುತ್ತಾನೆ. ಆಮೇಲೆ 'ಹೀಗೆ ಸುಗ್ರೀವನೂ ತಾರೆಯೂ ಅಂಗದನೂ ದುಃಖಿಸುವುದನ್ನು ಕಂಡು ರಾಮಲಕ್ಷ್ಮಣರೂ ಅವರಂತೆ ದುಃಖಿತರಾಗುತ್ತಾರೆ'

—ಈ ಆಕ್ಷೇಪ ರಾಮಾಯಣ ಓದಿದವರು ಯಾರೂ ಮಾಡುವಂತದ್ದಲ್ಲ. 'ರಾಮಲಕ್ಷ್ಮಣರು ಅವರಂತೆ ದುಃಖಿತರಾಗುತ್ತಾರೆ' ಎನ್ನುವಲ್ಲಿ ವಾಲ್ಮೀಕಿ ಪ್ರಯೋಗಿಸುವ ಶಬ್ದ–'ಸಮಾನ ಶೋಕ' ಅಂದರೆ ಒಡಹುಟ್ಟಿದ ಸುಗ್ರೀವನಂತೆ, ಪ್ರಿಯತಮೆಯಾದ ತಾರೆಯಂತೆ, ಮಗನಾದ ಅಂಗದನಂತೆ ಅವರೆಲ್ಲರ ಶೋಕಕ್ಕೆ ಸಮಾನವಾಗಿ ಸ್ಪಂದಿಸುತ್ತ ರಾಮಲಕ್ಷ್ಮಣರು ಶೋಕಿಸಿದರು, ಅವರನ್ನು ಸಂತೈಸಿದರು. ಸುಗ್ರೀವ ತನ್ನ ಮಿತ್ರನಿರಬಹುದು. ಆದರೆ ತಾರೆ ಅಂಗದರು ಶತ್ರುವಿನ ಕಡೆಯವರು. ಅವರಿಗೂ ಸಮನಾಗಿ ಶೋಕಿಸಿ ಸಂತೈಸಬೇಕಾದರೆ ರಾಮಲಕ್ಷ್ಮಣರ ಹೃದಯ ಎಷ್ಟು ಮೃದು ಇರಬೇಕು !

'ಸುಗ್ರೀವನೂ ತಾರೆಯೂ ಅಂಗದನೂ ದುಃಖಿಸುವುದನ್ನು ಕಂಡು' ಎಂಬ ಅಂಶವೂ ಶ್ಲೋಕದ ಪ್ರಾಮಾಣಿಕ ಅನುವಾದವಲ್ಲ. ಶ್ಲೋಕ ಹೀಗಿದೆ—

ಸ ಸುಗ್ರೀವಂ ಚ ತಾರಾಂಚ ಸಾಂಗದಾಂ ಸಹ ಲಕ್ಷ್ಮಣ : ।
ಸಮಾನ ಶೋಕ : ಕಾಕುತ್ಸ್ಥ : ಸಾಂತ್ವಯನ್ನಿದಮಬ್ರವೀತ್ ॥
(ಕಿ. 25–1)

'ಸುಗ್ರೀವ ಅಂಗದ ತಾರೆಯರನ್ನು ಅವರಿಗೆ ಸಮನಾಗಿ ಶೋಕಿಸುತ್ತಿದ್ದ ರಾಮ ಲಕ್ಷ್ಮಣರು ಸಂತೈಸುತ್ತ ನುಡಿದರು' ಎಂದು ಅನುವಾದಿಸಬೇಕು. ಇಲ್ಲಿ ಸುಗ್ರೀವ ಅಂಗದ ತಾರೆಯರು 'ದುಃಖಿಸುವುದನ್ನು ಕಂಡು' ಎಂದು ಮೂಲ ದಲ್ಲಿಲ್ಲದ ಅಂಶ ಸೇರಿಸಿ ರಾಮಲಕ್ಷ್ಮಣರು ಶೋಕದ ಪ್ರದರ್ಶನ ಮಾಡಿದ ರೆಂದು ವಾಲ್ಮೀಕಿಯನ್ನು ತಪ್ಪಾಗಿ ಚಿತ್ರಿಸಿ ಪ್ರದರ್ಶನ ಮಾಡಿದೆ.

ವಾಸ್ತವವಾಗಿ ಇನ್ನೊಬ್ಬರು ಅಳುವುದನ್ನು ಕಂಡು ಅತ್ತವನೆಂದರೆ ಸುಗ್ರೀವನೆ! 'ತಾರೆ ಶೋಕಿಸುವುದನ್ನು ಕಂಡು ಸುಗ್ರೀವ ಸಂತಾಪಗೊಂಡನು' (ಕಿ. 24-1)

'ಅಂಗದ ತಾರೆ ಸುಗ್ರೀವ ಹನುಮಂತ ಎಲ್ಲರೂ ದುಃಖಿಸುತ್ತಾರೆ. ಆದರೆ ರಾಮನು ಕೋದಂಡವನ್ನು ನೋಡುತ್ತಾ ನಿಲ್ಲುತ್ತಾನೆ' ಎಂಬುದು ರಾಮಾಯಣದ ಸಂದರ್ಭಗಳನ್ನು ಸ್ಥಾನಪಲ್ಲಟಗೊಳಿಸಿ ಉದ್ದೇಶ ಪೂರ್ವಕ ವಾಗಿ ಮಾಡಿದ ಆರೋಪ, ಅಂಗದ ತಾರೆ ಮುಂತಾದವರು ದುಃಖಿಸಿದಾಗ ರಾಮ ಕೋದಂಡವನ್ನೂರಿ ನಿಂತಿರಲಿಲ್ಲ, ರಾಮ ಕೋದಂಡವನ್ನೂರಿ ನಿಂತಿ ದ್ದಾಗ ಅವರು ದುಃಖಿಸಿದ್ದೂ ಅಲ್ಲ. ವಸ್ತುತ: ವಾಲಿ ರಾಮಬಾಣಕ್ಕೆ ತತ್ತರಿಸಿ ನೆಲದಲ್ಲಿ ಒರಗಿದ್ದಾನೆ. ಇನ್ನೂ ಸತ್ತಿಲ್ಲ. ಆಗ ತಾರೆ ಓಡಿ ಬಂದು ವಾಲಿ ಯನ್ನು ನೋಡುತ್ತಾಳೆ. ಬಳಿಯಲ್ಲಿ ಕೋದಂಡವನ್ನೂರಿ ನಿಂತ ರಾಮನನ್ನೂ ಲಕ್ಷ್ಮಣನನ್ನೂ ಸುಗ್ರೀವನನ್ನೂ ನೋಡುತ್ತಾಳೆ (ಕಿ. 19-25) ಬಳಿಕ ತಾರೆ ಅಳುತ್ತಾಳೆ. ಆಕೆ ಅಳುತ್ತಿದ್ದಂತೆ ವಾಲಿ ಪ್ರಾಣ ಬಿಡುತ್ತಾನೆ. ತಿರುಗಿ ತಾರೆಯ ಅಳು. ಅದನ್ನು ಕಂಡು ಸುಗ್ರೀವನಿಗೂ ಅಳು ಒದಗುತ್ತದೆ. 'ಸೋದರನನ್ನು ಕೊಲ್ಲಿಸಿದ ಪಾಪಿ ನಾನು, ಅಗ್ನಿಪ್ರವೇಶ ಮಾಡುತ್ತೇನೆ, ರಾಮ' ಎನ್ನುತ್ತಾನೆ. ಇದನ್ನು ಕೇಳಿ ರಾಮ ಕಣ್ಣೀರು ಸುರಿಸಿದ, ಶೋಕಿಸಿದ, ಅಳುತ್ತಿದ್ದ ತಾರೆಯನ್ನೂ ಅನುಕಂಪೆಯಿಂದ ನೋಡಿ ಸಂತೈಸಿದ. ಆಗ ತಾರೆ ಸಮಾಧಾನಗೊಂಡು 'ಸುವೇಷ ರೂಪ'ಳಾಗಿ ಸುಮ್ಮನಾಗುತ್ತಾಳೆ. ಅನಂತರ ಸುಗ್ರೀವ ತಾರೆ ಅಂಗದ ಮೂವರನ್ನು ಸಂತೈಸುತ್ತ 'ಕಾಲ ಪ್ರಭಾವದಿಂದ ವಾಲಿ ಮಡಿದ. ಅದಕ್ಕೆ ಕಣ್ಣೀರು ಸುರಿಸಬಾರದು. ಸತ್ತವನಿಗೆ ಅದರಿಂದ ಶ್ರೇಯಸ್ಸಾಗು ವುದಿಲ್ಲ' ಎನ್ನುತ್ತಾನೆ. ತಾನೂ ಅವರೊಂದಿಗೆ 'ಸಮಾನ ಶೋಕ'ನಾಗುತ್ತಾನೆ.

ಕೋದಂಡವನ್ನೂರಿ ರಾಮ ನಿಂತು ನೋಡುತ್ತಿದ್ದಾಗ ಸುಗ್ರೀವನೂ ನೋಡುತ್ತಿದ್ದ, ರಾಮನೊಬ್ಬನೆ ಅಲ್ಲ.

ಆಗ ವಾಲಿ ಇನ್ನೂ ಸತ್ತಿಲ್ಲ. ತಾರೆಯ ಪ್ರಲಾಪ ಪ್ರಾರಂಭವಾಗಿರಲಿಲ್ಲ. ತಾರೆಯ ಪ್ರಲಾಪ ರಾಮನಲ್ಲಿ ಏನೂ ಪರಿಣಾಮ ಉಂಟುಮಾಡಿಲ್ಲ ಎಂಬುದು ರಾಮಾಯಣದ ಅಕ್ಷರ ಸಾಕ್ಷ್ಯಕ್ಕೇ ವಿರುದ್ಧ.

'ರಾವಣನನ್ನು ಕೊಂದಮೇಲೆ ರಾಮನು ರಾವಣ ಪತ್ನಿಯರ ರೋದನವನ್ನೂ ಸಮಸ್ತ ಲಂಕೆಯ ವಿಧವೆಯರ ಪ್ರಲಾಪವನ್ನೂ ಅಚಲಿತನಾಗಿ ನೋಡುತ್ತಾನೆ. ವಿಭೀಷಣನನ್ನು ಕರೆದು, 'ನಿನ್ನ ಅಣ್ಣನ ಉತ್ತರ ಕ್ರಿಯೆಯನ್ನು ನಡೆಸು. ಸ್ತ್ರೀಯರನ್ನು ಮನೆಗೆ ಕಳಿಸು' ಎಂದ. ಹೆಂಗಸರ ಆಕ್ರಂದನ ರಾಮನಿಗೆ ರಂಪವಾಗಿ ಕಂಡಿರಬೇಕು'

— ಈ ಆರೋಪವೂ ಸಹೃದಯರಿಗೆ ಸಮ್ಮತವಾಗದು. ಸಮಸ್ತ ಲಂಕೆಯ ವಿಧವೆಯರ ಪ್ರಲಾಪ ಕಂಡು ದುಃಖದಿಂದ ಸೀತೆಯನ್ನೆ ಮರೆತವನು ರಾಮ. ಆತ ರಾವಣನ ಉತ್ತರಕ್ರಿಯೆ, ವಿಭೀಷಣನ ಪಟ್ಟಾಭಿಷೇಕಗಳಿಗೆ ಅವಸರಪಡಿಸಿದುದೆ ಲಂಕೆಯಲ್ಲೆಲ್ಲ ಸಮಾಧಾನದ ವಾತಾವರಣ ನಿರ್ಮಿಸುವುದಕ್ಕಾಗಿ. 'ಸ್ತ್ರೀಯರನ್ನು ಮನೆಗೆ ಕಳಿಸು' ಎಂಬ ಮಾತನ್ನು 'ಹೆಂಗಸರ ಆಕ್ರಂದನ ರಾಮನಿಗೆ ರಂಪವಾಗಿ ಕಂಡಿರಬೇಕೆ'ಂದು ತಪ್ಪಾಗಿ ತಿಳಿಯಬೇಕಾಗಿಲ್ಲ. ಮತ್ತು, ಆ ಮಾತನ್ನು ಹೇಳುವಲ್ಲಿ ವಾಲ್ಮೀಕಿ ನುಡಿದ 'ಸಂಸ್ಕಾರ: ಕ್ರಿಯತಾಂ ಭ್ರಾತುಃ ಸ್ತ್ರಿಯಶ್ಚೈತಾ ನಿವರ್ತಯ (ಯು. 111-22) ಎಂಬ ಮಾತಿಗೆ ಯಾವ ವ್ಯಾಖ್ಯಾನಕಾರರೂ ವ್ಯಾಖ್ಯಾನ ಮಾಡಿಲ್ಲದಿರುವುದರಿಂದ, ಒಂದು ಸುಂದರವಾದ ಪಾಠಾಂತರವಿದೆ, ಅದನ್ನು ಇಟ್ಟುಕೊಳ್ಳಬಹುದು—'ಸಂಸ್ಕಾರಃ ಕ್ರಿಯತಾಂ ಭ್ರಾತು: ಸ್ತ್ರೀ ಗಣ: ಪರಿಸಾಂತ್ವ್ಯತಾಂ' 'ಅಣ್ಣನ ಉತ್ತರ ಕ್ರಿಯೆ ನಡೆಸು. ಸ್ತ್ರೀಯರನ್ನು ಸಮಾಧಾನಪಡಿಸು' ಇಲ್ಲಿ ಎರಡು ವಾಕ್ಯಗಳೂ ಕರ್ಮಣಿ ಪ್ರಯೋಗದಲ್ಲಿದ್ದು ಕೇಳಲು ಹಿತವಾಗಿವೆ. ಆದರೆ ಮೊದಲಿನ ಪಾಠದಲ್ಲಿ ಒಂದು ಕರ್ಮಣಿ ಪ್ರಯೋಗ, ಇನ್ನೊಂದು ಕರ್ತರಿ ಪ್ರಯೋಗ. ಈ ಎರಡನೆ ಪಾಠದಲ್ಲಿ ಹೆಂಗಸರ ಆಕ್ರಂದನ ರಾಮನಿಗೆ ರಂಪವಾಗಿ ಕಂಡಿರಬೇಕೆಂಬ ಕುಚೋದ್ಯಕ್ಕೆ ಅವಕಾಶವೇ ಇಲ್ಲ.

'ಕಾಮಾರ್ಥಿಯಾಗಿ ಬಂದ ಹೆಣ್ಣನ್ನು ವಿಕೃತಿಗೊಳಿಸುವ ಚಿತ್ರಹಿಂಸೆ ರಾಮನಿಗೆ ಪ್ರಿಯ'

—ಈ ಆಪಾದನೆಯೂ ಅನ್ಯಾಯದ್ದು. ಶೂರ್ಪಣಖಿ ಅಯೋಮುಖಿಯರು ಕೇವಲ ಕಾಮಾರ್ಥಿಗಳಾಗಿ ಬಂದ ಸಭ್ಯ ಹೆಣ್ಣು ಮಕ್ಕಳಾಗಿರಲಿಲ್ಲ. ಬಯಸಿ, ಈಡೇರದಿದ್ದಾಗ ನುಂಗಲು ಬಂದವರಾಗಿದ್ದರು. ತಮಗೆ ಅನುರೂಪರಲ್ಲದ ರಾಮಲಕ್ಷ್ಮಣರನ್ನು ಅವರು ಬಯಸಿದುದೆ ಅನುಚಿತವಾಗಿತ್ತು. ಆದ್ದರಿಂದಲೆ ಲಂಕೆಯ ಯುದ್ಧದಲ್ಲಿ ವಿಧವೆಯರಾದ ರಾಕ್ಷಸಿಯರ ಆಕ್ರೋಶ—'ಯಾವುದೇ ಗುಣವಿಲ್ಲದವಳು. ಲೋಕ ನಿಂದಿತಳು. ಹೀನ ರೂಪಳು. ಮೈಯೆಲ್ಲ ಸುಕ್ಕಾದ ಹಣ್ಣು ಕೂದಲಿನ ಮುದುಕಿ, ಮನ್ಮಥಸಂಥ ರಾಮನನ್ನು ಬಲಾತ್ಕರಿಸಿ ಅಪಹಾಸ್ಯಕರವಾದ ಕಾರ್ಯ ಮಾಡಿದಳು, ಶೂರ್ಪಣಖಿ.' ಅಯೋಮುಖಿಯೂ ಇಂಥವಳೆ. ರಾಮ ಅವರನ್ನು ಕೊಲ್ಲಬೇಕಾಗಿತ್ತು. ಅವರು ತಮ್ಮ ಅಸಹ್ಯವಾದ ಕಾಮವನ್ನು ಪ್ರಾರ್ಥಿಸದಿದ್ದ ಎಷ್ಟೋ ಮುನಿಕುಮಾರರನ್ನು ನುಂಗಿ ಹಾಕಿದ್ದರು. ಸ್ತ್ರೀಯರೆಂದು ರಾಮ ಅವರನ್ನು ಕೊಲ್ಲದೆ ಬಿಟ್ಟು ಆದರೂ ವಿಕೃತಿಗೊಳಿಸುವ ಚಿತ್ರಹಿಂಸೆ ಮಾಡಿದ ನಿಜ, ಇದು ಶಿಕ್ಷೆಗಾಗಿ. ಹಿಂದಿನ ಕಾಲದಲ್ಲಿ ಇದು ರೂಢಿಯಲ್ಲಿತ್ತು. ಈ ಶಿಕ್ಷೆಯೂ ಅವರು ಕಾಮಾರ್ಥಿಗಳಾಗಿ ಬಂದಿದ್ದಕ್ಕಾಗಿ ಅಲ್ಲ, ಬಲಾತ್ಕರಿಸಿ, ಪ್ರಾಣಾಪಾಯ ಮಾಡಲು ಯತ್ನಿಸಿದ್ದಕ್ಕಾಗಿ.

## ಕಪಟ ದೂರ ರಾಮನ ವ್ಯವಹಾರ

'ಸಹಾನುಭೂತಿಯ ಪ್ರಸಂಗಗಳಲ್ಲಿ ರಾಮನಲ್ಲಿ ಕಪಟ ಅಥವಾ ನಟನೆ ಎದ್ದು ಕಾಣುತ್ತದೆ. ಬಾರಿಬಾರಿಗೆ ತನ್ನ ದುರವಸ್ಥೆಗಳಲ್ಲಿ 'ಕೈಕೇಯಿಯಿಂದ ಹೀಗಾಯಿತಲ್ಲ ಅವಳ ಇಷ್ಟ ನೆರವೇರಿತಲ್ಲ' ಎನ್ನುವ ರಾಮ ಅವಳ ಮಗನಾದ ಭರತನಿಗೆ ತಾಯಿಯ ಬಗೆಗಿನ ನಿಷ್ಠೆಯನ್ನು ಬೋಧಿಸುತ್ತಾನೆ'

—ಈ ಆರೋಪವೂ ನಿಜವಲ್ಲ. ದೊಡ್ಡವರು ಮಾಡುವ ತಪ್ಪನ್ನು ಸಹಿಸಿಕೊಂಡು ಅವರನ್ನು ಗೌರವಿಸಬೇಕೆನ್ನುವ ನೀತಿ ರಾಮನದು. ದೊಡ್ಡವರು ತಪ್ಪು ಮಾಡಿದರೆ ಅದು ತಪ್ಪೆ ಅಲ್ಲವೆಂದಾಗುವುದಿಲ್ಲ. ಆದ್ದರಿಂದ ರಾಮನಿಗೆ ಕೈಕೇಯಿ ಅನ್ಯಾಯ ಮಾಡಿದಳೆಂಬ ಕೊರಗು ಇದ್ದೇ ಇದೆ.

'ವಿಭೀಷಣ ರಾವಣನಿಗೆ ಶವಸಂಸ್ಕಾರ ಸಲ್ಲದು, ಪರಸ್ತ್ರೀಯರನ್ನು ಬಲಾತ್ಕರಿಸಿದ ಪಾಪಿ ಎಂದಾಗ ರಾಮನು ಬಹಳ ಸಂತೋಷ ಪಡುತ್ತಾನೆ (ಪರಮಪ್ರೀತೋ ರಾಮೋ... ಯು. 111.56) ಆಮೇಲೆ ಅವನಿಗೆ ಚಿತವನ್ನು ಸುಡಿದು ಶವಸಂಸ್ಕಾರ ಮಾಡಿಸುತ್ತಾನೆ.'

—ರಾಮನಲ್ಲಿ ಕಪಟವರ್ತನೆ ಇದೆ ಎನ್ನಲು ಇದು ನಿದರ್ಶನವಾಗಲಾರದು. ವಿಭೀಷಣ ರಾವಣನನ್ನು ಪಾಪಿ ಎಂದುದು ಸರಿಯೇ ಆಗಿದ್ದರಿಂದ, ಅಧರ್ಮಿಯಾದ ಸೋದರನನ್ನೂ ನಿಂದಿಸಬಲ್ಲ ವಿಭೀಷಣನ ಈ ಧರ್ಮನಿಷ್ಠೆಗೆ ರಾಮ ಪರಮಪ್ರೀತನಾದರೆ ಆಶ್ಚರ್ಯವಿಲ್ಲ. ಅಧರ್ಮಿಯಾದರೂ ಸೋದರನಾದ್ದರಿಂದ ಅವನ ಶವಸಂಸ್ಕಾರ ಮಾಡುವುದು ವಿಭೀಷಣನ ಕರ್ತವ್ಯವಾದ್ದರಿಂದ ಮಾಡಿಸಿದ್ದಾನೆ. ಇದರಲ್ಲಿ ಕಪಟವೇನಿದೆ ?

ವಸ್ತುತಃ 'ಪರಮಪ್ರೀತ' ಎಂಬಲ್ಲಿ 'ಪರಂ ಅಪ್ರೀತ' ಎಂದು ಪದ ವಿಭಾಗ. ರಾಮನಿಗೆ ವಿಭೀಷಣ ರಾವಣನನ್ನು ನಿಂದಿಸಿ ಅವನ ಶವಸಂಸ್ಕಾರ ಮಾಡೆನೆಂದು ಹೇಳಿದುದನ್ನು ಕೇಳಿ ಬಹಳ ಅಸಮಾಧಾನವಾಯಿತೆಂದು ಅರ್ಥ. 'ಪರಮ ಪ್ರೀತ' (ಬಹಳ ಸಂತೋಷವಾಯಿತು) ಎಂದು ಪದವಿಭಾಗ ಮಾಡಿಕೊಂಡು ರಾಮನಲ್ಲಿ ದೋಷಾರೋಪಣೆ ಮಾಡುವ ಅವಶ್ಯಕತೆ ಇಲ್ಲ. 'ಪರಂ ಅಪ್ರೀತ' ಎಂಬ ಪದವಿಭಾಗ ರಾಮಭಕ್ತರಿಗೆ ಮಾತ್ರ ಹೊಳೆದೀತು, ಇತರರಿಗೆ ಅಲ್ಲ ಎಂದೇನೂ ತಿಳಿಯಬಾರದು. ವಾಲ್ಮೀಕಿ ಇಂಥ ಪದವಿಭಾಗವನ್ನು ಮನಸ್ಸಿನಲ್ಲಿಟ್ಟುಕೊಂಡೆ ಈ ಪ್ರಯೋಗವನ್ನು ಬೇರೆ ಕಡೆ ಮಾಡಿದ್ದುಂಟು. ಉದಾ :

ತಾಂ ದೃಷ್ಟ್ವಾ ಪರಮಪ್ರೀತಾಂ ಬ್ರುವಂತೀಂ ಮಂಥರಾಂ ತತಃ
(ಅಯೋ. 8–13)

'ಬಹಳ ಅಸಮಾಧಾನಗೊಂಡು ಮಾತನಾಡುತ್ತಿದ್ದ ಆ ಮಂಥರೆಯನ್ನು ಕೈಕೇಯಿ ನೋಡಿ...' ಇಲ್ಲಿ 'ಪರಮ ಪ್ರೀತಾಂ' ಎಂದು ಪದವಿಭಾಗ ಶಕ್ಯವೇ ಇಲ್ಲ. 'ಪರಂ ಅಪ್ರೀತಾಂ' ಎಂದೆ ಪದವಿಭಾಗ ಮಾಡಬೇಕಾಗುತ್ತದೆ. ಏಕೆಂದರೆ ಆಗ ಮಂಥರೆ ಸಂತೋಷಗೊಂಡಿರಲಿಲ್ಲ, ಕೋಪಗೊಂಡಿದ್ದಾಳೆ.

'ರಾಮ ತಂದೆಯ ಮರಣವಾರ್ತೆಯನ್ನು ಕೇಳಿ ಮೂರ್ಛಿತನಾಗಲಿಲ್ಲ. ಸೀತಾ ಪರಿತ್ಯಾಗವಲ್ಲಿ ಕಣ್ಣೀರು ತುಂಬಿ ಶೋಕ ಪ್ರದರ್ಶನಮಾಡಿ ಮುಗಿಸಲಿಲ್ಲ'

—ಈ ಆರೋಪವೂ ಹುರುಳಿಲ್ಲದುದು. ತಂದೆಯ ಮರಣವಾರ್ತೆ ರಾಮನಿಗೆ ಅನಿರೀಕ್ಷಿತ ಆಘಾತ. ಸೀತಾ ಪರಿತ್ಯಾಗ ತಾನೆ ಎದೆ ಗಟ್ಟಿಮಾಡಿಕೊಂಡು ಮಾಡಿದ ಕಾರ್ಯ. ಇವುಗಳಲ್ಲಿ ವ್ಯತ್ಯಾಸವಿಲ್ಲವೆ ?

ನಳ ತನ್ನ ಪ್ರೀತಿಯ ದಮಯಂತಿಯನ್ನು ಘೋರವಾದ ಕಾಡಿನಲ್ಲಿ ಒಬ್ಬಂಟಿಗಳಾಗಿ ಬಿಟ್ಟು ದೂರ ಓಡಿದ್ದ, ಆದರೂ ಮೂರ್ಛಿತನಾಗಲಿಲ್ಲ. ರಾಮ ಸೀತೆಯನ್ನು ಸುರಕ್ಷಿತವಾಗಿ, ತನಗೆ ತಂದೆಯಂತಿದ್ದ ವಾಲ್ಮೀಕಿಯ ಪವಿತ್ರ ಪುಣ್ಯಾಶ್ರಮದಲ್ಲಿ ಬಿಟ್ಟ.

## ರಾಮ ತನ್ನಲ್ಲಿ ಕೇಂದ್ರೀಕೃತನೆ ?

'ರಾಮನು ವಿರಹಿಯಾಗಿ ಹಲುಬುತ್ತಿರುವಾಗ ತನ್ನಂತೆಯೆ ಮದುವೆಯಾಗಿ ಹೆಂಡತಿಯನ್ನಗಲಿದ ಲಕ್ಷ್ಮಣನಿಗೆ ಯಾವ ರೀತಿಯ ನೋವಾಗಲಿಕ್ಕಿಲ್ಲ ಎಷ್ಟು ಮುಜುಗರವಾಗಲಿಕ್ಕಿಲ್ಲ ಎಂಬುದನ್ನು ಲೆಕ್ಕಿಸದೆ ತನ್ನ ಮತ್ತು ಸೀತೆಯ ಆತ್ಮೀಯ ಶೃಂಗಾರ ಚಿತ್ರಗಳನ್ನು ಬಣ್ಣಿಸುತ್ತ ಹೋಗುತ್ತಾನೆ. ಅಲ್ಲದೆ ತನ್ನಂತೆಯೆ ಹೆಂಡತಿಯನ್ನು ಕಳೆದುಕೊಂಡ ಸುಗ್ರೀವನಿಗೆ ಇನ್ನೆಷ್ಟು ಪ್ರಚೋದಕವಾಗಿ ನೋವಾಗಲಿಕ್ಕಿಲ್ಲ ಎನ್ನುವ ಪರಿವೆಯೂ ಇಲ್ಲದವನಾಗುತ್ತಾನೆ, ಇತರರ ನೋವನ್ನು ಪರಿಗಣಿಸಲಾರದ, ತನ್ನಲ್ಲೇ ಕೇಂದ್ರೀಕೃತನಾದ ರಾಮ.'

—ಇದು ರಾಮಾಯಣದ ಕಥಾಸಂದರ್ಭಗಳನ್ನು ಸ್ಥಾನಪಲ್ಲಟಮಾಡಿ ಸಿದ್ಧಪಡಿಸಲಾಗಿರುವ ಆರೋಪ. ಸುಗ್ರೀವನ ಮುಂದೆ ರಾಮ ಸೀತೆಗಾಗಿ ಪರಿತಪಿಸಿದುದು ಸೀತೆಯ ಆಭರಣಗಳನ್ನು ಸುಗ್ರೀವ ತಂದುಕೊಟ್ಟಾಗ. ಆಗ ರಾಮ ತನ್ನ ಮತ್ತು ಸೀತೆಯ ಶೃಂಗಾರ ಚಿತ್ರಗಳನ್ನೇನೂ ಬಣ್ಣಿಸಲಿಲ್ಲ. ಬಣ್ಣಿಸಿದಾಗ ಬಳಿಯಲ್ಲಿ ಸುಗ್ರೀವನಿರಲಿಲ್ಲ. ಲಕ್ಷ್ಮಣ ಮಾತ್ರ ಇದ್ದ. (ಯು. 5–3) ಆದರೆ ಲಕ್ಷ್ಮಣ ಬೇರೆ ಅಲ್ಲ, ರಾಮ ಬೇರೆ ಅಲ್ಲ. ಹೃದಯ ಒಂದು, ದೇಹ ಎರಡು. ಅವರಿಬ್ಬರೊಳಗೆ ಯಾವ ವ್ಯವಹಾರದಲ್ಲಿಯೂ ಸಂಕೋಚಕ್ಕೆ ಅವಕಾಶವಿಲ್ಲ. ರಾಮನನ್ನು ನೆರಳಿನಂತೆ ಹಿಂಬಾಲಿಸುವವ ಲಕ್ಷ್ಮಣ.

ಅವನೊಂದಿಗೆ ರಾಮ ಏನಾದರೂ ಹೇಳಿಕೊಂಡರೆ ಅದು ತನಗೆ ತಾನೇ ಹೇಳಿಕೊಂಡಂತೆ. ಇವನ ಮುಂದೆಯೆ ಸೀತೆ ರಾಮನನ್ನು ಬಾರಿಬಾರಿಗೆ ಆಲಿಂಗಿಸಿಕೊಂಡಿದ್ದುಂಟು (ಅರ. 39–40). ಆದ್ದರಿಂದಲೆ ರಾಮ ಲಕ್ಷ್ಮಣನನ್ನು 'ಬಹಿಃಪ್ರಾಣ ಇವಾಪರಃ' ಎನ್ನುತ್ತಾನೆ. ತನ್ನ ಶರೀರದ ಹೊರಗಿರುವ ತನ್ನದೆ ಆದ ಪ್ರಾಣ ರಾಮನಿಗೆ ಲಕ್ಷ್ಮಣ. ದ್ವಿತೀಯ ಅಂತರಾತ್ಮ.

ಲಕ್ಷ್ಮಣ ಹೆಂಡತಿಯನ್ನು ಅಗಲಿದ್ದರೂ ರಾಮನ ಸೇವೆಗಾಗಿಯೆ ಸ್ವಸಂತೋಷದಿಂದ ಅಗಲಿದ್ದ. ಅದಕ್ಕೆ ಶೋಕಪಡುವ ಕಾರಣವಿಲ್ಲ. ಆದರೆ ರಾಮ ಸೀತೆಗಾಗಿ ಶೋಕಪಡುವಂತಾದುದು ಅನಿರೀಕ್ಷಿತ. ಲಕ್ಷ್ಮಣನಿಗೆ ರಾಮನ ಸೇವೆಗಾಗಿ ಹೆಂಡತಿಯನ್ನಗಲಿದನೆಂದು ಅಭಿಮಾನವಿದ್ದರೆ ರಾಮನಿಗೆ ತನ್ನ ಹೆಂಡತಿಯನ್ನು ಯಾರೊ ಅಪಹರಿಸಿದರೆಂದು ಅಭಿಮಾನಕ್ಕೆ ಧಕ್ಕೆ ಬಂದಿರುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ, ಸೀತೆ ಎಷ್ಟು ಕಷ್ಟಪಡುವಳೊ ಎಂದು ರಾಮನಿಗೆ ಆತಂಕ. ಲಕ್ಷ್ಮಣನಿಗೆ, ಅವನ ಹೆಂಡತಿ ಅಯೋಧ್ಯೆಯ ಅರಮನೆಯಲ್ಲಿ ಸುರಕ್ಷಿತವಾಗಿ ಇದ್ದಾಳೆ. ಹೀಗೆ ಯಾವ ದೃಷ್ಟಿಯಿಂದ ನೋಡಿದರೂ ರಾಮನ ಪ್ರಲಾಪ ಲಕ್ಷ್ಮಣನಲ್ಲಿ ಪ್ರಚೋದಕವಾಗಿ ನೋವು ಉಂಟುಮಾಡುತ್ತದೆ ಎನ್ನಲಾಗದು.

ಪ್ರಸ್ತುತ ರಾಮ ಸೀತೆಯ ವಿರಹ ದುಃಖ ತಾಳಲಾರದೆ ಮೂರ್ಛೆ ಹೋಗುತ್ತಿದ್ದಾನೆ. ಇಂಥ ತೀವ್ರ ಭಾವಗಳು ದೇಶ ಕಾಲಗಳ ಔಚಿತ್ಯ, ಯುಕ್ತಾಯುಕ್ತತೆ, ಸಮರ್ಪಕತೆಗಳನ್ನು ಆಲೋಚಿಸುವುದಿಲ್ಲ. ಆದ್ದರಿಂದ ಲಕ್ಷ್ಮಣನಿಗೆ ತನ್ನ ಪ್ರಲಾಪದಿಂದ ನೋವಾದೀತೆಂಬ ವಿವೇಕವನ್ನು ವಿರಹಿಯಾದ ರಾಮನಲ್ಲಿ ನಾವು ನಿರೀಕ್ಷಿಸುವುದು ತಪ್ಪು.

'ರಾಮನಿಗೆ ಗೊತ್ತಿದೆ ಸೀತೆ ಪವಿತ್ರಳು ಅಂತ,' ಎನ್ನುವುದು ಕೇವಲ ಭಾವುಕತೆಯ ಮುಗ್ಧತೆ, ಭಕ್ತಿಪುರಃಸರವಾದ ಸೇವೆಯೆ ಹೊರತು ವಿಮರ್ಶಾಪ್ರಜ್ಞೆ ಆಗುವುದಿಲ್ಲ. ಸೀತೆ ಅವನನ್ನು 'ಪ್ರಾಕೃತ' ಅಸಂಸ್ಕೃತನೆನ್ನುತ್ತಾಳೆ.

—ಈ ಆಕ್ಷೇಪ 'ಪ್ರಾಕೃತ' ಶಬ್ದದ ಅರ್ಥ ವಿಪರೀತವಾಗಿ ತಿಳಿದುದರಿಂದ ಉದ್ಭವಿಸಿದುದು. 'ಪ್ರಾಕೃತ' ಎಂದರೆ ಅಜ್ಞನಾದವ, ಮೇಲುನೋಟಕ್ಕೆ ಕಾಣುವುದೆಲ್ಲವನ್ನೂ ನಂಬುವವ, ಅನಾಯಕ. ಈ ಅರ್ಥದಲ್ಲಿಯೆ ವಾಲ್ಮೀಕಿ ಎಲ್ಲ ಕಡೆ ಈ ಶಬ್ದ ಪ್ರಯೋಗಿಸಿದ್ದಾನೆ ಎಂಬುದನ್ನು ಹಿಂದೆಯೆ ನೋಡಿದ್ದೇವೆ.

ವಸ್ತುತಃ ಸೀತೆ ತನ್ನ ದುಃಖದ ಭರದಲ್ಲಿ ಏನೆ ಹೇಳಲಿ, ಅದನ್ನು ಹಾಗೇ ನಂಬುವವರು ನಿಜವಾಗಿಯೂ ಪ್ರಾಕೃತರೆನ್ನಬೇಕಾಗುತ್ತದೆ. ಸೀತೆ ಲಕ್ಷ್ಮಣನನ್ನು ಮಾಯಾ ಜಿಂಕೆಯ ಪ್ರಸಂಗದಲ್ಲಿ ಕೋಪದಿಂದ ಆಡಬಾರದ ಮಾತುಗಳನ್ನಾಡುತ್ತ ಜ್ಹಿದಳು. ಲಕ್ಷ್ಮಣ ತಡೆಯಲಾರದೆ ಆಶ್ರಮದಿಂದ ಹೊರಗೆ ಬಂದುಬಿಟ್ಟ. ರಾಮ ಹೇಳುತ್ತಾನೆ 'ಕೋಪಗೊಂಡ ಹೆಣ್ಣಿನ ಕಠಿನ ಮಾತುಗಳನ್ನು ಕೇಳಿಕೊಂಡು ನೀನು ಅವಳನ್ನು ಬಿಟ್ಟುಬಂದುದು ತಪ್ಪಾಯಿತು, ಲಕ್ಷ್ಮಣ' (ಅರ. 59–23)

ಸೀತೆ ಹೇಳಿದ್ದನ್ನೆಲ್ಲ ನಂಬುವುದಾದರೆ 'ಅನನ್ಯಾರಾಘವೇಣಾಹಂ ಭಾಸ್ಕರೇಣ ಪ್ರಭಾ ಯಥಾ' (ಸುಂ. 21–15) 'ತನಗೂ ರಾಮನಿಗೂ ಇರುವ ಪ್ರೇಮ ಸಂಬಂಧ ಸೂರ್ಯನಿಗೂ ಅವನ ಪ್ರಭೆಗೂ ಇರುವಂಥ ತಾದಾತ್ಮ್ಯ ರೂಪವಾದುದು, ಅಭೇದ್ಯ, ಅವಿಭಾಜ್ಯ' ಎನ್ನುವ ಸೀತೆಯ ಮಾತನ್ನು ಏಕೆ ನಂಬಬಾರದು ?

## ರಾವಣ ಧೀರೋದಾತ್ತನೆ ? ಧಾರ್ಮಿಕನೆ ?

'ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋಗುವಾಗಲೂ ಆಮೇಲೆ ಅಶೋಕ ವನದಲ್ಲಿ ಸೀತೆಯನ್ನಿಟ್ಟಾಗಲೂ ಅವನು ಧೀರೋದಾತ್ತನಂತೆಯೆ ಸೀತೆಯನ್ನು ಬಲಾತ್ಕರಿಸಿ ಹೌರ್ಜನ್ಯವೆಸಗುವುದಿಲ್ಲ. ರಾವಣನು ಸೀತೆಯ ಬಗ್ಗೆ ತೋರಿಸಿದ ಉದಾತ್ತತೆಗೂ ರಾಮನು ಸೀತೆಗೆ ಅಗ್ನಿಪರೀಕ್ಷೆಗೆ ಒಳಪಡಿಸುವ ಮುಂಚೆ ಆಡಿದ ಮಾತುಗಳಿಗೂ ಅವನು ಸ್ತ್ರೀಯೊಬ್ಬಳ ಬಗ್ಗೆ ತಳೆದ ನಿಕೃಷ್ಟತೆಗೂ ಹೋಲಿಸಿದರೆ ರಾಕ್ಷಸನು ಇಲ್ಲಿ ಆರ್ಯನಾಗಿದ್ದಾನೆ, ಆರ್ಯನು ರಾಕ್ಷಸನಾಗಿದ್ದಾನೆ. ರಾವಣನು ಸೀತೆಗೆ ಹೇಳುತ್ತಾನೆ, ನಾನು ಅಧರ್ಮಿಯಲ್ಲ. ಪರಸ್ತ್ರೀಗಮನವೂ ಪರಸ್ತ್ರೀಯರನ್ನು ಅಪಹರಿಸಿ ತರುವುದೂ ರಾಕ್ಷಸರಾದ ನಮಗೆ ಕುಲಧರ್ಮ. ಆದರೂ ಕೂಡ ನೀನು ಬಯಸದೆ ಬಲಾತ್ಕಾರವಾಗಿ ನಿನ್ನನ್ನು ನಾನು ಮುಟ್ಟುವುದಿಲ್ಲ.'

—ಇಲ್ಲಿ ರಾವಣನಾಡಿದನೆನ್ನಲಾದ ಮಾತು ವಸ್ತುತಃ ಅವನಾಡಿದ ಮಾತಲ್ಲ. ವಾಲ್ಮೀಕಿಯ ಪ್ರಾಮಾಣಿಕ ಅನುವಾದ ಇಲ್ಲಿ ಬಂದಿಲ್ಲ.

ಸ್ವಧರ್ಮೋ ರಕ್ಷಸಾಂ ಭೀರು ಸರ್ವಥೈವ ನ ಸಂಶಯಃ ।
ಗಮನಂ ವಾ ಪರಸ್ತ್ರೀಣಾಂ ಹರಣಂ ಸಂಪ್ರಮಥ್ಯ ವಾ ॥
ಏವಂ ಚೈವಮಕಾಮಾಂ ತ್ವಾಂ ನ ಚ ಸ್ಪ್ರಕ್ಷ್ಯಾಮಿ ಮೈಥಿಲಿ
(ಸುಂ. 20–5)

'ಬಲಾತ್ಕಾರದಿಂದ ಪರಸ್ತ್ರೀ ಗಮನ ಮಾಡುವುದೂ ಅಪಹರಿಸುವುದೂ ರಾಕ್ಷಸರ ಸ್ವಭಾವ. ಆದರೂ ನೀನು ಬಯಸದೆ ನಿನ್ನನ್ನು ನಾನು ಮುಟ್ಟುವುದಿಲ್ಲ'—ಇಲ್ಲಿ ನಾನು 'ಅಧರ್ಮಿಯಲ್ಲ' ಎನ್ನುವ ಮಾತಿಲ್ಲ. ರಾಕ್ಷಸರ ಕುಲ ಧರ್ಮದ ಬಗ್ಗೆಯೂ ರಾವಣ ಏನೂ ಹೇಳಿಲ್ಲ. ತನ್ನ ಜಾತಿ ಸ್ವಭಾವವನ್ನು ಹೇಳಿದ್ದಾನೆ. ಸ್ವಧರ್ಮ ಎಂದರೆ ಸ್ವಭಾವ. ಶಾಸ್ತ್ರವಿಹಿತವಾದ ಆಚಾರವಲ್ಲ. ರಾಕ್ಷಸರು ಪರಸ್ತ್ರೀಯರನ್ನು ಬಲಾತ್ಕರಿಸಬೇಕೆಂದು ಯಾವ ಶಾಸ್ತ್ರವೂ ಹೇಳಿಲ್ಲ. ಆದ್ದರಿಂದ ರಾವಣ ತನ್ನ ರಾಕ್ಷಸ ಸ್ವಭಾವವನ್ನು ಹೇಳಿಕೊಳ್ಳುತ್ತಿದ್ದಾನೆ ಹೊರತು ತಾನು ಧರ್ಮಿಷ್ಠನೆಂದು ಹೇಳಿಕೊಳ್ಳುತ್ತಿಲ್ಲ. ಒಂದು ವೇಳೆ ಪರ ಸ್ತ್ರೀಯನ್ನು ಬಲಾತ್ಕರಿಸುವುದು ಕುಲಧರ್ಮವೇ ಆಗಿದ್ದರೆ ಅದನ್ನು ರಾವಣ ಆಚರಿಸಬೇಕಾಗಿತ್ತು. ಕುಲಧರ್ಮ ಕರ್ತವ್ಯವೆ ತಾನೆ? ಏಕೆ ಮಾಡದೆ ಬಿಟ್ಟಿದ್ದಾನೆ? ಅಥವಾ, ಕರ್ತವ್ಯಧರ್ಮ ಮಾಡದಿರುವುದೂ ಒಂದು ಧೀರೋದಾತ್ತತೆಯ ಲಕ್ಷಣವಿರಬೇಕು!

'ನೀನು ಬಯಸದೆ ನಿನ್ನನ್ನು ನಾನು ಮುಟ್ಟುವುದಿಲ್ಲ' ಎನ್ನುವ ಮಾತಿನಿಂದಲೆ ರಾವಣನನ್ನು ಧೀರೋದಾತ್ತನೆಂದು ಎಣಿಸಲಾಗದು. 'ನೀನು ನನ್ನನ್ನು ಕೂಡದಿದ್ದರೆ ಕೊಂದು ತಿನ್ನುತ್ತೇನೆ' ಎಂದು ಬೆದರಿಕೆ ಹಾಕುತ್ತಾನೆ, ರಾವಣ. ಈ ಅಂಶವನ್ನು ಮುಚ್ಚಿಟ್ಟು ರಾವಣನನ್ನು ಭಕ್ತಿಯಿಂದ ಧೀರೋದಾತ್ತ ಪದವಿಗೇರಿಸಿದರೇನಾಯಿತು? ರಾಮಾಯಣದ ಓದುಗ ಒಪ್ಪಲಾರ.

ವಸ್ತುತಃ ರಾವಣ ಸೀತೆಯನ್ನು 'ಮುಟ್ಟುವುದಿಲ್ಲ' ಎನ್ನುವುದು ಮಾತ್ರವಲ್ಲ ಅವಳ ಕಾಲಿಗೇ ಬೀಳುತ್ತಾನೆ. ಅವನೀಗ ಒಂದು ಹೆಣ್ಣನ್ನು ಆಸೆಯಿಂದ ಕದ್ದು ತಂದು, ಮುಂದಿಟ್ಟುಕೊಂಡು ಅನುಭವಿಸಲಾರದೆ ಚಡಪಡಿಸುತ್ತಾನೆ. 'ಪರಸ್ತ್ರೀಯರನ್ನು ಬಲಾತ್ಕರಿಸಿದರೆ ರಾವಣನ ತಲೆ ಏಳು ಹೋಳುಗಳಾಗಿ ಒಡೆದು ಹೋಗಲಿ' ಎಂದು ನಳಕೂಬರನ ಶಾಪ (ಉ. 26-56) ನೂರು

ಭಾಗವಾಗಿ ಒಡೆದುಹೋಗುತ್ತದೆ ಎಂದು ಬ್ರಹ್ಮನ ಶಾಪ (ಯು. 13–15) ಆದರಿಂದ ರಾವಣನಲ್ಲಿ ಇಂಥ ವಿಚಿತ್ರ ಅಸ್ವಾಭಾವಿಕ ವರ್ತನೆ ಕಂಡುಬಂದಿದೆ ಹೊರತು ಅವನು ಧೀರೋದಾತ್ತನಾದ್ದರಿಂದ ಅಲ್ಲ.

ಈ ಶಾಪ ವೃತ್ತಾಂತವನ್ನು ಹೇಳದೆ 'ನೀನು ಬಯಸದೆ ನಿನ್ನನ್ನು ನಾನು ಮುಟ್ಟುವುದಿಲ್ಲ' ಎಂದು ರಾವಣ ಜಂಬ ಕೊಚ್ಚಿಕೊಳ್ಳುವುದು ಧೀರೋದಾತ್ತತೆಗೆ ಕುಂದು ತರುವಂತಹುದು, ಧೀರೋದಾತ್ತನ ಲಕ್ಷಣಗಳಲ್ಲಿ 'ಅವಿಕತ್ಥನ'ವೂ ಒಂದು. ಅಂದರೆ ತನ್ನ ಮಹತ್ವವನ್ನು ತಾನೇ ಹೇಳಿಕೊಳ್ಳಕೂಡದು, ಅದರಲ್ಲಿಯೂ ತನ್ನಲ್ಲಿಲ್ಲದ ಮಹತ್ವವನ್ನು ಪ್ರದರ್ಶಿಸುತ್ತಿದ್ದಾನೆ, ರಾವಣ.

'ಎರಡು ತಿಂಗಳ ಅವಧಿ ನಿನಗೆ. ಅಷ್ಟರೊಳಗೆ ನೀನು ನನ್ನವಳಾಗದಿದ್ದಲ್ಲಿ ನನಗೆ ಬೆಳಗಿನ ಅಲ್ಪಾಹಾರಕ್ಕೆ ನಿನ್ನ ಮಾಂಸದ ಅಡುಗೆ ತಯಾರಾಗುತ್ತದೆ' ಎಂದು ರಾವಣ ಬೆದರಿಕೆ ಹಾಕಿದ್ದ. (ಸುಂ. 22–9) ಮಂತ್ರಿಗಳ ಮುಂದೆ ಮಾತ್ರ 'ಸೀತೆ ತಾನೆ ಒಂದು ವರ್ಷ ಅವಧಿ ಕೇಳಿಕೊಂಡಿದ್ದಾಳೆ. ಅದು ಕಳೆದೊಡನೆ ನನ್ನವಳಾಗಲು ಒಪ್ಪಿದ್ದಾಳೆ' ಎಂದು ಸುಳ್ಳು ಹೇಳುತ್ತಾನೆ, 'ಧೀರೋದಾತ್ತನಾದ ರಾವಣ !'

ರಾಮ ಸೀತೆಗೆ ಅಗ್ನಿಪರೀಕ್ಷೆ ಕಾಲದಲ್ಲಿ ಬಿರುನುಡಿಗಳನ್ನಾಡಿದ್ದರೆ ಅವು ಅವನ ಹೃದಯದಿಂದ ಬಂದ ಮಾತುಗಳಲ್ಲ, ಮುಂದೆ ಲೋಕ ಹೀಗೆ ಅಪವಾದ ಹಾಕೀತೆಂದು ಊಹಿಸಿ ಲೋಕದ ಪರವಾಗಿ, ತನ್ನೆದೆ ಗಟ್ಟಿಮಾಡಿಕೊಂಡು ಸಂಕಟದಿಂದ ಆಡಿದ ಮಾತುಗಳು ಅವು. ಇದರಿಂದ ರಾಮ ಅನಾರ್ಯನಾಗುವುದಿಲ್ಲ, ರಾಕ್ಷಸನಾಗುವುದಿಲ್ಲ. ಆದರ್ಶ ಮಾನವನಾಗುತ್ತಾನೆ, ದೇವನಾಗುತ್ತಾನೆ.

ರಾಮ ಲೋಕಾಪವಾದವನ್ನು ಊಹಿಸಿದುದು ಎಷ್ಟು ನಿಜವಾಯಿತು ! ಅಗ್ನಿ ಪರೀಕ್ಷೆ ಆದ ಮೇಲೂ ಅಯೋಧ್ಯೆಯ ಜನ ಕೆಟ್ಟ ಮಾತುಗಳನ್ನಾಡಿದ್ದರು ! ಆದ್ದರಿಂದ ರಾಮ ತಾನಾಗಿಯೆ ಸಲ್ಲದ ಸಂದೇಹವನ್ನು ಸೀತೆಯ ಬಗ್ಗೆ ಮಾಡಿದ್ದನೆನ್ನಲಾಗುವುದಿಲ್ಲ.

# ನರ–ವಾನರ

'ವಾನರನಾದ ವಾಲಿಯ ಧೀರೋದಾತ್ತತೆಯ ಔದಾರ್ಯತೆಯ ಇದಿರಿನಲ್ಲಿ ಅವನನ್ನು ಮೋಸದಿಂದ ಕೊಂದ ರಾಮನ ಕ್ಲೈಬ್ಯ ನೈಚ್ಯ ನಿಜಕ್ಕೂ ನರ ರಾಮನನ್ನು ವಾನರನನ್ನಾಗಿಯೂ ವಾನರ ವಾಲಿಯನ್ನು ನರಶ್ರೇಷ್ಠನನ್ನಾಗಿಯೂ ನಿಲ್ಲಿಸುತ್ತವೆ.'

—ಈ ಆಕ್ಷೇಪ ರಾಮಾಯಣದಲ್ಲಿನ ವಾಲಿರಾಮರ ಸಂಭಾಷಣೆಯ ಭಾಗವನ್ನು ಓದದಿದ್ದುದರ ಫಲ. ನರವಾನರರೆಂದರೇನೆಂದು ತಿಳಿಯದಿದ್ದುದರ ಪರಿಣಾಮ. ವಾಲಿಗೆ ರಾಮನಲ್ಲಿ ಯಾವ ದೋಷವೂ ಕಾಣಲಿಲ್ಲ (ಕಿ.18-44) ನಾನು ಹೇಳಿದುದೆಲ್ಲ ತಪ್ಪಾಯಿತು, ತಿಳಿಯದೆ ಹೇಳಿದೆ, ಕ್ಷಮಿಸು (ಕಿ. 18–46) ಎಂದು ಹೇಳಿ ಕೈಮುಗಿದ ವಾಲಿ. ನಾವು ಮಾತ್ರ ರಾಮನದೆ ತಪ್ಪೆನ್ನಬೇಕು !

ರಾಕ್ಷಸರೆಂದಾಗಲಿ ವಾನರರೆಂದಾಗಲಿ ಕೆಲವು ಪಂಗಡಗಳನ್ನೇ ರಾಮಾಯಣ ದೂಷಿಸುವುದಾಗಲಿ ಅವಹೇಳನ ಮಾಡುವುದಾಗಲಿ ಕಂಡುಬರುವುದಿಲ್ಲ. ರಾಕ್ಷಸರಲ್ಲಿ ವಿಭೀಷಣರಂಥವರು ಧರ್ಮಾತ್ಮರಿದ್ದಾರೆ, ವಾನರರಲ್ಲಿ ವಾಲಿಯಂಥ ಅಪರಾಧಿಗಳೂ ಇದ್ದಾರೆ. ಆದ್ದರಿಂದ ಯಾರು ನರ, ಯಾರು ವಾನರ ಎಂಬ ಪ್ರಶ್ನೆ ಬೇಕಿಲ್ಲ. ಯಾವ ನರ ವಾನರ, ಧರ್ಮಾತ್ಮ ಧೀರೋದಾತ್ತನಾಗಿದ್ದಾನೆ ಯಾರು ಅಲ್ಲ ಎಂಬುದೆ ಪ್ರಶ್ನೆ.

ವಾಲಿ ಧರ್ಮಾತ್ಮನೆ ? ಧೀರೋದಾತ್ತನೆ ? ತಮ್ಮನಾದ ಸುಗ್ರೀವ ಅರಿಯದೆ ಮಾಡಿದ ತಪ್ಪಿಗಾಗಿ ವಾಲಿ ಅವನನ್ನು ಉಟ್ಟ ಬಟ್ಟೆಯಲ್ಲೆ ರಾಜ್ಯದಿಂದ ಹೊರಗೆ ಅಟ್ಟಿ ಅವನ ಹೆಂಡತಿಯನ್ನು ತಾನಿಟ್ಟುಕೊಂಡುದುದು ಧೀರೋದಾತ್ತತೆಯೆ? ಔದಾರ್ಯವೆ ? ತಮ್ಮನು ಬದುಕಿರುವಾಗಲೆ ಅವನ ಹೆಂಡತಿಯನ್ನು ಭೋಗಿಸುವುದು ಮರಣ ದಂಡನೆಗೆ ಯೋಗ್ಯವಾದ ಮಹಾ ಅಪರಾಧ, ರಾಜನಾದ ವಾಲಿ ಈ ಅಧರ್ಮ ಮಾಡುತ್ತಿದ್ದಾನೆ, ಅಪರಾಧ ವೆಸಗುತ್ತಿದ್ದಾನೆ, ವೈಯಕ್ತಿಕವಾಗಿ ಮಾತ್ರವಲ್ಲ, ಒಬ್ಬ ರಾಜನಾಗಿ ! ಅವನ ಪ್ರಜೆಗಳೂ ಹಾಗೆ ಮಾಡಿದರೇನು ಗತಿ ?

ವಾಲಿ ವಾನರನೆಂದು ಅವನ ಅಪರಾಧವನ್ನು ಕಡೆಗಣಿಸುವಂತಿಲ್ಲ. ಆತ ಸಾಮಾನ್ಯ ವಾನರನಲ್ಲ. ನರಶ್ರೇಷ್ಠ ರಾಮನಿಗೆ ಧರ್ಮನೀತಿಗಳನ್ನು ಹೇಳಿ

ಆಕ್ಷೇಪಿಸಿದ ಬುದ್ಧಿವಂತ! ದ್ವಿಜರಿಗೆ ಐದು ಬಗೆಯ ಮೃಗಗಳ ಮಾಂಸ ಮಾತ್ರ ಗ್ರಾಹ್ಯವೆಂದು ಧರ್ಮಶಾಸ್ತ್ರ ಹೇಳುತ್ತಾನೆ. ನಯ ಅನಯ ನಿಗ್ರಹ ಅನುಗ್ರಹಗಳನ್ನು ವಿವೇಕಪೂರ್ಣವಾಗಿ ನಡಸಬೇಕೆಂದು ನೀತಿ ಶಾಸ್ತ್ರ ಹೇಳುತ್ತಾನೆ. ಸಾಮ ದಾನ ಕ್ಷಮಾ ಧರ್ಮ ಸತ್ಯ ಧೃತಿ ಪರಾಕ್ರಮ ದಂಡಗಳೆಂಬ ಗುಣಗಳು ಬೇಕೆಂದು ರಾಜಧರ್ಮವನ್ನು ತೋರಿಸುತ್ತಾನೆ. ದಿನವೂ ತಪ್ಪದೆ ಸಂಧ್ಯಾವಂದನೆ ಮಾಡುತ್ತಾನೆ. ಇಂಥವನಿಗೆ ತಮ್ಮ ಬದುಕಿರುವಾಗ ಅವನನ್ನೋಡಿಸಿ ಅವನ ಹೆಂಡತಿಯನ್ನು ಭೋಗಿಸುವಂಥ ಬರ್ಬರತೆ ಸರಿಯೆ?

ಧರ್ಮ ಅಧರ್ಮಗಳು ನರರಿಗೆ ಮಾತ್ರ, ವಾನರರಿಗೆ ಇಲ್ಲವೆಂದೂ ಎನ್ನುವಂತಿಲ್ಲ. ಜಟಾಯು ಸಂಪಾತಿಗಳಂಥ ಪಕ್ಷಿಗಳೂ ಧರ್ಮನಿಷ್ಠರಾಗಿದ್ದರು, (ಅರ. 68-24) ವಾಲಿಯ ಶವಕ್ಕೆ ಅಂಗದ ವಿಧ್ಯುಕ್ತವಾಗಿ ದಾಹ ಸಂಸ್ಕಾರ ಮಾಡುತ್ತಾನೆ. (ಕಿ. 25-50) ರಾಕ್ಷಸನಾದ ವಿಭೀಷಣ ಧರ್ಮನಿಷ್ಠನಾಗಿದ್ದು (ಉ. 10-34) ರಾವಣನಿಗೆ ಆತ ವಿಧ್ಯುಕ್ತವಾಗಿ ಶವಸಂಸ್ಕಾರ ಮಾಡುತ್ತಾನೆ (ಯು. 111-120) ಹಿಂದೂಧರ್ಮ ವ್ಯಾಪಕವಾದುದು, ಪಕ್ಷಿ ನರ ವಾನರ ರಾಕ್ಷಸ ಆರ್ಯ ದ್ರಾವಿಡ ಎಂಬ ಯಾವ ಭೇದವೂ ಇಲ್ಲದೆ ಉದಾರವಾಗಿ ಎಲ್ಲ ಜೀವಿಗಳನ್ನೂ ತನ್ನ ಮಡಿಲಲ್ಲಿಟ್ಟುಕೊಂಡು ಕಾಪಾಡುವಂಥಹುದು. ಇಲ್ಲಿ ಜನಾಂಗಭೇದವಿಲ್ಲ, ಅಪರಾಧಿ-ನಿರಪರಾಧಿ ಭೇದ ಮಾತ್ರವಿದೆ.

ಕ್ಷತ್ರಿಯರು ಅಪರಾಧಿಗಳನ್ನು ದಂಡಿಸುವುದು ಅವರ ಕರ್ತವ್ಯ. ರಾಮ ಆದರ್ಶ ಕ್ಷತ್ರಿಯನಾಗಿ ಅಪರಾಧಿಯಾದ ವಾಲಿಯನ್ನು ಕೊಂದ. ಅಪರಾಧಿಗಳನ್ನು ಶಿಕ್ಷಿಸಲು ಯುದ್ಧದ ಯಾವುದೆ ನಿಯಮದ ಆವಶ್ಯಕತೆ ಇಲ್ಲ. ಮರೆಯಲ್ಲಾಗಲಿ ಮೋಸದಿಂದಾಗಲಿ ಕೊಂದರೆ ತಪ್ಪಿಲ್ಲ. ಅಧರ್ಮಿಗಳನ್ನು ಅಧರ್ಮದಿಂದಲೆ ಕೊಲ್ಲಬಹುದು. ಅದು ಧರ್ಮವೆ ಆಗುತ್ತದೆ.

ಆದ್ದರಿಂದ ದುರ್ಯೋಧನ-ಕರ್ಣರನ್ನು ಭೀಮಾರ್ಜುನರು ಮೋಸದಿಂದ ಕೊಂದುದು ಧರ್ಮವೆ, ಇದರಿಂದ ಭೀಮಾರ್ಜುನರ ಧೀರೋದಾತ್ತತೆಗೆ ಕುಂದಿಲ್ಲ.

ರಾಮನಲ್ಲಿ ಕ್ಲೈಬ್ಯದ ಆರೋಪವಂತೂ ರಾಮಾಯಣಕ್ಕೇ ವಿರುದ್ಧ. ಸುಗ್ರೀವನೆ ಇದನ್ನೊಪ್ಪಲಾರ. ಆತ ರಾಮನ ಸತ್ವ ಪರಾಕ್ರಮಗಳನ್ನು

ತಿಳಿಯಲು ಅನೇಕ ವಿಧದ ಪರೀಕ್ಷೆ ಮಾಡಿ ತೃಪ್ತಿಗೊಂಡೆ ನಿರ್ಭಯವಾಗಿ ವಾಲಿಯನ್ನು ಮಲ್ಲಯುದ್ಧಕ್ಕೆ ಕರೆದಿದ್ದ.

ಹಾಗಾದರೆ ಪ್ರತ್ಯಕ್ಷ ಯುದ್ಧದಲ್ಲಿಯೆ ಇದಿರಿಸಿ ವಾಲಿಯನ್ನು ರಾಮ ಕೊಲ್ಲಬಹುದಾಗಿತ್ತೆಂದು ಅನಿನಬಹುದು. ಆದರೆ ವಾಲಿಯ ಜೊತೆಗೆ ಅಸಂಖ್ಯ ಕಪಿವೀರರನ್ನೂ ರಾಮ ಕೊಲ್ಲಬೇಕಾಗುತ್ತದೆ. ಒಬ್ಬ ಅಪರಾಧಿ ವಾಲಿಯನ್ನು ದಂಡಿಸುವ ಭರದಲ್ಲಿ ಅಸಂಖ್ಯ ನಿರಪರಾಧಿ ಕಪಿ ವೀರರನ್ನು ಹಿಂಸಿಸುವುದು ರಾಮನಿಗೆ ಸರಿಕಾಣಲಿಲ್ಲ. ಮಾನವೀಯತೆಯ ದೃಷ್ಟಿಯಿಂದ ರಾಮ 'ಮೋಸ' ಮಾಡಿದ ! ಇದೂ ಧರ್ಮವೆ.

ರಾವಣನನ್ನು ಕೊಲ್ಲುವಾಗ ಮಾತ್ರ ಅವನ ಕಡೆಯ ಎಲ್ಲ ರಾಕ್ಷಸರೂ ಅಧರ್ಮಿಗಳಾಗಿದ್ದರಿಂದ ರಾಮ ಕೊಂದ. ಆದರೆ ರಾಕ್ಷಸ ಸ್ತ್ರೀಯರು ಗೋಳಿಡುವಾಗ 'ಸ್ತ್ರೀಗಣಃ ಪರಿಸಾಂತ್ವ್ಯತಾಂ' ವಿಭೀಷಣ, ಈ ಸ್ತ್ರೀಯರನ್ನು ಸಂತೈಸು ಎಂದ. ಹೀಗೆ ಧರ್ಮ ಅನುಕಂಪೆ ಕರುಣೆ ಮಾನವೀಯತೆಯಂಥ ಆದರ್ಶಗಳನ್ನು ತೋರುವುದಕ್ಕೇ ವಾಲ್ಮೀಕಿ ಲೋಕದಲ್ಲಿ ಸರ್ವಗುಣ ಸಂಪನ್ನನಾದ ಪುರುಷೋತ್ತಮನಾರು ಎಂದು ನಾರದರಲ್ಲಿ ಕೇಳಿ ರಾಮನೆ ಎಂದು ತಿಳಿದು ಅವನ ಸುತ್ತ ರಾಮಾಯಣದ ಕಥೆ ಹೆಣೆದು ಸುಂದರವಾದ ಕಾವ್ಯ ರಚಿಸಿದ್ದಾನೆ. ಇಂಥ ರಾಮ ಕ್ಲೈಬ್ಯ ಕಾಪಟ್ಯಗಳ ನೀಚ ವ್ಯಕ್ತಿಯಾಗಿರುವುದು ಸಂಭವನೀಯವೆ ?

ರಾಮ ವಾಲಿಗೆ ಮೋಸ ಮಾಡಿದನೆನ್ನುವವರಿಗೆ ಮೋಸವೆಂದರೆ ಏನೆಂದೆ ತಿಳಿದಿಲ್ಲ. ಹಾಗೇ ಕರ್ಣದುರ್ಯೋಧನರು ಧೀರೋದಾತ್ತರೆನ್ನುವವರಿಗೂ ಧೀರೋದಾತ್ತತೆಯೂ ಏನೆಂದು ತಿಳಿದಿಲ್ಲ.

## ರಾಮಾಯಣ—ದಿವ್ಯ ಪ್ರೇಮದ ಸಂದೇಶ

ಕ್ರೌಂಚ ಪಕ್ಷಿಗಳ ಜೋಡಿಯ ರತಿಭಂಗ ಮಾಡಿದನೆಂಬ ಒಂದು ತಪ್ಪಿಗಾಗಿ ಬೇಡನಿಗೆ ಕ್ರೂರ ಶಾಪವನ್ನಿತ್ತವ ವಾಲ್ಮೀಕಿ ಎಂಬ ಭ್ರಮೆಯಿಂದ, ಆ ಶಾಪವೆ ರಾಮಾಯಣ ಕಾವ್ಯಕ್ಕೆ ಮೂಲವಾದ್ದರಿಂದ ರಾಮಾಯಣವಿಡೀ ಕ್ರೌರ್ಯ ಹಿಂಸೆ ಕಾಮಗಳ ಪ್ರತಿಪಾದನೆಗೆ ಹೊರಟಿದೆ ಎಂಬ ತೀರ್ಮಾನಕ್ಕೆ ಬಂದರೆ

ಅದೊಂದು ದೊಡ್ಡ ದುರಂತವಾತ್ತದೆ. 'ಆನೃಶಂಸ್ಯಂ ಪರೋ ಧರ್ಮ:' 'ಅಹಿಂಸೆಯೇ ಪರಮಧರ್ಮ' ಎಂಬುದು ರಾಮಾಯಣದ ಮುಖ್ಯ ಸಂದೇಶ.

ಹಿಂಸೆಗೆ ಪ್ರತಿಹಿಂಸೆ ಅರಣ್ಯ ಸಂಸ್ಕೃತಿ ಹೌದು, ಆದರೆ ನಾಗರಿಕರಾದ ಸಭ್ಯ ಮಾನವರೊಳಗಿನ ವ್ಯವಹಾರದಲ್ಲಿ ಮಾತ್ರ ಇದು ನಿಜ. ಅಸಭ್ಯ ಅನಾರ್ಯ ಅನಾಗರಿಕ ರಾಕ್ಷಸರೊಂದಿಗೆ ವ್ಯವಹರಿಸುವಾಗ ಈ ನೀತಿ ವಿಫಲವಾಗುತ್ತದೆ. ಕುಬೇರ ರಾವಣನ ಅತ್ಯಾಚಾರಗಳನ್ನು ಕಂಡು ತಡೆಯಲಾರದೆ ತನ್ನ ತಮ್ಮನೆಂದು ಬುದ್ಧಿವಾದ ಹೇಳಲು ಒಬ್ಬ ದೂತನನ್ನು ಕಳಿಸಿದರೆ ಅವನನ್ನು ರಾವಣ ಖಡ್ಗ ಹಿರಿದು ತುಂಡರಿಸಿ ಕೊಲ್ಲುತ್ತಾನೆ. ಅನಾರ್ಯರ ನಡುವೆ ಶಾಂತಿಯ ದೌತ್ಯಕ್ಕೆ ಯತ್ನಿಸುವುದು ಮೂರ್ಖತನವಾಗುತ್ತದೆ, ಆದ್ದರಿಂದ ರಾಮ ಹಿಂಸೆಗೆ ಪ್ರತಿಹಿಂಸೆಯ ನೀತಿಯನ್ನೆ ಅಲ್ಲಿ ಅನುಸರಿಸಿದ. ಅವ್ಯವಹಾರ್ಯವಾದ ಅಹಿಂಸೆಯ ತತ್ತ್ವವನ್ನು ರಾಮಾಯಣ ಪುರಸ್ಕರಿಸುವುದಿಲ್ಲ. ಕೈಕಯಿ ಮಂಥರೆಯಂಥ ನಾಗರಿಕ ಸಭ್ಯ ಮಾನವರೊಡನೆ ವ್ಯವಹರಿಸುವಾಗ ರಾಮ ಎಷ್ಟು ಸಹನೆಯಿಂದ ಹಿಂಸೆಗೆ ಪ್ರತಿಯಾಗಿ ಅಹಿಂಸೆ ಎಂಬ ತತ್ತ್ವವನ್ನು ಅನುಸರಿಸಿದನೆಂಬುದರಿಂದ ರಾಮಾಯಣ ವ್ಯಾವಹಾರಿಕವಾದ ಅಹಿಂಸಾ ತತ್ತ್ವವನ್ನೆ ಪುರಸ್ಕರಿಸುತ್ತಿದೆ ಎಂಬುದು ಮನದಟ್ಟಾಗದಿರದು.

ಸೀತಾ ರಾಮರೊಳಗಿನ ಶುದ್ಧ ಪವಿತ್ರ ಪ್ರೇಮ ಸಂಬಂಧವನ್ನು ವರ್ಣಿಸುವ ರಾಮಾಯಣ ಭಾರತೀಯ ಸಂಸ್ಕೃತಿಯ ಪರಮ ಮೌಲ್ಯವಾದ ಪ್ರೇಮದ ಸಂದೇಶವನ್ನು ನೀಡುತ್ತಿದೆ.

'ಭಾರತೀಯ ಸಂಸ್ಕೃತಿಯಲ್ಲಿ ಕಾಮವೆ ಪರಮ ಮೌಲ್ಯವಿದ್ದಂತಿದೆ ರಸಗಳಲ್ಲಿ ಶೃಂಗಾರವೆ, ರತಿಯೆ ಪರಮ ಮೌಲ್ಯ. ವೀರ ರೌದ್ರ ಮುಂತಾದವು ರಸಗಳೂ ಭಾವಗಳೂ ಆಗಿವೆ. ಪ್ರೇಮ ಭಾವವಾಗಿ ಆಗಲಿ, ರಸವಾಗಿ ಆಗಲಿ, ಪ್ರಾಮುಖ್ಯತೆ ಪಡೆದಿಲ್ಲ.

—ಹೀಗೆ ಭಾವಿಸುವುದು ಭಾರತೀಯ ಸಾಹಿತ್ಯದ ಬಗೆಗಿನ ದಿವ್ಯ ಅಜ್ಞಾನ ಇಲ್ಲವೆ ಅವಜ್ಞೆಯನ್ನು ಎತ್ತಿ ತೋರಿಸುತ್ತದೆ. ರಾಮಾಯಣದ ಪ್ರಧಾನರಸ ಕರುಣ. ಮಹಾಭಾರತದ ಪ್ರಧಾನರಸ ಶಾಂತ- ಭಾರತೀಯ ಸಂಸ್ಕೃತಿಯ ಬೆನ್ನೆಲುಬಿನಂತಿದ್ದು ಯುಗ ಯುಗಗಳಿಂದ ಸಹೃದಯರ ಅಪಾರ ಭಕ್ತಿ ಪ್ರೇಮ

ಗಳಿಗೆ ಪಾತ್ರವಾದ ರಾಮಾಯಣ ಮಹಾಭಾರತಗಳೇ ಶೃಂಗಾರಕ್ಕೆ ರತಿಗೆ ಪ್ರಾಶಸ್ತ್ಯ ನೀಡಿಲ್ಲ. ಹೀಗಿರುವಾಗ ಶೃಂಗಾರವೆ, ರತಿಯೆ ಭಾರತೀಯರ ಪರಮ ಮೌಲ್ಯವಾಗುವುದಾದರೂ ಹೇಗೆ ?

ಶೃಂಗಾರ ರಸದ ಆದರ್ಶ ಕೃತಿಯಾದ ಶಾಕುಂತಲವೂ ಪ್ರಥಮಾಂಕದಲ್ಲಿ ನಾಯಕ ನಾಯಕಿಯರ ಪ್ರಥಮ ಸಮಾಗಮದ ಶೃಂಗಾರವನ್ನು ಚಿತ್ರಿಸಿ, ಕೊನೆಯ ಅಂಕದಲ್ಲಿ ಬಹುಕಾಲ ವಿರಹ ವ್ರತಚಾರಿಗಳಾದ ದಂಪತಿಗಳ ಪ್ರಣಯ ತಪಸ್ಸಿನ ಫಲರೂಪವಾಗಿ ಅವರ ಪ್ರಥಮ ಸಮಾಗಮದ ಮಲಿನತೆಯು ದಗ್ಧವಾದುದನ್ನು ಚಿತ್ರಿಸಿದೆ, ಪ್ರಥಮಾಂಕದ ನಾಯಿಕೆಯ ಸಮಸ್ತ ಶರೀರ ಲಾವಣ್ಯದ ಸ್ಥಾನವನ್ನು ಕೊನೆಯ ಅಂಕದಲ್ಲಿ ಅವಳ ಬಾಲಕನು ಆಕ್ರಮಿಸಿ ನಾಯಕನ ಹೃದಯವನ್ನು ತಂಪುಗೊಳಿಸುತ್ತಾನೆ. ಪ್ರಾರಂಭದ ಕಾಮ ಮೂಲವಾದ ಶೃಂಗಾರ ಕೊನೆಯಲ್ಲಿ ವಿರಹಾಗ್ನಿಯ ಮೂಸೆಯಲ್ಲಿ ಪುಟಕ್ಕಿಟ್ಟಂತಾಗಿ ಅಪ್ಪಟ ಚಿನ್ನದಂತೆ ಹೊಳೆಯುತ್ತ ಪ್ರೇಮ ಮೂಲವಾದ ದಿವ್ಯ ಶೃಂಗಾರದ ಆಯಾಮವನ್ನು ಪಡೆಯುತ್ತದೆ, ಅಖಂಡ ಪುಣ್ಯದ ಫಲವಾಗಿ ಶೋಭಿಸುತ್ತದೆ. ಹೀಗೆ ಪರಿಪಾಕಗೊಂಡ ನಿರ್ಮಲವಾದ ಶೃಂಗಾರ ರಸವೆ ಭಾರತೀಯರ ಪರಮ ಮೌಲ್ಯವಾಗಲು ಅರ್ಹವಾಗಿದೆ ಹೊರತು ಕೇವಲ ರತಿಯಲ್ಲ. ಅದು ಭಾವ ವೆನಿಸುತ್ತದೆ ಹೊರತು ಪರಿಪುಷ್ಟವಾದ ರಸದ ಸ್ಥಾನ ಅದಕ್ಕಿಲ್ಲ.

ರತಿ ಕಾಮ ಎರಡೂ ಒಂದೆ ಅಲ್ಲ, ಭಕ್ತಿಯೂ ರತಿಯೆ. ದೇವಾದಿಗಳ ವಿಷಯದಲ್ಲಿ.

ಭಾವಗಳಲ್ಲೆಲ್ಲ ಭಾರತೀಯರಿಗೆ ಪರಮ ಪ್ರೇಮಾಸ್ಪದವಾದದ್ದು ಭಕ್ತಿ ಭಾವ. ಭಕ್ತಿಕಾವ್ಯವೆಂಬುದು ಭಾರತೀಯ ಸಾಹಿತ್ಯದ ಒಂದು ಮುಖ್ಯ ಪ್ರಕಾರವೆ ಆಗಿದೆ.

'ನಮ್ಮ ಸಂಸ್ಕೃತಿ ವಿಶೇಷದಲ್ಲಿ ಕೋಪ ಕ್ರೌರ್ಯಗಳು ಒಂದು ಮೌಲ್ಯವೆ ಆಗಿ ಬಿಟ್ಟಿವೆ. ಋಷಿಗಳು ಸಾಧುಸಂತರೆಲ್ಲರೂ ಕೇವಲ ಕ್ಷುಲ್ಲಕ ಕಾರಣಕ್ಕೆ ಶಾಪ ಕೊಡುತ್ತಾರೆ. ಶಾಪಕ್ಕೇಸಂಕೇತಿ ದೂರ್ವಾಸ ಮಹರ್ಷಿಯೂ ಕೂಡ. ಅತ್ಯಂತ ಮುಗ್ಧಳೂ ಕೋಮಲೆಯೂ ಆದ ಶಕುಂತಲೆ ತನಗೆ ಆತಿಥ್ಯದ ಲೋಪ ಮಾಡಿದಳೆಂದು ಅವಳ ಪ್ರೇಮ ಜೀವನವನ್ನೆ ಭಗ್ನಗೊಳಿಸುತ್ತಾನೆ. ರಾಮಾಯಣದಲ್ಲೇ ರಾಮನಿಗೆ ಪ್ರಾಣಪ್ರಿಯನಾದ ಲಕ್ಷ್ಮಣನ

ಕೊಳಿ, ಅರ್ಥಾತ್ ಕೊಳಿಗೆ ಸಮಾನವಾದ 'ಪರಿತ್ಯಾಗ' ರಾಮನಿಂದಲೆ ಕೈಯಾರೆ ಮಾಡುವಂತಾಗುವುದಕ್ಕೆ ಕಾರಣನಾಗುತ್ತಾನೆ—

ಈ ನಿರ್ಣಯ ಏಕಪಕ್ಷೀಯವಾದುದು. ರಾಮಾಯಣದಲ್ಲಿ ಕ್ಷತ್ರಿಯನಾದ ವಿಶ್ವಾಮಿತ್ರನು ಪರಿಪರಿಯಾಗಿ ತಪಸ್ಸು ಮಾಡಿ ಬ್ರಾಹ್ಮಣತ್ವ ಪಡೆದು ಬ್ರಹ್ಮರ್ಷಿ ಎನಿಸಿದ ಕತೆ ದೀರ್ಘವಾಗಿಯೆ ಬಂದಿದೆ. ಅದರಲ್ಲಿ ವಿಶ್ವಾಮಿತ್ರ ಎಂದು ಕಾಮಕ್ರೋಧಗಳನ್ನು ಪೂರ್ತಿಯಾಗಿ ಗೆಲ್ಲುವನೊ, ಅಂದು ಅವನು ಬ್ರಹ್ಮರ್ಷಿಯಾದನೆಂದು ವರ್ಣಿಸಿದೆ, ಇದರಿಂದ ಋಷಿಮುನಿಗಳು ಕಾಮಕ್ರೋಧವನ್ನು ಬಿಡದೆ ಋಷಿಮುನಿಗಳೆನಿಸುವುದೆ ಇಲ್ಲವೆನ್ನುವುದು ಸ್ಪಷ್ಟ. ಆದರೂ ಅವರು ಕೆಲವೊಮ್ಮೆ ಕ್ಷುಲ್ಲಕಕಾರಣಕ್ಕೆ ಶಾಪ ಕೊಡುವುದನ್ನು ಎತ್ತಿ ತೋರಿಸಿ ನಮಗಿಂತಲೂ ಅವರು ಹೆಚ್ಚು ಕಾಮಕ್ರೋಧ ವಶರಾದವರೆಂದು ಆರೋಪಿಸುವುದು ಬರಿಯ ಆಗ್ರಹವೆ ಸರಿ. ವಿಶ್ವಾಮಿತ್ರ ಸಾಧಕನಾಗಿದ್ದಾಗ ಮೇನಕೆಯನ್ನು ಮೋಹಿಸಿದ ಕತೆ ಪ್ರಸಿದ್ಧವಾಗುತ್ತದೆ. ಸಿದ್ಧನಾದಾಗ ರಂಭೆಗೆ ಶಾಪ ಕೊಟ್ಟ ಕತೆ ಪ್ರಸಿದ್ಧವಾಗುವುದಿಲ್ಲ, ಇತರರಲ್ಲಿ ತಪ್ಪನ್ನೆ ಹುಡುಕುವವರಿಗೆ ತಪ್ಪು ಮಾತ್ರ ಕಾಣುತ್ತವೆ.

## ದೂರ್ವಾಸರ ಕೋಪ

ಋಷಿಗಳು ಕೆಲವೊಮ್ಮೆ ತೋರುವ ವಿಚಿತ್ರ ವರ್ತನೆಗೆ ಕಾರಣವನ್ನು ರಾಮ ಲಕ್ಷ್ಮಣನಿಗೆ ಹೀಗೆ ಹೇಳುತ್ತಾನೆ, 'ಮಹಾ ತಪಸ್ವಿಗಳಾದ ಋಷಿಗಳೂ ಕೆಲವೊಮ್ಮೆ ದೈವ ಪ್ರೇರಣೆಯಿಂದ ಕಾಮಕ್ರೋಧ ಪರಿತ್ಯಜಿಸುವ ನಿಯಮವನ್ನು ತೊರೆದು ಕಾಮಕ್ರೋಧಗಳಿಂದ ವಿಚಲಿತರಾಗುತ್ತಾರೆ' (ಅಯೋ. 22–23) 'ದೈವ'ವೆಂದರೆ ಇಲ್ಲಿ ಪ್ರಾಚೀನ ಕರ್ಮ. ಅದು ಶಾಪಕ್ಕೊಳಗಾದವನದ್ದಿರಬಹುದು. ಶಾಪ ಕೊಟ್ಟವನದ್ದಿರಬಹುದು, ಇಲ್ಲವೆ ಕೆಲವೊಮ್ಮೆ ವಿಲಕ್ಷಣ ಸಂದರ್ಭಗಳಲ್ಲಿ ಇನ್ನಾರದೋ ಇದ್ದಿರಲೂ ಬಹುದು. ಉದಾ: ಶಕುಂತಲೆಗೆ ಶಾಪ ಕೊಡುವಷ್ಟು ದೂರ್ವಾಸರು ಕೋಪ ಪರವಶರಾದುದು ಶಕುಂತಲೆಯ ತಪ್ಪಿನಿಂದಾಗಿ. ಅಹಲ್ಯೆಗೂ ದೇವೇಂದ್ರನಿಗೂ ಗೌತಮಮುನಿ ಶಾಪ ಕೊಟ್ಟುದು ಮುನಿಯ ಪ್ರಾಚೀನ ಕರ್ಮದಿಂದಾಗಿ. ಶಂಬೂಕ ವಧೆಯ

ಪ್ರಸಂಗದಲ್ಲಿ ಬ್ರಾಹ್ಮಣ ಕುಮಾರ ಸಾಯಲು ದೇವತೆಗಳು ಆಗ್ರಹ ತೋಟ್ಟಿದ್ದು ಶಂಬೂಕನ ಅಧರ್ಮದಿಂದಾಗಿ.

ಶಕುಂತಲೆ ಸ್ವತಃ ಮುಗ್ಧಳು, ಕೋಮಲಳು ಆದರೂ ಆಕೆ ಮಾಡಿದುದು ತಪ್ಪು. ಮುಗ್ಧತೆ, ಅಜ್ಞಾನ, ತಪ್ಪನ್ನು ಸರಿ ಮಾಡಲಾರದು. ದಶರಥ ತಿಳಿಯದೆ ಅಂಥ ತಪಸ್ವಿಗಳ ಕುಮಾರನನ್ನು ಕೊಂದರೂ ಶಾಪಕ್ಕೊಳಗಾದ. ಬೆಂಕಿಯನ್ನು ತಿಳಿಯದೆ ಮುಟ್ಟಿದರೂ ಸುಡುತ್ತದೆ. ಮೊದಲಿಗೆ, ಶಕುಂತಲೆ ಕಣ್ವರಿಲ್ಲದಿದ್ದಾಗ ಸ್ವಾತಂತ್ರ್ಯವಹಿಸಿ ದುಷ್ಯಂತನಲ್ಲಿ ಪ್ರಣಯ ಮಾಡಿ ಗುಪ್ತವಾಗಿ ಗಾಂಧರ್ವ ವಿವಾಹ ಮಾಡಿಕೊಂಡುದುದು ತಪ್ಪು, ಅಂದರೆ ಅದೊಂದು ಅಪರಾಧವೆಂದಲ್ಲ. ಅದರಲ್ಲಿ ಅನಿಷ್ಟ ಪರಿಣಾಮ ಸಂಭವನೀಯ. ಹಿರಿಯರ ಆಶೀರ್ವಾದ ಪೂರ್ವಕವಾದ ವಿವಾಹ ಹೆಚ್ಚು ಕ್ಷೇಮಕರ. 'ಪ್ರಿಯಾ ಹಿ ಸೀತಾ ರಾಮಸ್ಯ ದಾರಾ : ಪಿತೃಕೃತಾ ಇತಿ' ಎಂದು ವಾಲ್ಮೀಕಿ ಈ ಆದರ್ಶವನ್ನು ಎತ್ತಿ ಹಿಡಿಯುತ್ತಾನೆ. ಶಕುಂತಲೋಪಾಖ್ಯಾನದಲ್ಲಿ ವ್ಯಾಸರೂ ಈ ಆದರ್ಶವನ್ನೆ ತೋರುತ್ತಾರೆ. ಕಾಳಿದಾಸನೂ ಶಾರ್ಙ್ಗರವನ ಬಾಯಿಂದ 'ಹೀಗೆ ತಾನಾಗಿ ಮಾಡಿಕೊಂಡ ಚಾಪಲ್ಯ ವಿಫಲಗೊಂಡು ದಹಿಸುತ್ತದೆ' ಎಂದು ಶಕುಂತಲೆಗೆ ಹೇಳಿಸುತ್ತಾನೆ, ಶಕುಂತಲೆಯ ಈ ಚಾಪಲ್ಯವನ್ನು ದೂರ್ವಾಸರು ದಿವ್ಯದೃಷ್ಟಿಯಿಂದ ತಿಳಿದು, ತಪ್ಪು ಮಾಡಿದ ಮಕ್ಕಳಿಗೆ ಹಿರಿಯರು ಶಿಕ್ಷಿಸುವಂತೆ ಪ್ರೀತಿಯಿಂದಲೆ, ಪ್ರೀತಿಯಿಂದ ತಂದುಕೊಂಡ ಕೋಪದಿಂದಲೆ ಶಾಪ ನೀಡಿದರು. ಅದೂ ಅಲ್ಲದೆ ಪ್ರೇಮ ಚಿಂತನೆಯಲ್ಲಿ ಅತಿಥಿ ಸತ್ಕಾರದಂಥ ಕರ್ತವ್ಯಕ್ಕೆ ಲೋಪ ಮಾಡಕೂಡದೆಂಬುದನ್ನು ಶಕುಂತಲೆಗೆ ಕಲಿಸಬೇಕಾಗಿತ್ತು. ಈ ಶಾಪ 'ಕೋಪೋऽಪಿ ದೇವಸ್ಯ ವರೇಣ ತುಲ್ಯ :' ದೇವರು ಕೋಪ ಮಾಡಿದರೂ ವರದಂತಾಗುತ್ತದೆ' ಎಂಬಂತೆ ಶಕುಂತಲೆಗೆ ವರವಾಗಿ ಪರಿಣಮಿಸಿತು. ದುಷ್ಯಂತ ಶಕುಂತಲೆಯರಿಬ್ಬರಲ್ಲೂ ಪ್ರಾರಂಭದಲ್ಲಿದ್ದ ಕಾಮ ಮೂಲವಾದ ಪ್ರೇಮ ವಿರಹಾಗ್ನಿಯಲ್ಲಿ ಬೆಂದು ನಿರ್ಮಲ ಪ್ರೇಮವಾಗಿ ಪರಿಣಮಿಸಿತು. ಇಲ್ಲದಿದ್ದಲ್ಲಿ ಶಕುಂತಲೆ ದುಃಷ್ಯಂತನ ವಿಶಾಲ ಅಂತಃಪುರದ ಒಂದು ಮೂಲೆಯಲ್ಲಿ ಹಂಸಪದಿಕೆಯಂತೆ ತಾನೂ ಒಬ್ಬಳಾಗಿ ಬಿದ್ದಿರುತ್ತಿದ್ದಳು. ಒಂದು ವೇಳೆ ಪಟ್ಟದ ರಾಣಿಯಾದರೂ, ತನ್ನ ವೈಯಕ್ತಿಕ ವಿಚಾರಗಳಲ್ಲಿಯೆ ಮುಳುಗಿದ್ದು ಅತಿಥಿ ಸತ್ಕಾರದಂಥ ಕರ್ತವ್ಯ ಲೋಪ ಮಾಡುತ್ತ ಇನ್ನಷ್ಟು ಅನಿಷ್ಟಗಳಿಗೀಡಾಗುತ್ತಿ

ದ್ದಳು. ದೂರ್ವಾಸರು ತ್ರಿಕಾಲಜ್ಞಾನಿಗಳು, ಎಲ್ಲವನ್ನೂ ಮೊದಲೇ ತಿಳಿದು ಶಕುಂತಲೆಗೆ ಶಾಪದ ನೆಪದಿಂದ ಹಿತವನ್ನೆ ಮಾಡಿದರು. ಸತ್ಪುರುಷರ ಲಕ್ಷಣ ಇದು. ಶ್ರೀಗಂಧದ ತುಂಡಿನೊಡನೆ ಘರ್ಷಣೆಯಾದಷ್ಟು ಸುವಾಸನೆ ಹೆಚ್ಚುತ್ತದೆ. ದುರ್ಜನರು ಮಾತ್ರ ಬಿಚ್ಚಲಿನ ರೊಚ್ಚಿನಂತೆ. ದೂರವಿರುವುದೆ ಕ್ಷೇಮ.

ಲಕ್ಷ್ಮಣನ ವಿಷಯದಲ್ಲಿ ದೂರ್ವಾಸರು ಸಿಟ್ಟಾದುದಕ್ಕೆ ಶಂಬೂಕನ ತಪ್ಪಿನಿಂದ ದೇವತೆಗಳು ಬ್ರಾಹ್ಮಣ ಕುಮಾರನ ಪ್ರಾಣಹರಣ ಮಾಡಿದಂತೆ ಯಾವುದೊ ಒಂದು ದೂರದ ಕಾರಣವಿತ್ತು, ಲಕ್ಷ್ಮಣನೇನೂ ತಪ್ಪು ಮಾಡಿಲ್ಲ, ದೂರ್ವಾಸರೂ ಕೇವಲ ಭೋಜನ ಸಂತೃಪ್ತಿಗಾಗಿ ಬಂದಿರಲಿಲ್ಲ. ಇಲ್ಲದಿದ್ದರೆ ಅವರು ಲಕ್ಷ್ಮಣನಿಂದಲೆ ಭೋಜನ ಪಡೆದು ಹಿಂತಿರುಗುತ್ತಿದ್ದರು. ಆದ್ದರಿಂದ, ಅಯೋಧ್ಯೆಯ ಪ್ರಜೆಗಳು ಮಾಡಿದ ಅಕ್ಷಮ್ಯ ಅಪರಾಧಕ್ಕಾಗಿ ಅವರ ಮೇಲಿನ ಸಿಟ್ಟನ್ನು ಲಕ್ಷ್ಮಣನ ಮೇಲೆ ತೋರಿಸಿದ್ದರು. ಸುಳ್ಳು ಅಪವಾದ ಹಾಕಿ ಜಗನ್ಮಾತೆಯಾದ ಸೀತಾದೇವಿಯನ್ನು ರಾಮಚಂದ್ರನಿಂದ ದೂರಮಾಡಿದ ಪಾಪಿಗಳು ಅಯೋಧ್ಯೆಯ ಕೆಲವು ಪ್ರಜೆಗಳು. ಅವರಿಗೆ ಈ ರಾಮನು ದೂರವಾದರೆ ತಕ್ಕ ಶಾಸ್ತಿಯಾದೀತು. ರಾಮ, ಲಕ್ಷ್ಮಣನಿರುವಷ್ಟು ಕಾಲ ಅವನಿಗಾಗಿ ಆದರೂ ಇರುವವ. ಅವನಿಗೆ ಆತ ಬಹಿಃಪ್ರಾಣ, ದ್ವಿತೀಯ ಅಂತರಾತ್ಮ. ಅದಕ್ಕೆ ಲಕ್ಷ್ಮಣನನ್ನು ದೂರಮಾಡಬೇಕು. ಆಗ ರಾಮ ಸ್ವತಃ ದೂರ ಹೋಗುತ್ತಾನೆ.

ಇತ್ತ ಅಯೋಧ್ಯೆಯ ಪ್ರಜೆಗಳ ಅಪರಾಧದಿಂದ ಕುಪಿತವಾದ ದೈವವು ಅವರಿಂದ ಲಕ್ಷ್ಮಣನನ್ನು ದೂರಮಾಡಲು ಯೋಚನೆ ಹಾಕಿಕೊಂಡಿತ್ತು. ಆ ಯೋಜನೆಯಂತೆ ಕಾಲಪುರುಷ ತಾಪಸರೂಪದಿಂದ ಬಂದು 'ರಾಮ ತನ್ನ ಲೋಕಕ್ಕೆ ಹಿಂತಿರುಗಬೇಕೆ'ಂಬ ಬ್ರಹ್ಮನ ಪ್ರಾರ್ಥನೆಯನ್ನು ತಿಳಿಸಿದ. ಅಕಾಲದಲ್ಲಿ ಒಳಗೆ ಪ್ರವೇಶಿಸುವವರಿಗೆ ಮರಣದಂಡನೆಯ ಆಜ್ಞೆಯನ್ನೂ ರಾಮನಿಂದ ಹೊರಡಿಸಿದ. ಆಗ ಸರಿಯಾಗಿ ದೂರ್ವಾಸ ಮುನಿ ಬಂದು ಲಕ್ಷ್ಮಣನ ಮೇಲೆಯೆ ಆ ಆಜ್ಞೆ ಎರಗುವಂತೆ ಮಾಡಿದ, ಸರ್ವಭಕ್ಷಕವಾದ ಕಾಲ ಒಂದು ಮುನಿಯ ರೂಪದಿಂದ ರಾಮನಿಂದ ಉಗ್ರ ಶಾಸನ ಹೊರಡಿಸಿತು, ಇನ್ನೊಂದು ಮುನಿಯ ರೂಪದಿಂದ ಆ ಶಾಸನವನ್ನು ಲಕ್ಷ್ಮಣನ ಮೇಲೆ ಎರಗಿಸಿತು. ಮುಂದೆ ದೈವದ ಯೋಜನೆಯಂತೆ, ದೂರ್ವಾಸರ ಆಲೋಚನೆಯಂತೆ, ರಾಮ ಮಹಾಪ್ರಸ್ಥಾನ ಕೈಗೊಂಡು ಈ ಲೋಕದಿಂದ ದೂರ ಹೊರಟುಹೋದ.

ದೂರ್ವಾಸರಿಗೆ ಇದೆಲ್ಲ ಮೊದಲೆ ತಿಳಿದಿತ್ತೆನ್ನುವುದು ಕೇವಲ ಊಹೆ ಎಂದು ತಿಳಿಯಬಾರದು. ಹಿಂದೆ ದಶರಥನೆ ಒಮ್ಮೆ ತನ್ನ ಮಕ್ಕಳ ಭವಿಷ್ಯ ಕೇಳಿದಾಗ ದೂರ್ವಾಸರು ಹೇಳಿದರಂತೆ, 'ರಾಮ ಸೀತೆಯನ್ನೂ ಲಕ್ಷ್ಮಣನನ್ನೂ ತೊರೆಯುತ್ತಾನೆ' ಎಂದು. (ಉ. 50-12)

## ಅಹಲ್ಯಾ ವೃತ್ತಾಂತ—ವಾಸ್ತವದಲ್ಲಿ

ಅಹಲ್ಯೆಗೂ ದೇವೇಂದ್ರನಿಗೂ ಗೌತಮಮುನಿ ಶಾಪ ಕೊಟ್ಟುದು ತನ್ನ ಪ್ರಾಚೀನ ಕರ್ಮದಿಂದಾಗಿ. ಅಹಲ್ಯೆ ಅಪರಾಧಿನಿ ಅಲ್ಲ, ದೇವೇಂದ್ರನ ಬಲಾತ್ಕಾರಕ್ಕೆ ಒಳಗಾಗಿದ್ದಳು ಆಕೆ. ದೇವೇಂದ್ರ ಬಲಾತ್ಕಾರ ಮಾಡಿದ್ದರೂ ಅದು 'ದೇವ ಕಾರ್ಯ,' ಗೌತಮರ ಹೆಚ್ಚಿನ ತಪಸ್ಸಿನ ಪುಣ್ಯವನ್ನು ಕಳೆಯಲು ಮಾಡಿದ ತಂತ್ರ, ಹೂಡಿದ ನಾಟಕ. ಅಹಲ್ಯೆ ಆಸೆಯಿಂದಲೆ ದೇವೇಂದ್ರನ ಸಮಾಗಮಕ್ಕೆ ಒಪ್ಪಿಗೆ ನೀಡಿದಳೆಂದು ಮೇಲು ನೋಟಕ್ಕೆ ರಾಮಾಯಣದಲ್ಲಿ ಕಾಣುತ್ತದೆ. ಆದರೆ ಮಹಾಭಾರತ ಮತ್ತು ಪುರಾಣಗಳಲ್ಲಿ ಸ್ಪಷ್ಟವಾಗಿ ಅಹಲ್ಯೆ ಮನಸ್ಸಿನಲ್ಲಿ ಶುದ್ಧಳಾಗಿದ್ದಳೆಂದೂ ದೇವೇಂದ್ರನೇ ಬಲಾತ್ಕರಿಸಿದನೆಂದೂ ಇದೆ. ರಾಮಾಯಣವೂ ವಾಲ್ಮೀಕಿಯ ಪವಿತ್ರವಾದ ಮಾತು, ಸುಳ್ಳಾಗದುದು, ಹಾಗೆಂದು ಬ್ರಹ್ಮದೇವರ ವರವಿದೆ — 'ಈ ಕಾವ್ಯದಲ್ಲಿ ಬರುವ ನಿನ್ನ ಮಾತೊಂದೂ ಸುಳ್ಳಾಗುವುದಿಲ್ಲ' (ಬಾಲ. 2-35) ಆದ್ದರಿಂದ ರಾಮಾಯಣದ ಅಹಲ್ಯಾ ವೃತ್ತಾಂತವನ್ನು ನಾವು ಹೀಗೆ ಗ್ರಹಿಸಬೇಕು—

ದೇವೇಂದ್ರ ಅಹಲ್ಯೆಯ ಬಳಿಗೆ ಬಂದಾಗ ಆಕೆ ಋತು ಕಾಲದಲ್ಲಿರಲಿಲ್ಲ, ಅಂದರೆ ಮುಟ್ಟಾಗಿ ಹದಿನಾರು ದಿನಗಳು ಕಳೆದುಹೋಗಿದ್ದುವು. ಗೌತಮನೆಂದೂ ಇಂಥ ಸಮಯದಲ್ಲಿ ಮಡದಿಯ ಸಂಗ ಮಾಡುತ್ತಿರಲಿಲ್ಲ. ದೇವೇಂದ್ರ ಗೌತಮನ ವೇಷದಲ್ಲಿ ಬಂದಿದ್ದು ಈ ನಿಯಮ ಮುರಿಯಲು ತೊಡಗಿದಾಗ ಅಹಲ್ಯೆಗೆ ಅಚ್ಚರಿ. 'ಇದು ನನಗೆ ಋತು ಕಾಲವಲ್ಲ !' ಎಂದಳು. 'ಕಾಮಾರ್ಥಿಗಳು ಋತು ಕಾಲವನ್ನು ನೋಡುವುದಿಲ್ಲ' ಎಂದ ದೇವೇಂದ್ರ. ಈಗ ಅಹಲ್ಯೆಗೆ ಸಂದೇಹ ಬಂದಿತು. 'ಇವನಾರೊ ಬೇರೆಯೆ ಇರಬೇಕು. ಪತಿಯ ವೇಷದಿಂದ ವಂಚಿಸಬಂದಿದ್ದಾನೆ. ಇನ್ನಾರೂ ಅಲ್ಲ, ದೇವೇಂದ್ರನೆ ಇರಬಹುದು. ಬಹು ಕಾಲದಿಂದಲೂ ಆತ ನನ್ನನ್ನು ಬಯಸಿದ್ದ.'

ಮತಿಂ ಚಕಾರ ದುರ್ಮೇಧಾ ದೇವರಾಜ ಕುತೂಹಲಾತ್ ।
ಅಥಾಬ್ರವೀತ್ ಸುರಶ್ರೇಷ್ಠಂ ಕೃತಾರ್ಥೇನಾಂತರಾತ್ಮನಾ ॥
ಕೃತಾರ್ಥಾಸ್ಮಿ ಸುರಶ್ರೇಷ್ಠ ಗಚ್ಛ ಶೀಘ್ರಮಿತಃ ಪ್ರಭೋ ।
ಆತ್ಮಾನಂ ಮಾಂ ಚ ದೇವೇಶ ಸರ್ವಥಾ ರಕ್ಷ ಗೌತಮಾತ್ ॥

ಅಹಲ್ಯೆ ಕೋಪಗೊಂಡಳು. 'ದುರ್ಮೇಧ'ಳಾದಳು. ಕೋಪ ಭಯ ಆತಂಕಗಳಿಂದ ಬುದ್ಧಿಗೆಟ್ಟವಳಾದಳು. 'ದೇವರಾಜ ಕುತೂಹಲ'ದಿಂದ ದುರ್ಮೇಧಳಾದಳು. ದೇವರಾಜನೆಂದು ಆವನಲ್ಲಿ ತನಗಿರುವ ಕುತೂಹಲ ಅಭಿಲಾಷೆ ಎಂದಲ್ಲ, ದೇವರಾಜನಿಗೆ ತನ್ನಲ್ಲಿ ಇನ್ನೂ ಕುತೂಹಲವಿದೆಯಲ್ಲ! ಎಂದು. ಹೀಗೆ ದುರ್ಮೇಧಳಾಗಿ 'ಮತಿಂ ಚಕಾರ' ಅನುಮತಿ ನೀಡಿದಳು, ಅಥವಾ 'ಮಾಳಿಗೆಯಿಂದ ನೋಡುತ್ತಾನೆ' ಎಂದರೆ 'ಮಾಳಿಗೆಯನ್ನೇರಿ ನೋಡುತ್ತಾನೆ' ಎಂಬಂತೆ ದೇವರಾಜನಿಗೆ ತನ್ನಲ್ಲಿರುವ ಕುತೂಹಲದಿಂದಾಗಿ ಉಂಟಾದ ಅತ್ಯಾಚಾರ ಬಲಾತ್ಕಾರಗಳನ್ನು ತಡೆಯಲಾಗದೆ ಅಸಹಾಯಕಳಾಗಿ ಅನುಮತಿ ನೀಡಿದಳು, ಕೋಪದಿಂದಲೆ. ಕೊನೆಯಲ್ಲಿ 'ಕೃತಾರ್ಥಾಸ್ಮಿ' ಅರ್ಥ ಎಂದರೆ ನಿವೃತ್ತಿ, ನಾಶ. ನನ್ನ ಸರ್ವನಾಶ ಮಾಡಿರುವಿ ಎಂದಳು. ನಾನು ಧನ್ಯಳಾದೆ ಎನ್ನಲಿಲ್ಲ ಏಕೆಂದರೆ ಹೆಣ್ಣಿನ ಶೀಲನಾಶವೆ ಸರ್ವನಾಶ.

'ಕೃತಾರ್ಥೋಽಸಿ'—ಎಂಬ ಪಾಠವೂ ಇದೆ. 'ನೀನೇನೋ ಕೃತಾರ್ಥನಾದಿ, ಧನ್ಯನಾದಿ. ನನ್ನ ಗತಿ ಏನು ?' ಎಂಬ ಆಕ್ಷೇಪ.

'ಕೃತಾರ್ಥೇನಾಂತರಾತ್ಮನಾ' ಕೃತಾರ್ಥನಾದೆನೆಂಬ ಮನೋಭಾವದಿಂದ ಕೂಡಿದ ದೇವೇಂದ್ರನನ್ನು ಅಹಲ್ಯೆ ಆಕ್ಷೇಪಿಸಿದಳು. ಕೃತಾರ್ಥಳಾದೆ ಧನ್ಯಳಾದೆನೆಂಬ ಮನೋಭಾವದಿಂದ ಯುಕ್ತಳಾದ ಅಹಲ್ಯೆ ಹೇಳಿದಳೆಂದಲ್ಲ. ಹಾಗೆ ಅನ್ವಯಿಸಬೇಕಾಗಿಲ್ಲ. ಅನ್ವಯಿಸಿದರೂ ಅರ್ಥ ಶಬ್ದಕ್ಕೆ ನಿವೃತ್ತಿ, ನಾಶ ಅಂದರೆ ಶೀಲನಾಶವೆಂದು ಅರ್ಥವಿಟ್ಟುಕೊಂಡರೆ ಸಮಸ್ಯೆ ಇಲ್ಲ.

ಅಂತೂ ಈ ಶ್ಲೋಕಗಳಲ್ಲಿ ಮೇಲುನೋಟಕ್ಕೆ ಅಹಲ್ಯೆ ಮನಃಪೂರ್ವಕವಾಗಿ ದೇವೇಂದ್ರನ ಸಮಾಗಮ ಮಾಡಿದಳೆಂದು ಕಂಡರೂ ವಿಚಾರ ಮಾಡಿದಾಗ ಅವಳು ಬಲಾತ್ಕಾರಕ್ಕೆ ಒಳಗಾದವಳೆಂಬ ಅಭಿಪ್ರಾಯವೆ ಕಾಣುತ್ತದೆ. ಏಕೆಂದರೆ ಆಕೆ ಇಂದ್ರನನ್ನು 'ನನ್ನ ಸರ್ವನಾಶ ಮಾಡಿದಿ' ಎಂದು ಆಕ್ಷೇ

ಷಿಸಿ 'ಇನ್ನಾದರೂ ಬೇಗನೆ ಹೊರಗೆ ನಡೆ, ನೀನೀಗ ನನ್ನನ್ನೂ ನಿನ್ನನ್ನೂ ಗೌತಮರ ಶಾಪದಿಂದ ಪಾರು ಮಾಡಬೇಕಾಗಿದೆ ಎಂದಾಗ ಇಂದ್ರ 'ಪ್ರಹಾಸ' ಮಾಡುತ್ತಾನೆ ! ದೊಡ್ಡದಾಗಿ ನಗುತ್ತಾನೆ—

ಇಂದ್ರಸ್ತು ಪ್ರಹಸನ್ ವಾಕ್ಯಮಹಲ್ಯಾಮಿದಮಬ್ರವೀತ್ ।
ಸುಶ್ರೋಣಿ ಪರಿತುಷ್ಟೋಽಸ್ಮಿ ಗಮಿಷ್ಯಾಮಿ ಯಥಾಗತಂ ॥

ತಾನು ಬಲಾತ್ಕಾರ ಮಾಡದೆ ಅವಳಾಗಿಯೆ ಸಂತೋಷದಿಂದ ಒಪ್ಪಿದ್ದರೆ ಈ ರೀತಿ ದೊಡ್ಡದಾಗಿ ನಗಬೇಕಾಗಿರಲಿಲ್ಲ. 'ಇಂದ್ರಸ್ತು' 'ಇಂದ್ರನಾದರೊ' ದೊಡ್ಡದಾಗಿ ನಕ್ಕುಬಿಟ್ಟ! ನೀನೆಷ್ಟು ಪ್ರತಿಭಟಿಸಿದರೂ 'ಪರಿತುಷ್ಟೋಽಸ್ಮಿ' 'ನಾನಂತೂ ತೃಪ್ತಿಪಡೆದು ಕೊಂಡೆ' ಇನ್ನೇನು ? ನನ್ನನ್ನೂ ನಿನ್ನನ್ನೂ ಗೌತ ಮರ ಶಾಪದಿಂದ ರಕ್ಷಿಸಿಕೊಳ್ಳುವುದು ನನಗೆ ಬೇಕಾಗಿಲ್ಲ. ಅವರಿಂದ ಇಬ್ಬರಿಗೂ ಶಾಪ ಕೊಡಿಸಿ ಅವರ ತಪಶ್ಚರ್ಯೆ ಹಾಳು ಮಾಡಲೆಂದೆ ಬಂದವ ನಾನು. ನನ್ನ ಕೆಲಸವಾದಂತಾಯಿತು, ಬಂದಹಾಗೇ ಹೋಗುತ್ತೇನೆ' ಎಂದ.

ಅಹಲ್ಯೆಗೆ ನಿಜವಾಗಿ ದೇವರಾಜನಲ್ಲಿ ಕುತೂಹಲ ಅಭಿಲಾಷೆ ಇರು ತ್ತಿದ್ದರೆ ಇಂದ್ರ 'ದೇವರಾಜ'ನಾಗೇ ಅಹಲ್ಯೆಯ ಮುಂದೆ ಪ್ರತ್ಯಕ್ಷನಾಗುತ್ತಿದ್ದ. ಗೌತಮರ ವೇಷದಿಂದಲ್ಲ. ಹೀಗೆ ಅಹಲ್ಯೆ ಬಲಾತ್ಕಾರಕ್ಕೊಳಗಾಗಿ ಶೀಲ ನಾಶ ಹೊಂದಿ ಬಹುಕಾಲ ತಪಸ್ಸು ಮಾಡಿ ಪರಿಶುದ್ಧಳಾದಳು, ರಾಮನ ದರ್ಶನದಿಂದ ಶಾಪವಿಮುಕ್ತಳೂ ಆದಳು.

'ಶ್ರೀರಾಮನೆ, ಅಹಲ್ಯೆಯ ಪ್ರೇಮಸಮಾಗಮವನ್ನು ಗಮನಿಸಿಯೆ ಅವಳ ಕಾಲು ಮುಟ್ಟಿ ನಮಸ್ಕಾರ ಮಾಡುತ್ತಾನೆ ಪೂಜ್ಯತೆಯಲ್ಲಿ ಪಾವಿತ್ರ್ಯತೆಯಲ್ಲಿ. ಆದರಿಂದಲೆ ಆ ಮಾನವೀಯತೆಯನ್ನು ಗುರುತಿಸಿಯೆ ನಾವು ಅಹಲ್ಯೆ ತಾರಾ ದ್ರೌಪತಿಯರನ್ನು ಪ್ರಾತಃ ಕಾಲ ಸ್ಮರಣೀಯರಾಗಿ ಮಾಡಿ ಅವರನ್ನು ಪಂಚಪಾತಿವ್ರತ್ಯೆಯರ ಪಾವನತೆಯಲ್ಲಿ ಪೂಜಿಸುತ್ತಿದ್ದೇವೆ.'

—ಈ ಮಾತುಗಳು ಪರಸ್ಪರ ವಿರುದ್ಧ. ಇದು ಪ್ರೇಮ ಸಮಾಗಮ ವಾಗಿರುತ್ತಿದ್ದರೆ ಪಾತಿವ್ರತ್ಯಕ್ಕೇ ಮಾನವೀಯತೆಗೇ ಪಾವಿತ್ರ್ಯಕ್ಕೇ ಕುಂದು ಉಂಟಾಗುತ್ತಿತ್ತು. ಅಂಥ ಹೆಂಗಸನ್ನು ರಾಮ, ಕೇವಲ ಅಪವಾದ ಬಂದಿತೆಂದೆ ಸೀತೆಯನ್ನು ಪರಿತ್ಯಾಗ ಮಾಡಿದ ರಾಮ, ನಿಶ್ಚಯವಾಗಿಯೂ ನಮಸ್ಕರಿಸು

ತ್ತಿದ್ದಿಲ್ಲ. ಪತಿವ್ರತೆಯರ ಸಾಲಿನಲ್ಲಿ ನಾವು ಪ್ರಾತಃಕಾಲದಲ್ಲಿ ಸ್ಮರಿಸುತ್ತಿರಲಿಲ್ಲ. ಬಲಾತ್ಕಾರಕ್ಕೊಳಗಾದ ಅಬಲೆ ಎಂದು ಶಿಷ್ಟಸಮಾಜ ಆಕೆಯನ್ನು ಕ್ಷಮಿಸಿತ್ತು.

ಗೌತಮನು ತಿಳಿಯದೆ ನಿರಪರಾಧಿನಿಯಾದ ಅಹಲ್ಯೆಗೂ, ವಾಸ್ತವವಾಗಿ ಕಾಮಿಯಲ್ಲದ ಪೂಜ್ಯನಾದ ದೇವೇಂದ್ರನಿಗೂ ಎಂದೊ ಒಮ್ಮೆ ಶಾಪವಿತ್ತು ತನ್ನ ತಪಶ್ಚರ್ಯೆಗೆ ಸ್ವಲ್ಪಮಟ್ಟಿನ ಕುಂದು ತಂದುಕೊಂಡ. ಇದರಿಂದ, ಕ್ಷುಲ್ಲಕ ಕಾರಣಕ್ಕಾಗಿ ಯಾವಾಗಲೂ ಶಾಪ ಕೊಡುವಂಥ ಕ್ರೌರ್ಯ ಗೌತಮರಂಥ ಋಷಿಗಳಿಗೆ ಉಂಟೆನ್ನಲು ಅವಕಾಶವೂ ಇಲ್ಲ, ತಪಶ್ಚರ್ಯೆಗೆ ಕುಂದು ತರುವ ಎಲ್ಲ ಶಾಪಕ್ರೌರ್ಯಗಳೂ ನಮ್ಮ ಸಂಸ್ಕೃತಿ ವಿಶೇಷದಲ್ಲಿ ಮೌಲ್ಯವೆನಿಸುವಂತೆಯೂ ಇಲ್ಲ.

ಒಂದು ವೇಳೆ ಅಹಲ್ಯೆ ಮನಃಪೂರ್ವಕವಾಗಿಯೆ ಇಂದ್ರನ ಸಮಾಗಮಕ್ಕೆ ಸಮ್ಮತಿ ಕೊಟ್ಟಿದ್ದರೂ ಆ ತಪ್ಪಿಗೆ ಘೋರ ಪ್ರಾಯಶ್ಚಿತ್ತ ಮಾಡಿ ಪರಿಶುದ್ಧಳಾದಳೆಂದೆ ಪತಿವ್ರತೆಯರ ಸಾಲಿನಲ್ಲಿ ಬರುತ್ತಾಳೆ, ರಾಮನಿಂದ ನಮಸ್ಕರಿಸಲ್ಪಡುತ್ತಾಳೆ, ಹೊರತು ಪ್ರೇಮ ಸಮಾಗಮ ಮಾಡಿದಳೆಂದು 'ಮಾನವೀಯತೆ'ಯ ದೃಷ್ಟಿಯಿಂದಲ್ಲ. ಅದು ಮಾನವೀಯತೆಯೆ ಆಗುವುದಿಲ್ಲ.

## ದಶರಥನ ಅಪರಾಧ

'ಋಷಿಕುಮಾರನನ್ನು ದಶರಥ ತಿಳಿಯದೆ ವನ್ಯಮೃಗವೆಂದು ಬಾಣದಿಂದ ಕೊಲ್ಲುತ್ತಾನೆ, ತಿಳಿದೊಡನೇ ವಿಹ್ವಲನಾಗಿ ಕಣ್ಣೀರು ಹರಿಸುತ್ತಾನೆ. ಅವನ ಪ್ರಾಮಾಣಿಕವಾದ ಅಳಲನ್ನು ಕಂಡೂ ಕಂಡೂ 'ನೀನು ಪುತ್ರಶೋಕದಿಂದಲೆ ಮರಣ ಹೊಂದು' ಎಂದು ಪ್ರತೀಕಾರದ ಬರ್ಬರತೆಯ ಶಾಪ ಕೊಡುತ್ತಾನೆ.'

—ಈ ಆರೋಪವೂ ನಿರಾಧಾರವಾದುದು. ಅಂಥ ತಪಸ್ವಿ ದಂಪತಿಗಳು ಮೊದಲೆ ಕುರುಡರು, ಮೇಲಾಗಿ ವೃದ್ಧರು. ಒಬ್ಬನೇ ಮಗ. ದಶರಥ ಎಷ್ಟು ಪಶ್ಚಾತ್ತಾಪ ಪಟ್ಟರೂ ಆ ತಪಸ್ವಿಗೆ ಉಂಟಾದ ನಷ್ಟ ತುಂಬಿಬರಲಾರದು, ಮನಸ್ಸಿನ ತಾಪ ಆರಲಾರದು. ದಶರಥನಿಗೆ ಪಾಪ ತಟ್ಟದಿರಲಾರದು. ತಿಳಿಯದೆ ಅಪಥ್ಯ ಉಂಡರೆ ಪಶ್ಚಾತ್ತಾಪಪಟ್ಟರೂ ವ್ಯಾಧಿ ಬರದಿರಲಾರದು,

(ಅಯೋ.64-59) ತಪಸ್ವಿ ದುಃಖ ತಡೆಯದೆ ಶಾಪ ಕೊಟ್ಟಿದ್ದಾನೆ. ಇದನ್ನು ಬರ್ಬರತೆ ಎನ್ನುವುದು ಅನ್ಯಾಯವಾಗುತ್ತದೆ.

ಅಲ್ಲದೆ, ಈ ಶಾಪ, ಮಕ್ಕಳಿಲ್ಲದೆ ಕೊರಗುತ್ತಿದ್ದ ದಶರಥನಿಗೆ ಮುಂದೆ ನಿಶ್ಚಿತವಾಗಿ ಮಕ್ಕಳಾಗುವ ಭರವಸೆ ಮೂಡಿಸಿದ್ದರಿಂದ ಒಂದು ರೀತಿಯಿಂದ ವರವಾಗೇ ಪರಿಣಮಿಸಿತು ಎನ್ನಬಹುದು.

ದಶರಥ ತಿಳಿದು ಅಪರಾಧ ಮಾಡಿದ್ದರೆ ಅಥವಾ ಅಪರಾಧಕ್ಕೆ ಪಶ್ಚಾತ್ತಾಪ ಪಡೆದಿರುತ್ತಿದ್ದರೆ ತಪಸ್ವಿಯೆ ಹೇಳುವಂತೆ ದೇವೇಂದ್ರನ ಸಿಂಹಾಸನದಲ್ಲಿದ್ದರೂ ಕೆಳಗೆ ಉರುಳುತ್ತಿದ್ದ, ತಲೆ ಏಳು ಹೋಳಾಗಿ ಒಡೆದಿರುತ್ತಿತ್ತು (ಅಯೋ. 64-23) ಆದ್ದರಿಂದ ತಪಸ್ವಿ ಸೌಮ್ಯವಾದ ಶಾಪ ಕೊಟ್ಟಿದ್ದಾನೆ ಎನ್ನಬೇಕು. ಇದನ್ನು ಬರ್ಬರತೆ ಎನ್ನಲಾಗದು.

## ವಿಶ್ವಾಮಿತ್ರರ ಮೊಂಡುತನ?

ವಿಶ್ವಾಮಿತ್ರನು ಯಜ್ಞರಕ್ಷಣೆಗೆಂದು ರಾಮಲಕ್ಷ್ಮಣರನ್ನು ಕರೆದೊಯ್ಯಲು ಬಂದಾಗ ಮಹಾಪ್ರಯಾಸದಿಂದ ಮಗನನ್ನು ಪಡೆದ ತಂದೆಯ ಕರುಳ ಮಿಡಿತವನ್ನು ಅರಿಯುವ ಅನುಕಂಪ ತೋರದೆ ಕ್ರುದ್ಧನಾಗುತ್ತಾನೆ. ಆತ ದಶರಥನ ಪ್ರಾಣ ಹಿಂಡುವುದಾದರೂ ಏತಕ್ಕೆಂದರೆ ತನ್ನ ವೈಯಕ್ತಿಕ ಸ್ವಾರ್ಥಕ್ಕಾಗಿ — 'ನಾನೊಂದು ಸಿದ್ಧಿಯನ್ನು ಸ್ವೀಕರಿಸಿದ್ದೇನೆ.

—ಈ ಆಕ್ಷೇಪವೂ ಸರಿಯಲ್ಲ. ವಿಶ್ವಾಮಿತ್ರನು ಕೇವಲ ತನ್ನ ವೈಯಕ್ತಿಕ ಸ್ವಾರ್ಥಕ್ಕಾಗಿ ರಾಮನನ್ನು ಕರೆದೊಯ್ಯುತ್ತಿಲ್ಲ. 'ಮೂಲೋಕದಲ್ಲಿ ಕೀರ್ತಿ ದೊರಕುವಂತೆ ರಾಮನಿಗೆ ಬಹುಮುಖವಾದ ಶ್ರೇಯಸ್ಸು ನೀಡುತ್ತೇನೆ' (ಬಾಲ. 19-10) ಎನ್ನುತ್ತಾನೆ ಆತ. ತಾನೊಂದು ಸಿದ್ಧಿಗಾಗಿ ನಿಯಮವನ್ನು ಸ್ವೀಕರಿಸಿದ್ದು ಅದರ ರಕ್ಷಣೆ ಮಾಡಿಕೊಳ್ಳಬೇಕಾಗಿದೆ ಎಂಬುದು ನೆಪಮಾತ್ರ.

ಮುಖ್ಯವಾಗಿ, ವಿಶ್ವಾಮಿತ್ರ ಸ್ವತಃ ಹಿಂದೆ ಕ್ಷತ್ರಿಯ ರಾಜನಾಗಿದ್ದು ನೂರು ಮಂದಿ ಮಕ್ಕಳನ್ನು ಪಡೆದವ. ಕ್ಷತ್ರಿಯನು ತನ್ನ ಕುಮಾರರನ್ನು ಹೇಗೆ ಬೆಳೆಸಬೇಕು. ಯಾವ ರೀತಿಯ ತರಬೇತಿ ನೀಡಬೇಕು ಎಂದೆಲ್ಲ

ಅನುಭವದಿಂದ ತಿಳಿದವ. ದಶರಥ ಅರವತ್ತು ಸಾವಿರ ವರ್ಷಗಳ ವೃದ್ಧ. ಅಂದಿನವರೆಗೂ ಮಕ್ಕಳಿಲ್ಲದೆ ಕೊರಗಿ ಕೊನೆಯಲ್ಲಿ ಮಹಾಪ್ರಯಾಸದಿಂದ ಪಡೆದ ಮಕ್ಕಳು ರಾಮಲಕ್ಷ್ಮಣರು. ಲೋಕ ಮೋಹಕ ರೂಪವಂತರು. ಅವರ ವಿರಹವನ್ನು ಕ್ಷಣಕಾಲವೂ ಸಹಿಸದೆ ದಶರಥ ಅವರನ್ನು ಅತಿಯಾಗಿ ಮುದ್ದು ಮಾಡುತ್ತಾನೆ. ಮುಂದೆ ರಾಮಲಕ್ಷ್ಮಣರಿಗೆ ವನವಾಸವಿದೆ. ಅಸಂಖ್ಯ ರಾಕ್ಷಸರನ್ನು ಅವರು ಕೊಲ್ಲಬೇಕಾಗಿದೆ. ಅದಕ್ಕೆ ವನವಾಸದ ಅನುಭವ ಶಸ್ತ್ರಾಸ್ತ್ರಗಳ ಪರಿಚಯ ನೀಡಬೇಕಾಗಿದೆ. ಅದೂ ಅಲ್ಲದೆ, ತಾಟಕಾವಧ, ಮಾರೀಚ ಸುಬಾಹು ನಿಗ್ರಹ, ಅಹಲ್ಯೋದ್ಧಾರ, ಸೀತಾಸ್ವಯಂವರದಂತಹ ಮಹಾ ಕಾರ್ಯಗಳು ರಾಮನಿಂದ ನಡೆಯಬೇಕಾಗಿವೆ. ಇಷ್ಟೆಲ್ಲ ಕಾರ್ಯಗಳು ಆಗಬೇಕಾಗಿರುವಾಗ ಮಗನ ಶ್ರೇಯಸ್ಸುಗಳಿಗೆ ತಂದೆಯ ಪ್ರೀತಿ ಅಡ್ಡವಾಗ ಬಾರದೆಂದು ವಿಶ್ವಾಮಿತ್ರ ಸ್ವಲ್ಪ ಕಠೋರವಾಗಿಯೆ ವರ್ತಿಸಿದ. ರಾಮನಿಗೆ ಮಾತ್ರವಲ್ಲ ದಶರಥನಿಗೂ ಇದರಿಂದ ಪುಣ್ಯವೃದ್ಧಿ, ಸ್ಥಿರವಾದ ಯಶಸ್ಸು ಉಂಟಾಗುತ್ತದೆ, (ಬಾಲ 19-15) ಎಂದ. ಆದ್ದರಿಂದ ವಿಶ್ವಾಮಿತ್ರ ಕೇವಲ ಸ್ವಾರ್ಥಕ್ಕಾಗಿ ದಶರಥನನ್ನು ಪೀಡಿಸಿದ ಎಂದರೆ ತಪ್ಪಾಗುತ್ತದೆ.

ರಾಮನಿಗೆ ಮುಂದೆ ವನವಾಸವಿದ ಎಂದು ವಿಶ್ವಾಮಿತ್ರನಿಗೆ ಹೇಗೆ ಗೊತ್ತು ? ಎಂದರೆ ಋಷಿಗಳು ತ್ರಿಕಾಲ ಜ್ಞಾನಿಗಳಾದ್ದರಿಂದ ಎಂದು ಹೇಳಬೇಕು. ಇದು ಬರಿ ಊಹೆಯಲ್ಲ. ಅಹಲ್ಯೆಯನ್ನು ಗೌತಮ ಶಪಿಸಿದಾಗ 'ನೀನಿಲ್ಲಿ ಕಲ್ಲಾಗಿ ಬಿದ್ದಿರು. ದಶರಥನ ಮಗ ರಾಮ ಈ ದಾರಿಯಿಂದ ಬಂದಾಗ ನಿನಗೆ ಶಾಪದ ಬಿಡುಗಡೆ' ಎಂದಿದ್ದ. ಆಗ ರಾಮ ಹುಟ್ಟಿಯೆ ಇರಲಿಲ್ಲ. ಗೌತಮನಿಗೆ ಹೇಗೆ ಗೊತ್ತು, ದಶರಥನ ಮಗನಾಗಿ ರಾಮ ಹುಟ್ಟುತ್ತಾನೆ, ಈ ದಾರಿಯಿಂದ ಬರುತ್ತಾನೆ ಎಂದು ? ಹಿಂದೆ ಎಂದೊ ನಡೆದ ಈ ವೃತ್ತಾಂತವೆಲ್ಲ ವಿಶ್ವಾಮಿತ್ರನಿಗೆ ಹೇಗೆ ಗೊತ್ತು ? ಆದರೂ ಅದನ್ನೂ ಆತ ರಾಮನಿಗೆ ಹೇಳುತ್ತಾನೆ! ಹೀಗೆ ಎಲ್ಲವನ್ನೂ ದಿವ್ಯದೃಷ್ಟಿಯಿಂದ ತಿಳಿದವ ವಿಶ್ವಾಮಿತ್ರ. ಭೂತ ಭವಿಷ್ಯತ್ತುಗಳಲ್ಲಿ ಯಾವುದನ್ನೂ ಆತ ತಿಳಿಯದವನಲ್ಲವೆಂದು ವಸಿಷ್ಠನೂ ಹೇಳುತ್ತಾನೆ (ಬಾಲ. 21-19) ಆದ್ದರಿಂದ ಪೂರ್ವ ಯೋಜನೆಯಂತೆ ವಿಶ್ವಾಮಿತ್ರ ನಡೆದುಕೊಳ್ಳುತ್ತಿದ್ದಾನೆ, ಕೇವಲ ಸ್ವಾರ್ಥದ ಉದ್ದೇಶದಿಂದಲ್ಲ.

## ವಸಿಷ್ಠರ ಜಾಪ್ರಣತನ?

'ವಶಿಷ್ಠನು ಋಷಿಯಾಗಿದ್ದು ಋಷಿಗೆ ಒಪ್ಪುವ ಔದಾರ್ಯ ಉದಾತ್ತತೆಗಳನ್ನು ತೋರದೆ ಕಾಮಧೇನುವಿಗೆ ಅಂಟಿಕೊಂಡು ಯುದ್ಧವನ್ನೂ ಮಾಡಿ ವಿಶ್ವಾಮಿತ್ರನ ಮಕ್ಕಳನ್ನೂ ಕೊಲ್ಲುತ್ತಾನೆ. ಅವನ ಲೋಭ ಮೋಹಗಳು ಅಲ್ಪ ಮಾನವ ಮಟ್ಟದ್ದು'

—ಈ ಆರೋಪವೂ ಅನುಚಿತವಾದುದು. ವಸಿಷ್ಠನಂತೆ ತಾನೂ ಬ್ರಹ್ಮರ್ಷಿಯಾಗಬೇಕೆಂದು ಅನೇಕ ಸಾವಿರ ವರ್ಷ ತಪಸ್ಸು ಮಾಡಿ, ಕಾಮಕ್ರೋಧಗಳನ್ನು ಪೂರ್ತಿ ಬಿಟ್ಟಾಗಲೆ ಬ್ರಹ್ಮರ್ಷಿ ಎನಿಸಿದ ವಿಶ್ವಾಮಿತ್ರನ ಕಥೆ ಪ್ರಸಿದ್ಧ. ಹೀಗೆ ಆದರ್ಶ ಬ್ರಹ್ಮರ್ಷಿಯಾದ ವಸಿಷ್ಠನಲ್ಲಿ ಕಾಮಕ್ರೋಧಾದಿಗಳಿರಬಲ್ಲುವೆ ? ಇದ್ದರೆ ಅವನ ಸಮಾನತೆ ಪಡೆಯಲು ವಿಶ್ವಾಮಿತ್ರ ಅನೇಕ ಸಾವಿರ ವರ್ಷ ಘೋರ ತಪಸ್ಸು ಮಾಡಿ ಕಾಮಕ್ರೋಧಾದಿ ಪರಿತ್ಯಾಗ ಮಾಡಬೇಕಾಗುವುದೆ? ವಸ್ತುತಃ ವಸಿಷ್ಠ ವಿಶ್ವಾಮಿತ್ರನ ಮಕ್ಕಳನ್ನು ಕೊಲ್ಲಲಿಲ್ಲ. ಅವರು ತಾವಾಗಿಯೆ ವಸಿಷ್ಠನ ಮೇಲೆ ಬಿದ್ದು ಬೆಂಕಿಗೆ ಬೀಳುವ ಹುಳುಗಳಂತೆ ಸುಟ್ಟು ಭಸ್ಮವಾದರು.

ವಸಿಷ್ಠ ಕಾಮಧೇನುವನ್ನು ಮೊದಲೆ ವಿಶ್ವಾಮಿತ್ರನಿಗೆ ಕೊಟ್ಟಿದ್ದರೆ ಈ ದುರಂತ ಸಂಭವಿಸುತ್ತಿರಲಿಲ್ಲ, ನಿಜ. ಆದರೆ ಕಾಮಧೇನುವೆ ಇದಕ್ಕೆ ಒಪ್ಪಲಿಲ್ಲ. ವಸಿಷ್ಠರ ಸೇವೆಯನ್ನು ಭಕ್ತಿಯಿಂದ ಮಾಡುತ್ತ ದೇವತೆಗಳಿಗಾಗಿ ಯಜ್ಞದ ಹವಿಸ್ಸನ್ನು ನೀಡುವವಳು ಕಾಮಧೇನು, ರಾಜನೊಬ್ಬನ ಭೋಗ ವಸ್ತುಗಳನ್ನು ಪೂರೈಸುವವಳಲ್ಲ. ವಿಶ್ವಾಮಿತ್ರ ತನ್ನನ್ನು ಬಲಾತ್ಕಾರದಿಂದ ಸೆಳೆದೊಯ್ಯಲು ಬಂದಾಗ ಆಕೆ ತಪ್ಪಿಸಿಕೊಂಡು ವಸಿಷ್ಠನ ಬಳಿಗೆ ಓಡಿಬಂದು ಭಕ್ತಿಯಿಂದ ಬೇಡಿಕೊಂಡಳು, 'ಯುದ್ಧವನ್ನಾದರೂ ಮಾಡಿ ನನ್ನನ್ನು ತಮ್ಮ ಬಳಿಯೆ ಉಳಿಸಿಕೊಳ್ಳಿ' ಎಂದು. ವಸಿಷ್ಠನ ಅನುಜ್ಞೆ ಪಡೆದು ಅಸಂಖ್ಯ ಸೈನ್ಯವನ್ನು ತನ್ನ ಅಂಗಾಂಗಗಳಿಂದ ಸೃಷ್ಟಿಸಿದಳು. ಯುದ್ಧ ನಡೆಯಿತು.

ಇಲ್ಲಿ ಕಾಮಧೇನುವಸಿಷ್ಠರ ಸಂಬಂಧಧಾತು ಲೋಭ ಮೋಹಗಳದ್ದಲ್ಲ, ಭಕ್ತಿ ಪ್ರೇಮಗಳದ್ದು. ವಿಶ್ವಾಮಿತ್ರ ಕಾಮಧೇನುವಿನ ಬದಲಾಗಿ ಕೋಟಿ

ಸಂಪತ್ತಿಯಲ್ಲಿ ಬೇರೆ ಗೋವುಗಳನ್ನೂ ಆನೆ ಕುದುರೆ ಮುಂತಾದುವನ್ನೂ ಕೊಡುವೆನೆಂದ. ಆದರೆ ಕಾಮಧೇನುವಿನ ಭಕ್ತಿಗೆ ಯಾರು ಬೆಲೆ ಕಟ್ಟಬಲ್ಲರು ? ಭಕ್ತಳಾದ ತನ್ನನ್ನು ವಸಿಷ್ಠ ಮಹರ್ಷಿ ಹೇಗೆ ತಾನೆ ತೊರೆಯುತ್ತಾನೆ ಎಂಬುದು ಕಾಮಧೇನುವಿನ ಅಚಲ ವಿಶ್ವಾಸ. (ಬಾಲ. 54-4) ವಸಿಷ್ಠ ವಿಶ್ವಾಸ ದ್ರೋಹ ಮಾಡಲಿಲ್ಲ.

'ವಸಿಷ್ಠನು ನಿಮಿಗೆ ತಾನು ಬಂದಾಗ ಅವನು ನಿದ್ರಿಸುತ್ತಿದ್ದನೆಂದೂ ರಾಜ ದರ್ಶನ ವಾಗಲಿಲ್ಲವೆಂದೂ ಕ್ಷುಲ್ಲಕವಾದ ಕಾರಣಕ್ಕಾಗಿ, ತನ್ನ ಅಹಂಕಾರಕ್ಕೆ ಪೆಟ್ಟಾಯಿತೆಂದು, ನಿದ್ರಿಸುತ್ತ ನಿಃಸಹಾಯಕನಾದ ನಿಮಿಗೆ ಸಾಯುವಷ್ಟು ಪ್ರಮಾಣದ ಘೋರ ಶಾಪವನ್ನು ಕೊಡುತ್ತಾನೆ'

—ಈ ಆಕ್ಷೇಪವೂ ನಿಮಿಯ ಪೂರ್ವ ವೃತ್ತಾಂತವನ್ನು ಮುಚ್ಚಿಟ್ಟು ಮಾಡಿದ ಆಕ್ಷೇಪ. ಹಿಂದೆ ನಿಮಿ ಒಂದು ದೀರ್ಘಸತ್ರಕ್ಕೆ ವಸಿಷ್ಠರನ್ನು ಋತ್ವಿಜರಾಗಲು ಪ್ರಾರ್ಥಿಸಿದ್ದ. ಆ ಸಮಯದಲ್ಲಿ ದೇವೇಂದ್ರನೂ ಒಂದು ಯಾಗಕ್ಕೆ ಅವರನ್ನು ಕೇಳಿಕೊಂಡಿದ್ದರಿಂದ ಅವರು ನಿಮಿಯ ಪ್ರಾರ್ಥನೆಯನ್ನು ಸ್ವೀಕರಿಸಿದರೂ ಸ್ವಲ್ಪ ಕಾಲ ತಡೆಯಲು ಹೇಳಿದ್ದರು. ಇಂದ್ರನ ಯಾಗ ಆಗಿ ಹೋಗಲಿ. ಬಳಿಕ ನಿನ್ನ ಯಾಗವನ್ನು ನಡೆಸಿ ಕೊಡುವೆನೆಂದಿದ್ದರು. ನಿಮಿ ಅಹಂಕಾರದಿಂದ ಅವರನ್ನು ತೊರೆದು ಗೌತಮರಿಂದ ಯಾಗ ಮಾಡಿಸಿದ. ವಸಿಷ್ಠರು ಹಿಂತಿರುಗಿ ಬಂದು ಎಲ್ಲವನ್ನೂ ತಿಳಿದು ಸಿಟ್ಟಾದರು. ಉಪಾಧ್ಯಾಯ, ವೈದ್ಯ ಇಬ್ಬರೂ ಕಾರ್ಯಾಂತ್ಯದಲ್ಲಿ ನಿರುಪಯುಕ್ತರೆಂಬ ಗಾದೆಯಂತೆ, ತನಗೆ ಬೇಕಾದ ಗುರುಗಳನ್ನು ಹಣಕೊಟ್ಟು ಕೊಂಡುಕೊಳ್ಳುವ, ಬೇಡವಾದವರನ್ನು ಅಲಕ್ಷ್ಯಮಾಡಿ ತ್ಯಜಿಸುವ ಈ ಅಹಂಕಾರ ತಿರಸ್ಕಾರಗಳ ಪ್ರವೃತ್ತಿ ಶಿಷ್ಯನಲ್ಲಿ ಖಂಡನೀಯವಾದುದೆಂದು ಅವನ ಹಿತಕ್ಕಾಗಿಯೆ ಸಿಟ್ಟಾಗಿದ್ದರು, ವಸಿಷ್ಠರು. ಶಿಷ್ಯನ ಉದ್ಧಾರಕ್ಕೆ ಹೊರಟಿರುವ ತಪಸ್ವಿಗಳಾದ ಗುರುಗಳ ವಿಷಯದಲ್ಲಿ ಶಿಷ್ಯನಿಗೆ ಇಂಥ ಯಃಕಶ್ಚಿತತೆ ಅಕ್ಷಮ್ಯವಾದುದು. ಆದ್ದರಿಂದ ಹಿರಿಯರು ಪ್ರೀತಿಯಿಂದಲೆ ಮಕ್ಕಳಿಗೆ ಹೊಡೆಯುವಂತೆ, ಶಾಪ ಕೊಡಲೆಂದು ಬಂದಿದ್ದರು ವಸಿಷ್ಠರು. ಆಗ ನಿಮಿ ಮಲಗಿ ನಿದ್ದೆಹೋಗಿದ್ದ. ಎಚ್ಚರವಿರುತ್ತಿದ್ದರೆ ಆತ ಪಶ್ಚಾತ್ತಾಪದಿಂದ ಮುನಿಯ ಕಾಲಿಗೆ ಬಿದ್ದು ಕ್ಷಮೆ ಬೇಡಲು ಅವಕಾಶವಿದ್ದಿತು.

ಆಲಸ್ಯದಿಂದ, ಸೋಮಾರಿತನದಿಂದ ಆತ ಮಲಗಿದ್ದುದರಿಂದ ವಸಿಷ್ಠರ ಕೋಪ ಹೆಚ್ಚಿತು. ಶಾಪ ಅವನ ಮೇಲೊರಗಿತು. ಇಂಥ ಆಲಸ್ಯ ಸೋಮಾರಿತನ ಒಳ್ಳೆಯದಲ್ಲವೆಂದು ಬೋಧಿಸಲು ರಾಮ ಲಕ್ಷ್ಮಣನಿಗೆ ಈ ಕಥೆಯನ್ನು ಹೇಳಿದ ನೆಂದು ರಾಮಾಯಣ ಹೇಳುತ್ತದೆ. ಆದ್ದರಿಂದ ವಸಿಷ್ಠರು ತಮ್ಮ ಅಹಂಕಾರಕ್ಕೆ ಪೆಟ್ಟಾಯಿತೆಂಬ ಕಾರಣದಿಂದ ನಿಮಿಗೆ ಶಾಪ ಕೊಟ್ಟಿರಲಿಲ್ಲ. ನಿಮಿಯ ಅಹಂಕಾರಕ್ಕೆ ಶಾಸ್ತಿ ಮಾಡಲೆಂದೆ ಶಾಪ ಕೊಟ್ಟಿದ್ದರು ಎಂದು ತಿಳಿಯಬೇಕು.

## ಬ್ರಾಹ್ಮಣರ ಅಲ್ಪತನ ?

'ಶಂಬೂಕ ವಧ ಪ್ರಸಂಗದಲ್ಲಿ ಬ್ರಾಹ್ಮಣ ತನ್ನ ಮಗ ಸತ್ತದ್ದಕ್ಕೆ ಗೋಳಿಡುತ್ತಾನೆ. ತಾನೂ ತನ್ನ ಹೆಂಡತಿಯೂ ಶೋಕದಲ್ಲಿ ಪ್ರಾಣಬಿಡುತ್ತೇವೆ ಎನ್ನುತ್ತಾನೆ. ಆ ಮೇಲೆ ಯೋಚನೆ ಮಾಡಿ ರಾಜನಾದ ರಾಮನ ರಾಜ್ಯಭಾರ ಈ ಅಕಾಲ ಮರಣಕ್ಕೆ ಕಾರಣ ವಾಗಿದೆ. ಆದ್ದರಿಂದ ಇದು ರಾಮನ ದುಷ್ಕೃತ್ಯವೇ ಎಂದು ತೀರ್ಮಾನಿಸಿ, ನಾವು ಹೇಗೂ ದುಃಖದಿಂದ ಸಾಯುತ್ತಿದ್ದೆವು ಈಗ ನಮ್ಮ ಸಾವನ್ನು ರಾಮನ ಕೊರಳಿಗೆ ಕಟ್ಟಿ ಬಿಡೋಣವೆಂದು ಹೀಗೆ ಹೇಳುತ್ತಾನೆ. ರಾಜನೆ, ಸಾವನ್ನಪ್ಪಿರುವ ಬಾಲಕನನ್ನು ಬದುಕಿಸು. ಇಲ್ಲದಿದ್ದರೆ ಈ ರಾಜದ್ವಾರವಲ್ಲಿಯೆ ನನ್ನ ಹೆಂಡತಿಯೊಡನೆ ಪ್ರಾಣ ಬಿಡು ವೆನು. ಬ್ರಹ್ಮಹತ್ಯೆ ನಿನಗೆ ಗಂಟು ಬೀಳುವುದು' ನಿರ್ದೋಷಿಯಾದ ರಾಮನಿಗೆ ಬ್ರಾಹ್ಮಣ ತನ್ನ ಸಾವನ್ನು ಬ್ರಹ್ಮಹತ್ಯೆ ಎಂದು ಅವನ ಕೊರಳಿಗೆ ಕಟ್ಟುತ್ತಿದ್ದಾನೆ. ಈ ಅಲ್ಪತನ ಬ್ರಾಹ್ಮಣತೆಯ ಬೆಲೆಯನ್ನು ಎತ್ತಿ ತೋರಿಸುತ್ತದೆ.'

—ಇದೊಂದು ರಾಮಾಯಣದೊಳಗಿನ ಕತೆಯೊಂದನ್ನು ವಿರೂಪಗೊಳಿ ಸುವ ಯತ್ನ. ವೃದ್ಧ ಬ್ರಾಹ್ಮಣನ ಬಾಲಕನೊಬ್ಬ ಮೃತನಾದನೆಂದರೆ ರಾಮ ರಾಜ್ಯದಲ್ಲಿ ಅದೊಂದು ಅಪರೂಪದ ಶೋಚನೀಯವಾದ ಘಟನೆ ಎಂದು ಭಾವಿಸಲಾಗಿತ್ತು. ಏಕೆಂದರೆ ರಾಮರಾಜ್ಯದಲ್ಲಿ ವೃದ್ಧರು ಬಾಲರಿಗೆ ಉತ್ತರ ಕ್ರಿಯೆ ಮಾಡುವಂಥ ಸಂದರ್ಭವೆ ಬರುತ್ತಿರಲಿಲ್ಲವಂತೆ. (ಯು. 128–99) ಆದ್ದರಿಂದ ಈಗ ಬಾಲಕ ಮರಣವನ್ನಪ್ಪಬೇಕಾದರೆ ಬ್ರಾಹ್ಮಣ ಅಂಥ ಮಹಾ ಪಾಪ ಮಾಡಿರಬೇಕು. ಇಲ್ಲವೆ, ರಾಜನ ಅಪರಾಧವಿರಬೇಕು. ಅಂತೂ ಇದೊಂದು ಸಾಮಾನ್ಯ ಘಟನೆಯಲ್ಲ. ಬ್ರಾಹ್ಮಣನಿಗೆ ತಾನೆಂದೂ ಪಾಪ

ಮಾಡಿದವನಲ್ಲ. ಒಂದು ಸುಳ್ಳು ಹೇಳಿದವನಲ್ಲ, ಒಬ್ಬರಿಗೆ ಹಿಂಸೆ ಮಾಡಿದವನಲ್ಲ ವೆಂಬ ಆತ್ಮವಿಶ್ವಾಸವಿದೆ (ಉ. 73–7) ಹಾಗಾದರೆ ರಾಜನೆ ಅಧರ್ಮ ಮಾಡಿರಬೇಕು ಎಂದು ರಾಮನಲ್ಲಿ ದೂರು ಕೊಡುತ್ತಾನೆ, ತನ್ನ ಮಗನನ್ನು ಬದುಕಿಸದಿದ್ದರೆ ನಾವು ಸಾಯುತ್ತೇನೆ. ನಿನಗೆ ಬ್ರಹ್ಮಹತ್ಯಾಪಾತಕ ಅಂಟು ತ್ತವೆ ಎನ್ನುತ್ತಾನೆ. ತನ್ನಿಂದಾದ ಮಗನ ಸಾವಿನ ಮೂಲಕ ತಂದೆಯ ಸಾವಿಗೂ ರಾಮ ಕಾರಣನಾಗುತ್ತಾನೆ ಎಂಬುದು ಅವನ ವಾದ. ಇದರಲ್ಲಿ ತಪ್ಪೇನೂ ಇಲ್ಲ. ಬ್ರಾಹ್ಮಣ ತನ್ನ ಸಾವನ್ನು ರಾಮನ ಕೊರಳಿಗೆ ತಾನು ಕಟ್ಟುತ್ತಿಲ್ಲ. ರಾಮನ ಕೊರಳಿಗೇ ಬೀಳುತ್ತದೆ ಎಂದು ಎಚ್ಚರಿಸುತ್ತಾನೆ. ಜಾತಿ ಗಲಭೆಗಳಲ್ಲಿ ಜನರು ತಾವೆ ಹೊಡೆದುಕೊಂಡು ಸತ್ತರೆ ಮುಖ್ಯಮಂತ್ರಿಗಳ ಪರಿಹಾರ ನಿಧಿ ಏಕೆ ಹರಿದುಬರುತ್ತದೆ ? ಹಾಗೇ ಏನೂ ತಪ್ಪು ಮಾಡಿರದ ಬ್ರಾಹ್ಮಣ ತನಗಾದ ನಷ್ಟಕ್ಕೆ ರಾಮನಲ್ಲಿ ಪರಿಹಾರ ಕೇಳುವುದು, ಆತ ರಾಜನಾದ್ದರಿಂದ, ಸಹಜ.

## ರಾಮನ ಕಾಲದಲ್ಲಿ ಬ್ರಾಹ್ಮಣ ಧರ್ಮ

'ರಾಮಾಯಣದಲ್ಲಿ ಕಂಡುಬರುವ ಬ್ರಾಹ್ಮಣ ಸಾಮಾನ್ಯರು ರಾಮನು ವನವಾಸ ಹೋಗುವ ಪ್ರಸಂಗದಲ್ಲಿ ನಾಡಿಗೆ ನಾಡೇ ಅಳುತ್ತಿದ್ದಾಗಲೂ ರಾಮನು ಕೊಡುವ ದಾನ ವನ್ನು ಅದೊಂದು ಸಂಭ್ರಮವೋ ಮದುವೆಯೊ ಉತ್ಸವವೋ ಎನ್ನುವಂತೆ ಯಾವ ಎಗ್ಗೂ ಇಲ್ಲದೆ ಯಥೇಚ್ಛವಾಗಿ ದೋಚಿಕೊಳ್ಳುತ್ತಾರೆ. ರಾಮನೆ ಹೇಳುವಂತೆ ಅವರು ಬ್ರಹ್ಮಚಾರಿಗಳು. ವೇದಾಧ್ಯಯನ ಮಾಡುವ ವಟುಗಳು. ಮೃಷ್ಟಾನ್ನ ಭೋಜನವನ್ನು ಪ್ರೀತಿ ಪಡುವವರು. ರಾಮನೆ ತೋರಿಸಿದಂತೆ, ದಂಡವನ್ನು ಬೀಸಿ ಸಾವಿರಾರು ಗೋವು ಗಳನ್ನು ಪಡೆಯುವ ಅಭಿಮಾನ ಶೂನ್ಯ ದುರಾಶೆಯವರು.'

ಇದು ಪಾಶ್ಚಿಮಾತ್ಯರಲ್ಲಿ ಒಂದು ಕಾಲದಲ್ಲಿ ಪ್ರಚಲಿತವಿದ್ದ ಪುರೋಹಿತ ಶಾಹಿಯ ಬಗ್ಗೆ ಓದಿ ಭಾರತೀಯರ ವರ್ಣವ್ಯವಸ್ಥೆಯೂ ಅಂಥದ್ದೇ ಎಂದು ಭ್ರಮಿಸಿ ಆಡುವ ಮಾತು. ಇಂದಿಗೂ ಸತ್ತವರಿಗಾಗಿ ಅಳುತ್ತಿರುವ ಮನೆ ಗಳಲ್ಲಿ ಬ್ರಾಹ್ಮಣರು ದಾನ ತೆಗೆದುಕೊಳ್ಳುವುದು ರೂಢಿ. ಆದರೆ ಸಂಭ್ರಮ ದಿಂದ ತೆಗೆದುಕೊಳ್ಳುವುದಿಲ್ಲ. ಹಾಗೆ ತೆಗೆದುಕೊಂಡರೆ ಹಿಂದಿನ ಕಾಲದಲ್ಲಿ ಅವರು 'ಬ್ರಾಹ್ಮಣ'ರು ಎನಿಸುತ್ತಿರಲಿಲ್ಲ, 'ಬ್ರಹ್ಮಬಂಧು' ಅಂದರೆ ತೋರಿ

ಕೆಗೆ ಮಾತ್ರ ಬ್ರಾಹ್ಮಣ, ಅಂತರಂಗದಲ್ಲಿ ಬ್ರಾಹ್ಮಣ ಅಲ್ಲ ಎನಿಸುತ್ತಿದ್ದರು. ನಿಜವಾದ ಬ್ರಾಹ್ಮಣರು ದಾನ ಮಾಡುವವನಿಗೂ, ಯಾರ ಉದ್ದೇಶದಿಂದ ದಾನ ಮಾಡುವನೊ ಅವನಿಗೂ ಒಳ್ಳೆಯದಾಗಲೆಂದು ಹರಸುತ್ತ ದಾನ ಸ್ವೀಕಾರ ಮಾಡುತ್ತಾರೆ. ರಾಮನಿಂದ ದಾನ ಸ್ವೀಕರಿಸಿದ ಬ್ರಾಹ್ಮಣರೂ ರಾಮನಿಗೆ ಹಾಗೇ ಹರಸಿದ್ದರೆಂದು ರಾಮಾಯಣ ಹೇಳುತ್ತಿದೆ.

ಬ್ರಾಹ್ಮಣರ ಆಶೀರ್ವಾದದಲ್ಲಿ ಶಕ್ತಿಯೂ, ಜನರಲ್ಲಿ ಆ ಬಗ್ಗೆ ನಂಬಿಕೆಯೂ ಇದ್ದ ಕಾಲ ಅದು.

'ಇನ್ನೊಬ್ಬರಿಂದ ದಾನ ಸ್ವೀಕರಿಸದಂಥ ಸ್ವಾಭಿಮಾನ ಕೇವಲ ಕ್ಷತ್ರಿಯ ವೈಶ್ಯ ಮುಂತಾದವರ ಧರ್ಮ, ಹೊರತು, ಬ್ರಾಹ್ಮಣ ಅಂಥ ಅಭಿಮಾನ ಇಟ್ಟುಕೊಳ್ಳಕೂಡದು, ಅವನು ಭಿಕ್ಷೆ ಬೇಡಿಯೆ ಬದುಕಬೇಕು, ದಾನ ಸ್ವೀಕರಿಸಿದರೆ ಅಭಿಮಾನಕ್ಕೆ ಧಕ್ಕೆ ಎಂದು ತಿಳಿಯಬಾರದು' ಎನ್ನುವ ಕಾಲ ಅದು.

ಏಕೆಂದರೆ ಬ್ರಾಹ್ಮಣರ ಧರ್ಮ ವೇದಾಧ್ಯಯನ, ಉಪದೇಶಗಳ ಜ್ಞಾನ ಕಾರ್ಯ ಹೊರತು ಅವರು ಬೇರೇನೂ ಕಾರ್ಯ ಮಾಡಲಾಗದು. ಇದನ್ನು ರಾಮನೆ ಹೇಳುತ್ತಾನೆ, 'ನಿತ್ಯ ವೇದಾಧ್ಯಯನದಲ್ಲಿಯೆ ನಿರತರಾದ್ದರಿಂದ ಹಣ ಸಂಪಾದನೆಗಾಗಿ ಏನೂ ಉದ್ಯೋಗ ಮಾಡುವುದಿಲ್ಲ. ಆದ್ದರಿಂದ ಉದ್ಯೋಗದ ವಿಷಯದಲ್ಲಿ ಸೋಮಾರಿಗಳಾಗಿರುವವರು. ಆದರೂ ರುಚಿ ಕರವಾದ ಅನ್ನ ಉಣಲು ಬಯಸುತ್ತಾರೆ.' (ಅಯೋ. 32–19) ಇಲ್ಲಿ ಸೋಮಾರಿಗಳೆಂದರೆ ಯಾವ ಕೆಲಸವನ್ನೂ ಮಾಡದವರಲ್ಲ. ನಿತ್ಯ ವೇದಾಧ್ಯ ಯನ ಮಾಡುವವರಾದ್ದರಿಂದ, ಹಣ ಸಂಪಾದನೆಯ ಉದ್ಯೋಗ ಮಾಡುವು ದಿಲ್ಲ ಎಂದು ಅರ್ಥ ಹೇಳಬೇಕು. ಇಂಥ ಬ್ರಾಹ್ಮಣರು ಎಂದಾದರೊಮ್ಮೆ ರುಚಿಕರವಾದ ಅನ್ನ ಬಯಸಿದಾಗ ರಾಜನನ್ನು ಆಶ್ರಯಿಸುವುದು ಸಹಜ. ಇದನ್ನು ಸೋಮಾರಿತನ ಅಭಿಮಾನ ಶೂನ್ಯತೆ ಎಂದರೆ ತಪ್ಪಾಗುತ್ತದೆ.

ಇದು ನಿಜವಾಗಿ ಆದರ್ಶ ವಿದ್ಯಾರ್ಥಿ ಜೀವನ. ಇಂದಿನ ವಿದ್ಯಾರ್ಥಿ ಗಳು ಓದನ್ನು ಬಿಟ್ಟು ಇನ್ನೆಲ್ಲವನ್ನೂ ಮಾಡಿ ಸಮಾಜದಲ್ಲಿ ಅಶಾಂತಿಗೆ ಕಾರಣ ರಾಗುತ್ತಿದ್ದರೆ ಹಿಂದಿನ ಕಾಲದ, ರಾಮಾಯಣ ಕಾಲದ ವಟುಗಳು ಓದನ್ನು ಉಳಿದು ಬೇರೆ ಯಾವ ಕೆಲಸದಲ್ಲೂ ಸೋಮಾರಿಗಳಾಗಿದ್ದರು.

ರಾಮಾಯಣವು ಕೀರ್ತಿಸುವುದು ವಿದ್ಯಾರ್ಥಿ ಜೀವನದ ಈ ಪರಮ ಪಾವಿತ್ರ್ಯವನ್ನು. ಇಂಥ ವಿದ್ಯಾರ್ಥಿಗಳಿಗೆ ಸರಕಾರ ಎಲ್ಲ ವಿಧದ ಆಶ್ರಯ ಪ್ರೋತ್ಸಾಹ ನೀಡಬೇಕು. ರಾಮ ಆ ಕೆಲಸ ಮಾಡಿದ.

ಸ್ವಕರ್ಮವಾದ ಇಂಥ ವೇದಾಧ್ಯಯನ ಬಿಟ್ಟು ಬ್ರಾಹ್ಮಣರು ಕಂಡ ಕಂಡಲ್ಲಿ ದಾನಧರ್ಮಗಳಿಗಾಗಿ ಕೈಯೊಡ್ಡುತ್ತ ಅಲೆಯತೊಡಗಿದರೆ ಮಾತ್ರ ಸಮಾಜಕ್ಕೆ ಅನಿಷ್ಟರೆಂದು ಪರಿಗಣಿಸಲ್ಪಡುತ್ತಿದ್ದರು. ಸ್ವಕರ್ಮನಿಷ್ಠರಾದರೆ ಅಂಥವರು ಊರಲ್ಲಿ ಇರುವುದೆ ಭಾಗ್ಯವೆಂದು ಜನ ತಿಳಿಯುತ್ತಿದ್ದರು. ವಸ್ತುತಃ ಅವರು ಋಷ್ಯಶೃಂಗನಂತೆ ಊರಿಗೆ ಸುಖಸಮೃದ್ಧಿ ತಂದುಕೊಡುತ್ತ ರಾಜಮನ್ನಣೆಗೆ, ಏಕೆ, ರಾಜಕುಮಾರಿಯರ ಕೈಹಿಡಿಯುವುದಕ್ಕೂ ಪಾತ್ರರಾಗುತ್ತಿದ್ದರು. ಅಭಿಮಾನಶೂನ್ಯ ದುರಾಸೆಯವರೆಂದು ಕರೆಯಲ್ಪಡುತ್ತಿದ್ದಿಲ್ಲ.

ಸಂಬಳಕ್ಕಾಗಿ ವಿದ್ಯೆ ಕಲಿಸುವ ಇಂದಿನ ಪ್ರವೃತ್ತಿಯನ್ನು ಹಿಂದೆ ವೇದ ವಿಕ್ರಯ. ಜ್ಞಾನದ ಮಾರಾಟವೆಂದು ಜರಿಯುತ್ತಿದ್ದರು. ಅಭಿಮಾನಪಟ್ಟುಕೊಳ್ಳುತ್ತಿದ್ದಿಲ್ಲ.

ರಾಮ ದಾನ ಮಾಡುವಾಗ ಬ್ರಾಹ್ಮಣರು ಕಿಕ್ಕಿರಿದು ಬಂದರೆನ್ನುವುದೂ ಸುಳ್ಳು. ಬ್ರಾಹ್ಮಣರನ್ನು ಆಹ್ವಾನಿಸಿ ದಾನ ಮಾಡೆಂದು ರಾಮ ಲಕ್ಷ್ಮಣನಿಗೆ ಹೇಳುತ್ತಾನೆ (ಅಯೋ. 32–13)

ದಂಡವನ್ನು ಬೀಸಿ ಸಾವಿರಾರು ಗೋವುಗಳನ್ನು ಪಡೆದ ಬ್ರಾಹ್ಮಣ ಹಾಗೆ ಏಕೆ ಮಾಡಿದನೆಂಬುದನ್ನು ಹಿಂದೆಯೆ ನೋಡಿದ್ದೇವೆ.

## ಋಚೀಕರ ಕಟುಕತನ ?

'ಅಂಬರೀಷನು ಯಜ್ಞಪಶುವಾಗಿ ಬಲಿಗೊಳ್ಳಲು ನರನೊಬ್ಬನನ್ನು ಹುಡುಕುತ್ತಿರಲು ಋಚೀಕನೆಂಬ ಬ್ರಹ್ಮರ್ಷಿಯು ತನ್ನ ಮಗನಾದ ಶುನಃಶೇಫನನ್ನು ಒಂದು ಲಕ್ಷ ಗೋವುಗಳ ಪ್ರಲೋಭಕ್ಕೆ ಬಲಿ ಕೊಡುತ್ತಾನೆ, ಮಾರುತ್ತಾನೆ.'

—ಈ ಆಕ್ಷೇಪವನ್ನು ಬ್ರಹ್ಮರ್ಷಿಗಳ ಮೇಲೆ ಮಾತ್ರ ಮಾಡಲು ಕಾರಣ ವಿಲ್ಲ. ಕ್ಷತ್ರಿಯರೂ ಅನೇಕ ಮಂದಿ ಇಂಥ ವಿಚಿತ್ರ ಪ್ರವೃತ್ತಿ ಮಾಡಿದ್ದುಂಟು. ಉದಾ : ಹರಿಶ್ಚಂದ್ರ ಹೆಂಡತಿ ಮಕ್ಕಳನ್ನು ಮಾರಿದ, ರುಕ್ಮಾಂಗದ

ಮಗನ ಶಿರಶ್ಛೇದ ಮಾಡಿದ, ಧರ್ಮರಾಜ ತಮ್ಮಂದಿರನ್ನೂ ಹೆಂಡತಿಯನ್ನೂ ಜೂಜಿನಲ್ಲಿ ಪಣವಾಗಿಟ್ಟು ಸೋತು ಪರರಿಗೊಪ್ಪಿಸಿದ. ದಶರಥ ರಾಮನನ್ನು ಕಾಡಿಗಟ್ಟಿದ...ಇತ್ಯಾದಿ. ಇಂಥ ನಡವಳಿಕೆ ಪ್ರಾಚೀನ ಕಾಲದಲ್ಲಿ ಸಾಮಾನ್ಯವೆ ಆಗಿತ್ತು. ರಾಮ ಭರತನಿಗೆ ಹೇಳುತ್ತಾನೆ 'ಹಿರಿಯರಿಗೆ ತಮ್ಮ ಪ್ರೀತಿಯ ಹೆಂಡಿರು ಮಕ್ಕಳ ವಿಷಯದಲ್ಲಿ ಯಾವ ರೀತಿಯ ವ್ಯವಹಾರಕ್ಕೂ ಅಧಿಕಾರ ಉಂಟು' (ಅಯೋ. 104 18)

ಋಚೀಕನ ವಿಷಯದಲ್ಲಿ ಲೋಭದ ಆರೋಪವೂ ಸರಿಯಲ್ಲ. ಹರಿಶ್ಚಂದ್ರ ಸತ್ಯಕ್ಕಾಗಿ ಹೆಂಡತಿ ಮಕ್ಕಳನ್ನು ಮಾರಿದಂತೆ, ರುಕ್ಮಾಂಗದ ಧರ್ಮಕ್ಕಾಗಿ ಮಗನ ಶಿರಶ್ಛೇದ ಮಾಡಿದಂತೆ, ಧರ್ಮರಾಜ ತನ್ನ ಪ್ರತಿಜ್ಞೆಯ ಪಾಲನೆ ಗಾಗಿ ಹೆಂಡತಿ ಮತ್ತು ತಮ್ಮಂದಿರನ್ನು ಪಣವಾಗಿಟ್ಟಂತೆ, ದಶರಥ ಕೊಟ್ಟ ಮಾತನ್ನು ನಡೆಸುವುದಕ್ಕಾಗಿ ಮಗನನ್ನು ಕಾಡಿಗಟ್ಟಿದಂತೆ, ಋಚೀಕ ಅಂಬ ರೀಷನ ಯಜ್ಞಪೂರ್ತಿಗಾಗಿ ಮಗನನ್ನು ಬಲಿ ಕೊಟ್ಟ. ಸೋಮಲತೆಯನ್ನು ಕ್ರಯ ಕೊಟ್ಟು ಕೊಳ್ಳುವಂತೆ ಪಶುವೆನಿಸಿದ ಬಾಲಕನನ್ನೂ ಅಂಬರೀಷ ಲಕ್ಷ ಗೋವುಗಳಿಗೆ ಕೊಂಡುಕೊಂಡ. ಇದು ಲೋಕ ಕ್ಷೇಮಕಾರಕವಾದ ಪವಿತ್ರ ಯಾಗದ ವಿಧಿವಿಧಾನಗಳಲ್ಲಿ ಒಂದೆಂದು ಋಚೀಕಮುನಿ ಬಾಲಕನನ್ನು ಮಾರಿದನೆ ಹೊರತು ಆ ಗೋವುಗಳ ಲೋಭದಿಂದಲ್ಲ. 'ತಪಸಾ ದೀಪ್ತ'ನಾದ ಮುನಿ ಯನ್ನು ಅಂಬರೀಷ ಕಂಡನಂತೆ! ಇಂಥ ತಪೋದೀಪ್ತಿ ಉಳ್ಳವನಲ್ಲಿ ಲೋಭ ವನ್ನು ನಾವು ಆರೋಪಿಸಲಾರೆವು.

ಶುನಃಶೇಫನೂ ಆನಂದದಿಂದ ಈ ಮಾರಾಟವನ್ನು ಒಪ್ಪಿದ್ದರಿಂದಲೂ ಮುನಿಗೆ ಲೋಭವಿರಲಿಲ್ಲ ಎನ್ನುವುದು ಸ್ಪಷ್ಟ.

ಹೀಗೆ ಭಾರತೀಯ ಸಂಸ್ಕೃತಿಯ ಪರಮಮೌಲ್ಯ ಧರ್ಮ ದಯೆ ಸಹಾನು ಭೂತಿ ಪ್ರೀತಿ ಮಾನವೀಯತೆಗಳೆ ಹೊರತು ಅಧರ್ಮ ಹಿಂಸೆ ಕ್ರೌರ್ಯ ಲೋಭ ಬರ್ಬರತೆಗಳು ಸರ್ವಥಾ ಅಲ್ಲವೆನ್ನುವುದು ರಾಮಾಯಣದ ಪ್ರಾಮಾ ಣಿಕ ಓದುಗನಿಗೆ ಅರಿವಾಗದಿರದು. ನಮ್ಮ ಸಂಸ್ಕೃತಿಯ ಈ ಪರಮ ಮೌಲ್ಯ ಗಳಿಗೆಲ್ಲ ಆದರ್ಶಭೂತನಾದವ ಮರ್ಯಾದಾ ಪುರುಷೋತ್ತಮ ಶ್ರೀ ರಾಮ ಚಂದ್ರ.

# ಸೀತೆ ಪರಮ ಪುನೀತೆ

ಸೀತೆ ಶ್ರೀರಾಮನಿಗೆ ಅನುರೂಪಳಾದ ಹೆಂಡತಿ. ಪಂಚಪತಿವ್ರತೆಯರ ಸಾಲಿನಲ್ಲಿ ಪ್ರಾತಃ ಸ್ಮರಣೀಯಳಾದವಳು. ಪತಿಪ್ರೇಮದ ಆದರ್ಶವನ್ನು ಅವಳಲ್ಲಿ ವಾಲ್ಮೀಕಿ ವರ್ಣಿಸಿದ ಪರಿ ಅನನ್ಯಾದೃಶವಾದುದು, ನಿಃಸಂದಿಗ್ಧ ವಾದುದು.

'ಮಾಯಾ ಜಿಂಕೆಯ ಪ್ರಸಂಗದಲ್ಲಿ ಸೀತೆ 'ಹಾ ಸೀತೆ ಹಾ ಲಕ್ಷ್ಮಣ' ಎಂಬ ಕೂಗನ್ನು ಕೇಳಿ ಲಕ್ಷ್ಮಣನನ್ನು ರಾಮನ ರಕ್ಷೆಗೆ ಹೋಗೆಂದು ಹೇಳಿದಾಗ ಅವನು ಹಾಗೆಯೆ ನಿಂತಿರುವುದನ್ನು ಕಂಡು ಕ್ರುದ್ಧಳಾಗಿ ಲಕ್ಷ್ಮಣನನ್ನು ಹೀನಾಯವಾಗಿ ಬೈಯ್ಯುತ್ತ ಪದೇ ಪದೇ ಈ ಮಾತುಗಳನ್ನಾಡುತ್ತಾಳೆ, 'ನೀನು ನನಗೋಸ್ಕರ ಹೀಗೆ ಮಾಡುತ್ತಿ, ನನ್ನ ಮೇಲೆ ನಿನಗೆ ಆಶೆ ಇದೆ. ನನಗಾಗಿಯೆ ನೀನು ರಾಮನ ಜೊತೆಗೆ ಕಾಡಿಗೆ ಬಂದಿದ್ದೀಯೆ. ರಾಮನು ಸಾಯಲೆಂದೆ ನಿನ್ನ ಇಚ್ಛೆ....' ಲಕ್ಷ್ಮಣನ ಇಂಗಿತದಲ್ಲಿ ತಾನು ತನ್ನ ಹೆಂಡತಿ ಊರ್ಮಿಳೆಯನ್ನು ಬಿಟ್ಟು ರಾಮನೊಡನೆ ಕಾಡಿಗೆ ಬಂದಿರುವುದರಲ್ಲಿ ಸೀತೆಯ ಆಕರ್ಷಣೆ ಇದ್ದಿರಬಹುದು. ಆದರೆ ಆ ಮಾತನ್ನು ಸೀತೆ ಒತ್ತಿ ಒತ್ತಿ ತಿರುತಿರುಗಿ ಹೇಳುವುದರಲ್ಲಿ ತನ್ನ ಇಂಗಿತವನ್ನೂ ಹೊರಗೆಡಹುತ್ತಾಳೆ. ಅಯೋಗ್ಯ ನಿಷ್ಕರುಣೆ ಘಾತಕಿ ಎಂದು ಬಯ್ಯು ವುದರಲ್ಲಿ ತನ್ನನ್ನೂ ಆ ಮೂಲಕ ಬಯ್ದುಕೊಳ್ಳುತ್ತಾಳೆ.'

—ಈ ಮಾತು ರಾಮಾಯಣದ ಸಹೃದಯ ಓದುಗ ಹೇಳುವಂಥಹುದಲ್ಲ. ಏಕೆಂದರೆ ತನ್ನ ಸರ್ವಸ್ವವಾದ ರಾಮನ ಪ್ರಾಣಾಪಾಯಶಂಕೆಯಲ್ಲಿ ಭಯದಿಂದ ಸೀತೆ ಲಕ್ಷ್ಮಣನಿಗೆ ಹೇಳಿದವು ಮೇಲಿನ ಮಾತುಗಳು. ಲಕ್ಷ್ಮಣನ ಮೇಲೆ ಕೋಪದಿಂದ ಆಡಿದ ಮಾತುಗಳು. ಅಂತರಂಗದಿಂದ ಮೂಡಿಬಂದವುಗಳಲ್ಲ. ಅಂಥ ಮಾತುಗಳಿಂದ ವ್ಯಕ್ತಿಯ ಸ್ವಭಾವವನ್ನು ಅಳೆಯಲು ಹೊರಡುವುದು ಸರಿಯಲ್ಲ. 'ಕೋಪಗೊಂಡವರು ಯಾರು ತಾನೆ ಪಾಪ ಕಾರ್ಯ ಮಾಡುವುದಿಲ್ಲ ? ಕೋಪಗೊಂಡವ ಗುರುಹಿರಿಯರನ್ನೂ ಕೊಲ್ಲಲು ಹಿಂಜರಿಯುವುದಿಲ್ಲ, ಸಜ್ಜನರನ್ನೂ ಕೆಟ್ಟ ಮಾತುಗಳಿಂದ ಆಕ್ಷೇಪಿಸುತ್ತಾನೆ' (ಸುಂ, 55-4) ಲಕ್ಷ್ಮಣನಂಥ ಸಜ್ಜನನನ್ನು ಸೀತೆ ಕೋಪದಿಂದ ಕೆಟ್ಟ ಮಾತಾಡಿ ಬೈದುದು ಇದಕ್ಕೆ ಸಾಕ್ಷಿ. ಲಕ್ಷ್ಮಣ ಆ ಮಾತುಗಳನ್ನು ಕೇಳಿ ಸಹಿಸಲಾರದೆ

ಆಶ್ರಮವನ್ನು ಬಿಟ್ಟು ಬಂದನೆಂದು ಅವನಿಂದಲೆ ಕೇಳಿ ತಿಳಿದಾಗ ರಾಮ ಹೇಳಿದ, 'ಲಕ್ಷ್ಮಣ, ನೀನು ಮಾಡಿದ ಕೆಲಸ ಸರಿಯಲ್ಲ, ಸೀತೆ ಹೆಣ್ಣು. ಕೋಪದಿಂದ ಕೆಟ್ಟ ಮಾತಾಡಿದಳೆಂದು ಅವಳನ್ನು ಬಿಟ್ಟು ನೀನು ಈ ಕಡೆ ಬರಬಹುದೆ ?' (ಅರ. 59-23)

'ಲಕ್ಷ್ಮಣನ ಇಂಗಿತದಲ್ಲಿ ತನ್ನ ಹೆಂಡತಿಯನ್ನು ಬಿಟ್ಟು ಒಬ್ಬನೆ ರಾಮನನ್ನು ಹಿಂಬಾಲಿಸಿದುದರಲ್ಲಿ ಸೀತೆಯ ಆಕರ್ಷಣೆ ಇದ್ದಿರಬಹುದೆ'ಂಬ ಊಹೆಯೂ ತಪ್ಪು. ರಾಮನ ಜೊತೆಗೆ ಸೀತೆ ತಾನೂ ಬರುತ್ತೇನೆನ್ನುತ. ವಾದಿಸಿ ರಾಮನನ್ನು ಅದಕ್ಕೆ ಒಪ್ಪಿಸಲು ಪಟ್ಟ ಶ್ರಮ ಎಷ್ಟು ಎನ್ನುವುದು ರಾಮಾಯಣದಲ್ಲಿ ಸ್ಪಷ್ಟವಿದೆ. ಕೊನೆಗೂ ರಾಮನನ್ನು ಒಪ್ಪಿಸುವಲ್ಲಿ ಸೀತೆ ಯಶಸ್ವಿಯಾದಳು, ಕಾಡಿಗೆ ಹೊರಟು ನಿಂತಳು. ಆದರೆ ಇದಕ್ಕೆ ಮೊದಲೆ ಲಕ್ಷ್ಮಣ ಕಾಡಿಗೆ ಹೊರಟು ನಿಂತು ಅದಕ್ಕೆ ರಾಮನಿಂದ ಅನುಮತಿ ಪಡೆದಾಗಿತ್ತು. ಸೀತೆ ಬರುವುದು ನಿಶ್ಚಿತವಾದ ಬಳಿಕ ರಾಮ ಲಕ್ಷ್ಮಣನನ್ನು 'ನೀನಿಲ್ಲೆ ನಿಲ್ಲು, ನನ್ನೊಡನೆ ಬರಬೇಡ ಅನ್ನುತ್ತಾನೆ, ಆಗ ಲಕ್ಷ್ಮಣ ಕೇಳುತ್ತಾನೆ, 'ಮೊದಲೆ ನನಗೆ ಅನುಮತಿ ಕೊಟ್ಟಿದ್ದು ಈಗ ಏಕೆ ನಿರಾಕರಿಸುತ್ತಿ?' (ಅಯೋ. 31-7)

ರಾಮನು ಸೀತೆಯನ್ನು 'ನೀನು ಬರಬೇಡ' ಎನ್ನುವಾಗ 'ನೀನು ಇಲ್ಲಿಯೆ ಇದ್ದು ನನ್ನ ಪ್ರಾಣಪ್ರಿಯರಾದ ಭರತ ಶತ್ರುಘ್ನರನ್ನು ಸೋದರರಂತೆ ಅಥವಾ ಮಕ್ಕಳಂತೆ ನೋಡಿಕೊಳ್ಳು' ಎಂದು ಉಪದೇಶಿಸುತ್ತಾನೆ (ಅಯೋ. 26-33) ಇಲ್ಲಿ ಭರತ ಶತ್ರುಘ್ನರನ್ನು ಮಾತ್ರ ಸೀತೆ ನೋಡಿಕೊಳ್ಳಬೇಕೆಂದರೆ ಲಕ್ಷ್ಮಣ ತನ್ನೊಡನೆ ಕಾಡಿಗೆ ಬರುವನೆಂಬುದು ರಾಮನ ಅಭಿಪ್ರಾಯ. ಆದ್ದರಿಂದ ಲಕ್ಷ್ಮಣ ಸೀತೆ ಹೊರಡುವುದಕ್ಕಿಂತ ಮೊದಲೆ, ತಾನು ವನಕ್ಕೆ ಹೋಗುವವನೆ ಎಂದು ನಿರ್ಧಾರ ಮಾಡಿಕೊಂಡು, ರಾಮನಿಂದ ಅನುಮತಿ ಪಡೆದವನು. ಸೀತೆಯ ಆಕರ್ಷಣೆಯಿಂದಾಗಿ ಆತ ಕಾಡಿಗೆ ಹೊರಡಲಿಲ್ಲ ಎನ್ನುವುದು ಸ್ಪಷ್ಟವಿದೆ.

ಸೀತೆಯ ಇಂಗಿತದಲ್ಲಿಯೂ ಲಕ್ಷ್ಮಣನ ಆಕರ್ಷಣೆ ಇತ್ತೆನ್ನಲು ಕಾರಣವಿಲ್ಲ. 'ನೀನು ನನಗೋಸ್ಕರ ಬಂದಿರುವಿ' ಎಂದು ಲಕ್ಷ್ಮಣನನ್ನು ತಿರು

ತಿರುಗಿ ಹೇಳುತ್ತಿದ್ದರೂ, ಜೊತೆಗೆ 'ನೀನು ಸ್ವತಃ ಬಂದಿರಬಹುದು ಅಥವಾ ಭರತ ನಿನ್ನನ್ನು ಕಳಿಸಿದ್ದಿರಲೂ ಬಹುದು' (ಅರ. 45-24) ಎಂದು ಹೇಳುವುದನ್ನು ಗಮನಿಸಬೇಕು. ಲಕ್ಷ್ಮಣನ ಬಗ್ಗೆ ಪ್ರೇಮವಿರುತ್ತಿದ್ದರೆ 'ನೀನು ನನ್ನನ್ನು ಬಯಸುತ್ತಿ' ಎಂದೇ ಪದೇ ಪದೇ ಹೇಳಬೇಕಿತ್ತು. ಭರತನನ್ನು ಸೇರಿಸಿ ಇಬ್ಬರ ಮೇಲೂ ಆರೋಪ ಹೊರಿಸಬೇಕಾದರೆ ಇದು ಕೇವಲ ಭಯವೆ ಹೊರತು ಗೂಢ ಪ್ರೇಮವಲ್ಲವೆನ್ನುವುದು ಸ್ಪಷ್ಟ.

ಲಕ್ಷ್ಮಣ ಸೀತೆಯ ಆಕರ್ಷಣೆಯಿಂದಲೆ ರಾಮನನ್ನು ಕಾಡಿನಲ್ಲಿ ಹಿಂಬಾಲಿಸಲು ಹೊರಟಿದ್ದರೆ ಅವನನ್ನು ಊರ್ಮಿಳೆ ಬಿಡುತ್ತಿರಲಿಲ್ಲ, ರಾಮನ ಜೊತೆಗೆ ಬರಲು ಸೀತೆ ಪಟ್ಟು ಹಿಡಿದಂತೆ, ಲಕ್ಷ್ಮಣನ ಜೊತೆಗೆ ಬರಲು ಊರ್ಮಿಳೆಯೂ ಹಟ ಮಾಡುತ್ತಿದ್ದಳು. ಲಕ್ಷ್ಮಣನ ಇಂಗಿತ ಊರ್ಮಿಳೆಗೆ ತಿಳಿದಿರಲಿಲ್ಲ ಎನ್ನುವುದು ಸಾಹಸದ ಮಾತು.

ಸೀತೆ ಲಕ್ಷ್ಮಣನನ್ನು ಬಯ್ಯುವುದರಲ್ಲಿ ತನ್ನ ಇಂಗಿತವನ್ನು ಹೊರಗೆಡಹುತ್ತಾಳೆ ಎಂದೂ, ಲಕ್ಷ್ಮಣನೂ ಸೀತೆಯಲ್ಲಿ ಆಕರ್ಷಿತನಾಗಿದ್ದನೆಂದೂ ಹೇಳುವ ಪಕ್ಷದಲ್ಲಿ ಸೀತೆಯ ಕೋಪದ ಮಾತುಗಳನ್ನು ಕೇಳುತ್ತ ಲಕ್ಷ್ಮಣ ಗುಪ್ತವಾಗಿ ಆನಂದಿಸುತ್ತ ಅಲ್ಲಿಯೆ ಕುಳಿತಿರಬೇಕಾಗಿತ್ತು.

ಸೀತಾ ಲಕ್ಷ್ಮಣರಿಬ್ಬರೂ ತಮ್ಮ ಪತಿ ಪತ್ನಿಯರನ್ನು ಬಿಟ್ಟು ಪರಸ್ಪರ ಬಯಸಿ ನಿರಾಸೆಯಿಂದ ಕೊರಗುತ್ತಾರೆ ಎಂದೂ, ಇದು ಹೃದಯವಿದ್ರಾವಕವಾದ ಮಾನವೀಯತೆಯೆಂದೂ ಹೇಳುವುದು ವಾಲ್ಮೀಕಿಯಂಥ ತಪಸ್ವಿಗೆ ಒಪ್ಪಿಗೆಯಾಗದು. ಅವನ ದೃಷ್ಟಿಯಲ್ಲಿ ಇದು ಮಾನವೀಯತೆ ಅಲ್ಲ, ದಾನವೀಯತೆ, ರಾಕ್ಷಸೀಯತೆ, ಕಚ ದೇವಯಾನಿಯರ ಅರ್ಜುನ ಉತ್ತರೆಯರ ಪ್ರೀತಿಯಂತಲ್ಲ. ಅವರು ಮದುವೆಯಾಗದಿದ್ದವರು. ಮದುವೆಯಾದ ಹೆಂಗಸು ಪರಪುರುಷರನ್ನು ಬಯಸಿದರೆ ಅದು ಪ್ರೀತಿಯಾಗುವುದಿಲ್ಲ, ವ್ಯಭಿಚಾರವಾಗುತ್ತದೆ.

# ರಾವಣ ಸನ್ಯಾಸಿ

'ರಾವಣನು ಸನ್ಯಾಸಿ ವೇಷದಲ್ಲಿ ಸೀತೆಯನ್ನು ಕಂಡು ಲೈಂಗಿಕವಾಗಿ ಅವಳ ಅಂಗಾಂಗ ವರ್ಣನೆ ಮಾಡುತ್ತಿರಲು ಸೀತೆ ಆ ಮಾನಸಿಕ ಲೈಂಗಿಕ ದುರಾಕ್ರಮಣವನ್ನು ಗುಪ್ತವಾಗಿ ಆನಂದಿಸುತ್ತಾಳೆ. ಅದನ್ನು ಆಲಿಸುವಷ್ಟು ವ್ಯವಧಾನ ಉಳ್ಳವಳಾಗುತ್ತಾಳೆ. ಅನು ಮೋದಿಸುವಂತೆ ಆನಂದಿಸುವಂತೆ ಅವಳ ದೇಹ ಭಾಗಗಳು ಲೈಂಗಿಕವಾಗಿ ಸ್ಪಂದಿಸುತ್ತವೆ. ಸ್ತನಗಳು ಉದ್ರಿಕ್ತವಾಗುತ್ತವೆ. ಅಲುಗುತ್ತವೆ. ಮೇಲ್ಮುಖವಾಗಿ ನಿಮಿರುತ್ತವೆ, ಆಕೆ ಚಾರುಸ್ಮಿತಳಾಗುತ್ತಾಳೆ. ನಸುನಗುವ ಹಲ್ಲಿನ ಸೌಂದರ್ಯವನ್ನು ರಾವಣನ ಸವಿಯುವ ಕಣ್ಣುಗಳಿಗೆ ಅಪ್ರಯತ್ನವಾಗಿ ನೀಡುತ್ತಾಳೆ. ಲಕ್ಷ್ಮಣ ತನ್ನ ಬಗ್ಗೆ ಲೈಂಗಿಕ ಯೋಚನೆ ಮಾಡಿದ್ದಾನೆಂದು ಊಹಿಸಿ ಕೆಂಡ ಕಾರಿದವಳು ರಾವಣಸನ್ಯಾಸಿಯನ್ನು ತಡೆಯುವುದಾಗಲಿ ತನ್ನ ದೇಹ ಭಾಗವನ್ನು ಮುಚ್ಚಿಕೊಳ್ಳುವುದಾಗಲಿ ಮಾಡುವುದಿಲ್ಲ. ಮುಂದೆ ಅಶೋಕವನದಲ್ಲಿ ರಾವಣನನ್ನು ಕಂಡೊಡನೆ ತನ್ನ ಉದರಸ್ತನಗಳನ್ನು ಕಾಣದಂತೆ ಬಾಗಿ ಕುಳಿತುಕೊಳ್ಳುತ್ತಾಳೆ. ರಾವಣ ಬ್ರಾಹ್ಮಣ ವೇಷದಿಂದ ಬಂದುದರಿಂದ ಬ್ರಾಹ್ಮಣನಾದುದರಿಂದಲೆ ಕಾಮಿಸಲು ಯೋಗ್ಯನಾಗುತ್ತಾನೆ. ರಾವಣನನ್ನು ಒಲ್ಲೆನೆನ್ನಲೂ ಪ್ರಬಲ ಕಾರಣ ಅವನು ರಾಮನಂತೆ ಆರ್ಯನಲ್ಲ, ರಾಕ್ಷಸ ಎನ್ನುವ ಆರ್ಯ ದ್ರಾವಿಡ ಭೇದವೆ ಕಾರಣವಿರುವಂತೆ ಕಾಣುತ್ತದೆ.'

—ಈ ಎಲ್ಲ ಊಹೆಗಳು ತಪ್ಪೆಂದು ವಾಲ್ಮೀಕಿಯೆ ಸ್ಪಷ್ಟವಾಗಿ 'ಕಾಮವಿಲ್ಲದ ಸೀತೆಯನ್ನು ಕಾಮಾರ್ತನಾದ ರಾವಣ ಹಿಡಿದೆಳೆದ (ಅರ. 49-22) ಎಂಬಲ್ಲಿಯೆ ಹೇಳುತ್ತಾನೆ.

'ಕಾವ್ಯವನ್ನು ನಂಬಿ, ಕವಿಯನ್ನಲ್ಲ'

ಎಂದರೂ ಸೀತೆಯೆ ಬಾರಿ ಬಾರಿಗೆ ನಾನು ರಾಮನನ್ನೆ ಹಿಂಬಾಲಿಸುವವಳು (ಅರ. 47–33) ಎನ್ನುತ್ತಾಳಲ್ಲವೆ ? ರಾವಣಸನ್ಯಾಸಿಯನ್ನು ರಾಕ್ಷಸನೆಂದು ತಿಳಿಯುವ ಮೊದಲಿಗೂ ಅವನಿಗೆ ಅವಳೆ ಹೇಳುವಂತೆ ವಿಶಾಲಾಕ್ಷ ಮಹಾ ಬಾಹು ರಾಮನ ಪ್ರಿಯ ಮಹಿಷಿ ತಾನಾಗಿದ್ದಳಲ್ಲವೆ ?

ರಾವಣ ಸೀತೆಯ ಅಂಗಾಂಗ ವರ್ಣನೆ ಮಾಡುತ್ತಿರಲು ಸೀತೆ ತಡೆಯಲಿಲ್ಲ, ನಿಜ. ಪ್ರಾಚೀನರಲ್ಲಿ ಅಪರಿಚಿತ ಸ್ತ್ರೀ ಪುರುಷರ ಭೆಟ್ಟಿಯಲ್ಲಿ ಇದು ಸಾಮಾನ್ಯವೆ

ಆಗಿತ್ತು, ಉದಾ : ಹನುಮಂತ ರಾಮ ಲಕ್ಷ್ಮಣರನ್ನು ಮೊದಲ ಭೆಟ್ಟಿಯಲ್ಲಿ 'ನೀವಾರು ?' ಎಂದು ಪ್ರಶ್ನಿಸುವಾಗ ಅವರ ಭುಜ ಎದೆ ಹೆಗಲು ಕಣ್ಣು ಮುಂತಾದ ಎಲ್ಲ ಅವಯವಗಳನ್ನು ವರ್ಣಿಸಿ ರೂಪ ಸಂಪನ್ನರಾದ ನೀವಾರು ಎನ್ನುತ್ತಾನೆ. ಮಿಥಿಲೆಗೆ ಬಂದ ರಾಮಲಕ್ಷ್ಮಣರನ್ನು ಜನಕ ಮಹಾರಾಜ ಇವರು ಯಾರು ತಾವರೆಗಣ್ಣಿನವರು ಆನೆಯ ನಡಿಗೆ ಉಳ್ಳವರು ಕಾಕಪಕ್ಷಧರರು ಎಂದೆಲ್ಲ ವಿಶ್ವಾಮಿತ್ರರಲ್ಲಿ ಪ್ರಶ್ನಿಸುತ್ತಾನೆ.

ಪ್ರಾಚೀನ ಕಾಲದಲ್ಲಿ ಶರೀರ ಸಾಮುದ್ರಿಕ ಲಕ್ಷಣ ಪರಿಜ್ಞಾನಕ್ಕೆ ಬಹಳ ಪ್ರಾಶಸ್ತ್ಯ ನೀಡಲಾಗಿತ್ತು. ಆ ಪರಂಪರೆ ನಶಿಸಿ ಹೋಗಿರುವ ಈ ಕಾಲದಲ್ಲಿ ಅದೆಲ್ಲ ಬಲು ವಿಚಿತ್ರ ಅವ್ಯಾವಹಾರಿಕ ಅಸಭ್ಯವೆನ್ನುವಷ್ಟರ ಮಟ್ಟಿಗೆ ದೂರವಾಗಿರುವುದರಿಂದ ಪ್ರಾಚೀನ ಸಾಹಿತ್ಯದಲ್ಲಿ ನಾವು ತನ್ಮಯತೆಯನ್ನು ಹೊಂದಲಾರದವರಾಗಿದ್ದೇವೆ. ಆದರಿಂದ ಇಂಥ ಆಕ್ಷೇಪಗಳಿಗೆ ಅವಕಾಶ ದೊರಕಿದೆ. ರಾಮಲಕ್ಷ್ಮಣರು ನಾಗಪಾಶದಿಂದ ಬದ್ಧರಾದಾಗ, ಮೂರ್ಛಿತರಾಗಿ ಬಿದ್ದಾಗ ರಾವಣ ಸೀತೆಯನ್ನು ವಂಚಿಸಲು ಅವಳನ್ನು ವಿಮಾನದಲ್ಲಿ ಅವರಿದ್ದಲ್ಲಿಗೆ ಕಳಿಸಿ ಅವರು ಸತ್ತಿರುವರೆಂದು ಸುಳ್ಳು ಭಯ ಉಂಟು ಮಾಡಲು ಯತ್ನಿಸಿದಾಗ ಸೀತೆ ಅಳುತ್ತ ತನ್ನೊಳಗೆ ತಾನೆ ಕೇಳಿಕೊಳ್ಳು ತ್ತಾಳೆ– 'ನನ್ನ ರಾಮ ಸಾಯುವುದೆಂದರೇನು ? ಇದು ಹೇಗೆ ಸಾಧ್ಯ ? ನಾನು ವಿಧವೆಯಾಗಲೂ ಶಕ್ಯವಿಲ್ಲ, ನನ್ನ ಶರೀರದಲ್ಲಿ ಒಂದಾದರೂ ವಿಧವೆಯ ಲಕ್ಷಣ ಇಲ್ಲ, ಶರೀರ ಸಾಮುದ್ರಿಕ ಶಾಸ್ತ್ರ ತಿಳಿದವರು ನನ್ನ ಶರೀರ ಕಂಡು ಅಂಥ ಲಕ್ಷಣಗಳಿಲ್ಲವೆಂದೂ ಶುಭ ಲಕ್ಷಣಗಳೆ ಉಳ್ಳವಳೆಂದೂ ಹೇಳಿದ್ದಾರೆ. 'ಮಾಮೂಚು : ಶುಭ ಲಕ್ಷಣಾಂ' (ಯು. 48–12) ಎಂದು ತನ್ನ ಶರೀರದ ಸಾಮುದ್ರಿಕ ಲಕ್ಷಣಗಳನ್ನು ಒಂದೊಂದಾಗಿ ಪರಾಮರ್ಶಿಸು ತ್ತಾಳೆ. ಪತಿ ಸೌಭಾಗ್ಯ ಸೂಚಕವಾದ ಹನ್ನೆರಡು ಲಕ್ಷಣಗಳನ್ನು ಹೇಳುತ್ತಾಳೆ. ಮಂದಸ್ಮಿತವೆಂಬ ಕನ್ಯಾ ಲಕ್ಷಣವೂ ತನ್ನಲ್ಲಿ ಇದೆ ಎನ್ನುತ್ತಾಳೆ.

ತ್ರಿಜಟೆಯೂ ಸೀತೆಯ ಲಕ್ಷಣಗಳನ್ನು ಕಂಡು ಆಕೆಗೆ ಪತಿವಿಯೋಗ ವಾಗದೆಂದು ಧೈರ್ಯ ಹೇಳುತ್ತಾಳೆ. ರಾವಣ ಸನ್ಯಾಸಿ ವರ್ಣಿಸಿದ ಸೀತೆಯ ಅಂಗಲಕ್ಷಣಗಳೆಲ್ಲ ಈ ಸಾಮುದ್ರಿಕ ಶಾಸ್ತ್ರೋಕ್ತವಾಗಿದ್ದು ರಾವಣನೆ ಹೇಳು ವಂತೆ ಅಂಥ ಲಕ್ಷಣವತಿಯಾದ ಸೀತೆಗೆ ಯೋಗ್ಯನಾದ ಪತಿ ಉತ್ತಮನೆ

ಇರಬೇಕು. ಯೋಗ್ಯವಾದ ವಾಸಸ್ಥಾನ, ರಮ್ಯವಾದ ನಗರ ಉಪವನಗಳೆ ಆಗಿರಬೇಕು, ಯಾವ ರೀತಿಯ ದುಃಖಕ್ಕೂ ಅರ್ಹಳಲ್ಲ, 'ಆದರೂ ಏಕಾಂಗಿನಿಯಾಗಿ ಈ ಘೋರಾರಣ್ಯದಲ್ಲಿ ಏಕೆ ಇರುವೆ, ನೀನಾರು ?' ಎಂದು ರಾವಣ ಪ್ರಶ್ನೆ ಮಾಡುತ್ತಾನೆ ಹೊರತು ಸೀತೆಯ ಅಂಗಾಂಗ ವರ್ಣನೆಯನ್ನಷ್ಟೇ ಮಾಡುತ್ತಿಲ್ಲ. ಕೇವಲ ಅಂಗಾಂಗ ವರ್ಣನೆ ಮಾಡಿದ್ದರೆ ದುರ್ಭಾವನೆಯನ್ನು ಶಂಕಿಸಬಹುದಾಗಿತ್ತು.

ಸ್ತನ ವರ್ಣನೆಯ ಶ್ಲೋಕದ ಅನುವಾದ ಉದ್ದೇಶಪೂರ್ವಕವಾಗಿ ತಪ್ಪಾಗಿ ಮಾಡಲಾಗಿದೆ. 'ಪೀನೋನ್ನತಮುಖೌ' ಎಂದರೆ ಸ್ತನಗಳು ಪುಷ್ಟವಾಗಿವೆ ಮತ್ತು ಮೇಲ್ಮುಖವಾಗಿವೆ ಎಂದಿಷ್ಟೇ ಅರ್ಥ. ಮೇಲ್ಮುಖವಾಗಿ ನಿಮಿರುತ್ತವೆ ಎಂದರ್ಥವಾಗುವುದಿಲ್ಲ. 'ನಿಮಿರುತ್ತವೆ' ಎಂದು ಸೇರಿಸಿ ಓದಿ ನಗಬೇಕಾಗಿಲ್ಲ. 'ಸಂಪ್ರವಲ್ಗಿತೌ' ಎಂದರೆ ಅಲುಗುತ್ತವೆ ಎಂದು ಮಾತ್ರ ಅರ್ಥ. 'ಉದ್ರಿಕ್ತವಾಗುತ್ತವೆ' ಎಂದಲ್ಲ. ಆ ಅರ್ಥದಲ್ಲಿ ಶ್ಲೋಕದಲ್ಲಿ ಯಾವ ಪದವೂ ಇಲ್ಲ.

'ಚಾರುಸ್ಮಿತೇ' ಎಂದರೆ ಚಾರುಸ್ಮಿತಳು 'ಆಗುತ್ತಾಳೆ' ಎಂದರ್ಥವಲ್ಲ. 'ಚಾರುಸ್ಮಿತಳೆ !' ಎಂದು ಸಂಬೋಧಿಸುತ್ತಿದ್ದಾನೆ, ರಾವಣ. ಸೀತೆ ನಗದೆ ಇದ್ದರೂ ಮುಖದಲ್ಲಿ ಸ್ವಾಭಾವಿಕವಾದ ನಸುನಗೆಯ ಕಾಂತಿ ಇದೆ ಎಂದರ್ಥ. ಅದನ್ನು ಮುಂದೆ ಸೀತೆ ತಾನೆ ತನ್ನಲ್ಲಿರುವ ಒಂದು ಕನ್ಯಾಲಕ್ಷಣವೆಂದು ಅಳುತ್ತ ಹೇಳುವುದನ್ನು ಗಮನಿಸಬೇಕು, (ಯು. 48–13) ಅಲ್ಲದೆ, ಅಶೋಕ ವನದಲ್ಲಿ 'ಶೋಕಾರ್ತಳಾಗಿ ಅಳುತ್ತ ನಡುಗುತ್ತ ಪತಿಯನ್ನೆ ಚಿಂತಿಸುತ್ತ ಹುಲ್ಲುಕಡ್ಡಿಯನ್ನು ನಡುವೆ ಇಟ್ಟುಕೊಂಡು 'ಶುಚಿಸ್ಮಿತೆ'ಯಾದ ಸೀತೆ ರಾವಣನಿಗೆ ಹೇಳಿದಳು.' (ಸುಂ. 21–2) ಇಲ್ಲಿ ಅಳುತ್ತಿರುವ ಸೀತೆ ನಸುನಕ್ಕಳು ಎನ್ನಲಾಗದು. ಅಳುತ್ತಿದ್ದರೂ ಮುಖದಲ್ಲಿ ಸ್ವಾಭಾವಿಕವಾಗಿ ನಸುನಗೆಯ ಕಾಂತಿ ಉಳ್ಳವಳೆಂದೆ ಹೇಳಬೇಕು.

ಹಲ್ಲಿನ ಸೌಂದರ್ಯವನ್ನು ಸೀತೆ ಮಾತನಾಡುವಾಗ ರಾವಣ ಕಂಡಿರಬಹುದು. ನಗುವಾಗಲೆ ಕಂಡಿದ್ದನೆನ್ನಬೇಕಾಗಿಲ್ಲ.

ಒಂದು ವೇಳೆ ನಕ್ಕಿದ್ದರೂ ಆ ನಗು ರಾವಣನ ಶೃಂಗಾರ ವರ್ಣನೆ ಕೇಳಿ ಆನಂದಿಸುವ 'ನಗು' ಅಲ್ಲ. ಸನ್ಯಾಸಿಯೊಬ್ಬ ಅತಿಥಿಯಾಗಿ ಬಂದಿದ್ದಾನೆಂದು

ರಾಮನಂತೆ 'ಸ್ಮಿತಪೂರ್ವಾಭಿ ಭಾಷಿಣಿ'ಯಾಗಿ ಅತಿಥಿಯನ್ನು ಸ್ವಾಗತಿಸುವುದು ತನ್ನ ಕರ್ತವ್ಯವೆಂದು ಪ್ರಯತ್ನ ಪೂರ್ವಕವಾಗಿ ಆಕೆ ನಸುನಕ್ಕಿರಬಹುದು.

'ಸೀತೆ ಬ್ರಾಹ್ಮಣನ ಕುಶಲ ಪ್ರಶ್ನೆ ಮಾಡುತ್ತಾ ಕೂಡುತ್ತಾಳೆ ರಾಮನ ಬಗೆಗಿನ ಕಳವಳವನ್ನು ಮರೆತು ಬಿಡುತ್ತಾಳೆ.'

ಎನ್ನುವ ಅಂಶ, ರಾಮಾಯಣದಲ್ಲಿಲ್ಲದ್ದು. ಅದಕ್ಕೆ ವಿರುದ್ಧವಾದದ್ದು. 'ಪತಿಯನ್ನೂ ಲಕ್ಷ್ಮಣನನ್ನೂ ನೋಡ ಬಯಸುತ್ತ, ನಿರೀಕ್ಷಿಸುತ್ತ ದಿಕ್ಕನ್ನು ನೋಡುತ್ತಿದ್ದಳು' (ಅರ. 46-38) ಎಂದಿದೆ ರಾಮಾಯಣದಲ್ಲಿ. 'ಈ ಆಸನದಲ್ಲಿ ಕುಳಿತುಕೋ. ಈ ಹಣ್ಣುಹಂಪಲುಗಳನ್ನು ತಿನ್ನು' ಎಂದು ಹೇಳಿ, ರಾಮ ಲಕ್ಷ್ಮಣರ ಹಾದಿಯನ್ನೆ ನೋಡುತ್ತ ನಿಂತಳು, ಸೀತೆ. ಬ್ರಾಹ್ಮಣನ ಕುಶಲ ಪ್ರಶ್ನೆ ಮಾಡುತ್ತ ಕುಳಿತಿರಲಿಲ್ಲ.

ರಾವಣನು ಸೀತೆಯ ಅಂಗಾಂಗ ವರ್ಣನೆ ಮಾಡುತ್ತಿದ್ದಾಗ ಅವಳು ಅದನ್ನು ಆಲಿಸುವಷ್ಟು ವ್ಯವಧಾನ ಉಳ್ಳವಳಾಗುತ್ತಾಳೆ, ನಿಜ. ಹಾಗೆ ಮಾಡದೆ ಬೇರೆ ಉಪಾಯವಿರಲಿಲ್ಲ. ಶಕುಂತಲೆ ದುಷ್ಯಂತನಿಗಾಗಿ ಆಲೋಚಿಸುತ್ತಲೆ ಕುಳಿತು ಅತಿಥಿಯಾಗಿ ಬಂದ ದೂರ್ವಾಸರಿಂದ ಶಾಪ ಪಡೆದಂತೆ ಸೀತೆಯೂ ರಾಮನ ಧ್ಯಾನದಲ್ಲಿಯೆ ಇದ್ದು ಅನರ್ಥ ತಂದುಕೊಳ್ಳಬೇಕಾಗಿತ್ತೆ ?

'ತಂದುಕೊಳ್ಳಬೇಕಾಗಿತ್ತು, ನಿಜವಾದ ಆತಂಕವಿರುತ್ತಿದ್ದರೆ,' ಎನ್ನುವುದೂ ತಪ್ಪು. ಲಕ್ಷ್ಮಣ ಹೋಗಿದ್ದಾನೆ, ರಾಮನ ಬಳಿಗೆ. ರಾಮಲಕ್ಷ್ಮಣರು ಜೊತೆಗೆ ನಿಂತರೆ ಅವರಿಗೆ ಅಪಾಯ ಉಂಟು ಮಾಡುವವರು ಜಗತ್ತಿನಲ್ಲಿಯೆ ಇಲ್ಲವೆಂದೂ ಬೇಗನೆ ಬರುವರೆಂದೂ ಆಕೆಗೆ ದೃಢ ವಿಶ್ವಾಸ, ಅದಕ್ಕಾಗಿಯೆ ರಾಮಲಕ್ಷ್ಮಣರ ಹಾದಿ ನೋಡುತ್ತ ನಿಂತಿದ್ದಾಳೆ.

'ರಾವಣನ ಮಾತುಗಳನ್ನು ಸೀತೆ ತಡೆಯಲಿಲ್ಲ. ಆದರೆ, ಲಕ್ಷ್ಮಣ ತನ್ನ ಬಗ್ಗೆ ಲೈಂಗಿಕ ಯೋಚನೆ ಮಾಡಿದ್ದಾನೆಂದು ಊಹಿಸಿ ಕೆಂಡಕಾರಿದ್ದಳು' ಎಂದು ದೋಷಾರೋಪಣೆ ಮಾಡುವುದು ಸರಿಯಲ್ಲ. ರಾವಣನಿಗೂ ಲಕ್ಷ್ಮಣನಿಗೂ ಯಾವ ಹೋಲಿಕೆಯೂ ಇಲ್ಲ. ರಾವಣನೀಗ ಪೂಜ್ಯನಾದ ಒಬ್ಬ ಅತಿಥಿ. ಅವನಲ್ಲಿ ಲೈಂಗಿಕ ಯೋಚನೆಯ ಶಂಕೆಗೆ ಅವಕಾಶವಿಲ್ಲ. ಲಕ್ಷ್ಮಣ ರಾಮನಿಗಾಗಿರ

ಬಹುದಾದ ಪ್ರಾಣಾಪಾಯವನ್ನು ಅಲಕ್ಷ್ಯದಿಂದ ಕಾಣುತ್ತ ತನ್ನ ಬಳಿಯೆ ಏಕೆ ಕುಳಿತಿದ್ದಾನೆ ಎಂದುಕೊಂಡಳು ಸೀತೆ.

ಅಂಗಾಂಗ ವರ್ಣನೆಯಿಂದ ಸೀತೆಗೆ ಸಂಕೋಚವಾಗಲಿಲ್ಲವೆ ? ಅವಳು ತನ್ನ ದೇಹ ಭಾಗವನ್ನೇಕೆ ಮುಚ್ಚಿಕೊಳ್ಳಲಿಲ್ಲ ಎಂಬ ಪ್ರಶ್ನೆ ಬರಬಹುದು. ಆದರೆ ಪ್ರಾಚೀನರಲ್ಲಿ ಹೆಣ್ಣಿನ ಅಂಗಾಂಗಗಳ ಬಗ್ಗೆ ಮಾತನಾಡುವಾಗ ಯಾರಿಗೂ ಸಂಕೋಚ ಇದ್ದಂತಿಲ್ಲ. ಅಪರಿಚಿತ ಹೆಣ್ಣನ್ನು ಸಂಬೋಧಿಸುವಾಗ ಸುಂದರಿ, ಕಮಲಾಕ್ಷಿ, ಸುದತಿ, ಸುಶ್ರೋಣಿ ಎಂದೆಲ್ಲ ಕರೆಯುವುದು ರೂಢಿಯಾಗಿತ್ತು. ಉದಾ : ಅಸಿತರಾಜನ ರಾಣಿ ಕಾಲಿಂದಿ ಚ್ಯವನ ಮುನಿಯನ್ನು ನಮಸ್ಕರಿಸಿದಾಗ 'ತಾವರೆಯಂತಹ ಕಣ್ಣುಳ್ಳವಳೆ, ಮಹಾ ಪರಾಕ್ರಮಿಯಾದ ಮಗನೊಬ್ಬ ನಿನ್ನಲ್ಲಿ ಜನಿಸುತ್ತಾನೆ' ಎಂದು ಆಶೀರ್ವದಿಸುತ್ತಾನೆ. (ಬಾಲ. 70–35) ಜಟಾಯು ಸೀತೆಯನ್ನು 'ವರಾರೋಹಾ,' ಶ್ರೇಷ್ಠನಿತಂಬ ಉಳ್ಳವಳು ಎನ್ನುತ್ತಾನೆ (ಅರ. 50–6) ಇಲ್ಲಿ 'ವರಾರೋಹಾ' ಎಂದರೆ ಶ್ರೇಷ್ಠ ನಿತಂಬ ಉಳ್ಳವಳೆಂದರ್ಥ. ಸುಗ್ರೀವ ಸೀತೆಯನ್ನು 'ವಿಶಾಲಾಕ್ಷಿ' ಎನ್ನುತ್ತಾನೆ (ಯು. 21–27) ಬ್ರಹ್ಮಚಾರಿ ಹನುಮಂತನೂ ಸೀತೆಯನ್ನು ಕಮಲಪತ್ರಾಕ್ಷಿ, ವಿಶಾಲಾಕ್ಷಿ (ಸುಂ. 35–6, 7) ವರಾರೋಹೇ (ಸು. 35–68) ಎಂದು ಸಂಬೋಧಿಸುವುದು ಗಮನಾರ್ಹವಾದುದು.

ಕವಿಗಳಲ್ಲಿ ಸ್ತ್ರೀಯೊಬ್ಬಳನ್ನು ಹೆಸರಿಸುವಾಗಲೂ ದೇಹಾವಯವಗಳ ವರ್ಣನೆಯ ಪ್ರಸಕ್ತಿ ಇಲ್ಲದಿದ್ದಾಗಲೂ, ಅವಯವ ಸೌಂದರ್ಯವನ್ನು ಹೇಳುವ ವಿಶೇಷಣ ಕೊಟ್ಟು ಹೇಳುವುದು ಅಭ್ಯಾಸವಾಗಿತ್ತು. ವಾಲ್ಮೀಕಿ 'ಕೈಕೇಯಿಾ ಚ ಸುಮಧ್ಯಮಾ' (ಬಾಲ. 77–10) 'ಸಾ. ತಂ ಸಂಪ್ರೇಕ್ಷ್ಯ ಸುಶ್ರೋಣೀ' 'ಪ್ರಹೃಷ್ಟಾಚಾನವದ್ಯಾಂಗೀ' (ಅರ, 43-1, 2) 'ಸಾ ತಮುದ್ವೀಕ್ಷ್ಯ ಸುಶ್ರೋಣೀ ಸಮಾಕ್ರಂದದ್ಭಯಪರಾ (ಅರ. 49–37)...ಇತ್ಯಾದಿ ಸ್ತ್ರೀಯ ನಡು, ನಿತಂಬಗಳನ್ನು ಹೊಗಳುತ್ತಲೆ ಹೆಸರಿಸುತ್ತಾನೆ.

ಲಕ್ಷ್ಮಣನೆದುರಿನಲ್ಲಿಯೆ ರಾಮ ಯಾವ ಸಂಕೋಚವಿಲ್ಲದೆ ಸೀತೆಯನ್ನು ಬಾರಿ ಬಾರಿಗೆ ಆಲಿಂಗಿಸಿದ್ದುಂಟು. (ಅರ. 30–40, 41)

ದೇವತೆಗಳನ್ನು ಸ್ತೋತ್ರ ಮಾಡುವಾಗ 'ಕಮಲಾ ಕುಚಚೂಚುಕ

ಕುಂಕುಮತೋಽ ನಿಂಪೆತಾರುಣಿತಾತುಲ ನೀಲತನು'ವನ್ನು ಸಂಕೋಚವಿಲ್ಲದೆ ಸ್ತೋತ್ರ ಮಾಡುತ್ತೇವೆ. ದೇವಾಲಯಗಳಲ್ಲಿ ನಗ್ನ ಅರೆನಗ್ನ ಶಿಲಾ ಬಾಲಿಕೆಗಳ ಶಿಲ್ಪವನ್ನು ಸಂಕೋಚವಿಲ್ಲದೆ ನೋಡುತ್ತೇವೆ.

ಪ್ರಾಚೀನ ಕಾವ್ಯಗಳನ್ನು ಓದುವಾಗ ನಾವು ತನ್ಮಯರಾಗಿ ಪ್ರಾಚೀನ ಕಾಲದ ಸಮಾಜದಲ್ಲಿ ಒಂದಾಗಿ ಬೆರೆಯಬೇಕಾಗುತ್ತದೆ. ಇಲ್ಲದಿದ್ದರೆ ಅಲ್ಲಿಯ ಆಚಾರ ವಿಚಾರಗಳೆಲ್ಲ ವಿಚಿತ್ರವಾಗಿ ಕಂಡುಬರಬಹುದು. ಕಾವ್ಯದಿಂದ ರಸಾನುಭವ ದೊರಕುವುದು ಅಶಕ್ಯವಾದೀತು. ಪ್ರಕೃತದಲ್ಲಿ ರಾವಣ ಪ್ರಾಚೀನರ ರೂಢಿಯಂತೆ ಒಬ್ಬ ಹೆಣ್ಣಿನ ದೇಹಾವಯವಗಳ ಸಾಮುದ್ರಿಕ ಶಾಸ್ತ್ರೋಕ್ತ ಲಕ್ಷಣಗಳನ್ನು ಕಂಡು 'ಅವಳು ಯಾವ ದುಃಖಕ್ಕೂ ಅರ್ಹಳಲ್ಲ ವೆ'ಂದು ಹೊಗಳುತ್ತಿದ್ದಾನೆ. ಆ ಹೆಣ್ಣು ಅಂಥ ಲಕ್ಷಣವತಿ ತಾನೆಂದು ಹೆಮ್ಮೆ ಪಟ್ಟುಕೊಳ್ಳುತ್ತಿದ್ದಾಳೆ. ಮುಂದೆ ಯಾವ ದುಃಖವೂ ತನಗೆ ಬರಲಾರದೆಂದು ಸಮಾಧಾನ ಹೊಂದುತ್ತಿದ್ದಾಳೆ. ಆದ್ದರಿಂದ ಪ್ರತಿಭಟಿಸುತ್ತಿಲ್ಲ. ಇದರಲ್ಲಿ ಲೈಂಗಿಕ ಆಲೋಚನೆಯ ಲೇಶವೂ ಇರುವುದಿಲ್ಲ. ಇರುವ ಸಂದರ್ಭದಲ್ಲಿ ಮಾತ್ರ ಅಶೋಕವನದಲ್ಲಿ ಸೀತೆ ತನ್ನ ಸ್ತನ ಉದರಗಳನ್ನು ಮುಚ್ಚಿಕೊಂಡಂತೆ, ಹೆಣ್ಣು ಲಜ್ಜಿತಳಾಗುತ್ತಾಳೆ.

ವಸ್ತುತ: ರಾವಣ ಲೈಂಗಿಕ ಯೋಚನೆಯಿಂದಲೆ ಸೀತೆಯನ್ನು ವರ್ಣಿಸುತ್ತಿದ್ದರೂ ಕಾವಿಬಟ್ಟೆ ಉಟ್ಟ ಸನ್ಯಾಸಿಯಾಗಿ ಆತ ಬಂದಿದ್ದರಿಂದ ಅವಳಿಗೆ ಅನುಮಾನ ಉಂಟಾಗಿರಲಿಲ್ಲ, ಮಾತ್ರವಲ್ಲ, ಅವನು ಸನ್ಯಾಸಿ, ಅಂಥ ಭಾವನೆ ಅವನಲ್ಲಿರಲಿಕ್ಕಿಲ್ಲ ಎಂದು ಅಂದುಕೊಂಡಿದ್ದಳು. (ಅರ. 46-35)

ಪೂಜ್ಯನಾದ, ಸನ್ಯಾಸಿಯಾದ ಒಬ್ಬ ಬ್ರಾಹ್ಮಣ ಅತಿಥಿಯಾಗಿ ಮನೆ ಬಾಗಿಲಿಗೆ ಬಂದಾಗ, ತನ್ನ ಸೌಂದರ್ಯವನ್ನು ಹೊಗಳಿ ಅಂಥವಳು ಈ ಘೋರ ಅರಣ್ಯದಲ್ಲಿ ಇರಲು ಯೋಗ್ಯಳಲ್ಲ, ಏಕೆ ಏಕಾಂಗಿನಿಯಾಗಿ ಇಲ್ಲಿ ಇರುವಿ, ನೀನಾರು ಎಂದು ಪ್ರಶ್ನಿಸುತ್ತಿರುವಾಗ ಸೀತೆ ಅಂಗಾಂಗಗಳನ್ನು ಮುಚ್ಚಿಕೊಂಡು ಮುದುಡಿ ಕುಳಿತುಕೊಳ್ಳಬೇಕಾಗಿತ್ತೆನ್ನುವುದು ಎಷ್ಟು ಅನುಚಿತ! ಮಾತ್ರವಲ್ಲ, ಹಾಗೆ ಆಕೆ ವರ್ತಿಸಿದ್ದರೆ ಇದು ತನ್ನ ಮೇಲೆ ಭೀಕರ ಆರೋಪ ಎಂದು ಬಗೆದು, ಬಂದ ಅತಿಥಿ ಶಾಪ ಕೊಟ್ಟು ಹೋಗುತ್ತಿದ್ದ. (ಅರ. 47-2)

'ರಾವಣ, ಬ್ರಾಹ್ಮಣ ವೇಷದಿಂದ ಬಂದುದರಿಂದ ಬ್ರಾಹ್ಮಣನಾದುದರಿಂದಲೆ ಕಾಮಿಸಲು ಯೋಗ್ಯನಾಗುತ್ತಾನೆ'—ಈ ಮಾತನ್ನು 'ಬ್ರಾಹ್ಮಣನಾದುದರಿಂದಲೆ ಲೈಂಗಿಕತೆಯ ಲೇಶವೂ ಇಲ್ಲದಂಥ ವ್ಯವಹಾರಕ್ಕೆ ಯೋಗ್ಯನಾಗುತ್ತಾನೆ' ಎಂದು ತಿದ್ದಿಕೊಳ್ಳಬೇಕು, ರಾವಣ ಪರಪುರುಷನೆಂದ ಮೇಲೆ ಸೀತೆಗೆ ಆತ ಬ್ರಾಹ್ಮಣನಾದರೇನು, ಅಲ್ಲದಿದ್ದರೇನು ಕಾಮಿಸಲು ಯೋಗ್ಯನಾಗುವ ಪ್ರಸಕ್ತಿಯೆ ಇಲ್ಲ. ರಾಮನಲ್ಲಿ ಪ್ರೀತಿ ಇಲ್ಲವೆಂದು ಲಕ್ಷ್ಮಣನಲ್ಲಿ ಪ್ರೀತಿ ಮಾಡಿದಳೆನ್ನಲಾದ ಸೀತೆ ರಾವಣನನ್ನು ಕಾಮಿಸುವುದು ಪ್ರೇಮಕ್ಕೆ ವಂಚನೆಯಲ್ಲವೆ ?

'ಸೀತೆ ಲಂಪಟಳಾಗಿ ಗಂಡಿನಿಂದ ಗಂಡಿಗೆ ಅಲೆಯುತ್ತಿಲ್ಲ. ಸೀತಾ ಲಕ್ಷ್ಮಣರ ವ್ಯವಹಾರಗಳಲ್ಲಿ ಲೈಂಗಿಕತೆಯನ್ನು ಲವಲೇಶವೂ ಆರೋಪಿಸಲಾರೆವು'

ಎಂದು ಸೀತೆಗೆ ಲಕ್ಷ್ಮಣನಲ್ಲಿ ನಿರ್ಮಲ ಪ್ರೇಮವೆನ್ನುತ್ತ, ರಾವಣ ಕಾಮಿಸಲು ಯೋಗ್ಯನೆನ್ನುವುದು ಸರಿಯೆ ?

'ಸೀತೆಯ ಅಂತರಂಗದಲ್ಲಿ ಹುದುಗಿದ ಕಾಮ ಮಾಯಾಜಿಂಕೆಯಾಗಿ, ಸೀತೆ ಲಕ್ಷ್ಮಣನನ್ನು ನಿಂದಿಸುವಲ್ಲಿ ಲಕ್ಷ್ಮಣನಾಗಿ, ರಾವಣನು ಸೀತೆಯನ್ನು ವರ್ಣಿಸುವಲ್ಲಿ ಪ್ರಣಯಿಯಾಗಿ ವ್ಯಕ್ತಗೊಳ್ಳುತ್ತದೆ'

ಎಂದರೆ ಸೀತೆಗೆ ಕೈಹಿಡಿಯಲು ಪತಿಯಾಗಿ ರಾಮ, ಆಟವಾಡಲು ಮಾಯಾ ಜಿಂಕೆಯಾಗಿ ಮಾರೀಚ, ನಿಂದನೆಯ ಮಾತು ಕೇಳಲು ಲಕ್ಷ್ಮಣ, ತನ್ನ ಶರೀರ ವರ್ಣನೆ ಮಾಡಲು ರಾವಣ....ಇದೇನು, ಗಂಡಿನಿಂದ ಗಂಡಿಗೆ ಲಂಪಟಳಾಗಿ ಅಲೆಯುತ್ತಿಲ್ಲವೆ ? ಹಾಗಾದರೆ 'ಲಂಪಟ'ತನವೆಂದರೇನು ?

## ಮಾಯಾ ಜಿಂಕೆ

'ಕಾಮರೂಪಿ'ಯಾದ ಜಿಂಕೆಯನ್ನು ನೋಡಿ ಸೀತೆ ಮೋಹಿತಳಾಗುತ್ತಾಳೆ. ರಾಮನನ್ನು ಕುರಿತು ಅದನ್ನು ಜೀವಂತವಾಗಿಯಾದರೂ ಕೊಂದಾದರೂ ತಾ ಎನ್ನುತ್ತಾಳೆ.

ನಿಹತಸ್ಯಾಸ್ಯ ಸತ್ವಸ್ಯ ಜಾಂಬೂನದಮಯ ತ್ವಚಿ ।
ಶಷ್ಪಬೃಸ್ಯಾಂ ವಿನೀತಾಯಾಂ ಇಚ್ಛಾಮ್ಯಹಮುಪಾಸಿತುಂ ॥

ಎಂದರೆ, 'ಇದನ್ನು ಕೊಳ್ಳಬೇಕಾಗಿ ಬಂದರೆ ಸುವರ್ಣಮಯವಾದ ಚರ್ಮ ದೊರಕುತ್ತದೆ. ನಾನು ಹುಲ್ಲಿನ ಚಾಪೆಯ ಮೇಲೆ ಈ ಚರ್ಮವನ್ನು ಹಾಸಿ ಕುಳಿತುಕೊಳ್ಳಬೇಕೆಂಬ ಇಚ್ಛೆ ಇದೆ.' ಇಲ್ಲಿ ಜಿಂಕೆ ಸೀತೆಯ ಮನಸ್ಸನ್ನು ಪ್ರಚೋದಿಸುವ ಪ್ರಚಂಡವಾದ ಕಾಮದ ಪ್ರತಿಮೆಯಾಗಿ ನಿಲ್ಲುತ್ತದೆ. ಇದನ್ನು ಹೇಳುತ್ತಿದ್ದಂತೆಯೆ ತನ್ನ ವಾಂಛೆಯ ಅತಿರೇಕದ ಪ್ರಜ್ಞೆ ಅವಳಿಗೇ ಅರಿವಾಗುತ್ತದೆ—

ಕಾಮವೃತ್ತಮಿದಂ ರೌದ್ರಂ ಸ್ತ್ರೀಣಾಮಸದೃಶಂ ಮತಂ ।
ವಪುಷಾ ತ್ವಸ್ಯ ಸತ್ವಸ್ಯ ವಿಸ್ಮಯೋ ಜನಿತೋ ಮಮ ॥

ಅಂದರೆ 'ರುದ್ರವಾದ ಈ ಕಾಮಪ್ರವೃತ್ತಿ ಸ್ತ್ರೀಯರಿಗೆ ಸದೃಶವಾದುದಲ್ಲ. ಆದರೆ ಆ ಪ್ರಾಣಿಯ ಮೈಯಿಂದ ನನ್ನಲ್ಲಿ ವಿಸ್ಮಯ ಜನಿತವಾಗಿದೆ,' ಸೀತೆಯ ಈ ರೀತಿಯ ಮನೋ ದೌರ್ಬಲ್ಯಕ್ಕೆ ಕಾರಣವಿಲ್ಲದಿಲ್ಲ. ರಾಮನು ಸೀತೆಯ ಜತೆಯಲ್ಲಿದ್ದರೂ ಅವನು ಜಟಾಧಾರಿ ತಾಪಸಿ ಜಿತೇಂದ್ರಿಯ; ಸೀತೆ ಒಂದು ರೀತಿಯಿಂದ, ವಿರಹಿ. ಅನುವಾದಕರಾದ ಶರ್ಮಾರವರ ರಾಮಾಯಣದ ಭಕ್ತಿ ಎಷ್ಟರ ಮಟ್ಟಿನದೆಂದರೆ ಅವರು ಅನುವಾದನಿಷ್ಠೆ ಪ್ರಾಮಾಣಿಕತೆಯನ್ನು ಮೀರಿ ಮೂಲಕಾವ್ಯದ ಶಬ್ದಗಳ ಜೊತೆಯಲ್ಲಿ ತಮ್ಮ ಭಕ್ತಿಜನ್ಯ ವಾದ ಪದಗಳನ್ನು ಸೇರಿಸಿದ್ದಾರೆ. ಚರ್ಮದ ಮೇಲೆ ಕುಳಿತುಕೊಳ್ಳುವ ಇಚ್ಛೆ ಎನ್ನುವಲ್ಲಿ ನಿನ್ನೊಡನೆ (ರಾಮನೊಡನೆ) ಎಂದು ಸೇರಿಸಿ ಸೀತೆಯನ್ನು ಕಾಯ್ದಿದ್ದಾರೆ. ಕಾಮವೃತ್ತಮಿದಂ ಎಂಬಲ್ಲಿ ಕಾಮಶಬ್ದಕ್ಕೆ ಸ್ವೇಚ್ಛೆ ಎಂದು ಅನುವಾದಿಸಿದ್ದಾರೆ.

ಇಲ್ಲಿ ಪ್ರಸಿದ್ಧ ವಿದ್ವಾಂಸರಾದ ಒಬ್ಬ ಅನುವಾದಕರನ್ನು ಆಕ್ಷೇಪಿಸುವಲ್ಲಿ ವಸ್ತುತಃ ತಮ್ಮಲ್ಲಿರುವ ಶಬ್ದಾರ್ಥಗಳ ದಿವ್ಯ ಅಜ್ಞಾನವನ್ನೆ ಪ್ರದರ್ಶಿಸ ಲಾಗಿದೆ. 'ಉಪಾಸಿತುಂ' ಎಂದರೆ ಕುಳಿತುಕೊಳ್ಳಲು ಎಂದಿಷ್ಟೆ ಅರ್ಥವಲ್ಲ. 'ಆಸಿತುಂ' ಎಂದಿದ್ದರೇ ಸಾಕಾಗಿತ್ತು. 'ಉಪ' ಶಬ್ದ ವ್ಯರ್ಥ. ಆದ್ದರಿಂದ ಉಪ=ಸಮೀಪದಲ್ಲಿ, ಬಳಿಯಲ್ಲಿ, ಆಸಿತುಂ=ಕುಳಿತುಕೊಳ್ಳಲು, ಎಂದೆ ಅರ್ಥ. ಯಾರ ಬಳಿ? ರಾಮನೊಡನೆ ಈ ಮಾತು ಹೇಳುತ್ತಿರುವುದರಿಂದ ರಾಮನ ಬಳಿಯಲ್ಲಿ. ಇದು ಭಕ್ತಿಜನ್ಯ ಪದವಲ್ಲ.

ಸೀತೆ ರಾಮನೊಡನೆಯೆ ಚರ್ಮದ ಮೇಲೆ ಕುಳಿತುಕೊಳ್ಳಲು ಬಯಸಿದ್ದಳು. ರಾಮನೂ,

ಏತಸ್ಯ ಮೃಗರತ್ನಸ್ಯ ಪರಾರ್ಧ್ಯೇ ಕಾಂಚನ ತ್ವಚಿ ।
ಉಪವೇಕ್ಷ್ಯತಿ ವೈದೇಹೀ ಮಯಾ ಸಹ ಸುಮಧ್ಯಮಾ ॥

'ಈ ಮೃಗದ ಚರ್ಮದಮೇಲೆ ಸೀತೆ ನನ್ನೊಡನೆ ಕುಳಿತುಕೊಳ್ಳಲಿ' ಎಂದು ಅವಳ ಬಯಕೆಯನ್ನು ಸಮ್ಮತಿಸುತ್ತಾನೆ. ಇಲ್ಲಿ 'ಮಯಾ ಸಹ' 'ನನ್ನೊಡನೆ' ಎಂಬ ಪದ ಗಮನಾರ್ಹ.

'ಕಾಮವೃತ್ತಮಿದಂ ರೌದ್ರಂ' ಎಂಬಲ್ಲಿ ಕಾಮ ಎಂದರೆ ಸ್ವೇಚ್ಛೆಯೆ. 'ಸ್ವರ್ಗಕಾಮೋ ಯಜೇತ' ಎಂದು ಮುಂತಾದೆಡೆ ಕೇವಲ ಇಚ್ಛೆ ಎಂಬ ಅರ್ಥದಲ್ಲಿಯೆ ಪ್ರಯೋಗ ಕಂಡಿದೆ. ಆದ್ದರಿಂದ ಕಾಮವೃತ್ತವೆಂದರೆ ಸ್ವೇಚ್ಛಾನುಸಾರಿಯಾಗಿ ನಡೆಯುವುದು ಎಂದೆ ಅರ್ಥ. ಈ ಅರ್ಥದಲ್ಲಿ,

'ಅಮಾತ್ಯೈಃ ಕಾಮವೃತ್ತೋ ಹಿ ರಾಜಾ ಕಾಪಥಮಾಶ್ರಿತಃ ।
ನಿಗ್ರಾಹ್ಯಃ ಸರ್ವಥಾ ಸದ್ಭಿಃ (ಅರ. 41-7)

'ಸ್ವೇಚ್ಛಾನುಸಾರ ನಡೆಯುತ್ತ ದುರ್ಮಾರ್ಗಕ್ಕಿಳಿದ ರಾಜನನ್ನು ಒಳ್ಳೆಯ ಮಂತ್ರಿಗಳು ಅವಶ್ಯ ತಡೆಯಲಿಬೇಕು' ಎಂದು ವಾಲ್ಮೀಕಿಯ ಪ್ರಯೋಗವೆ ಇದೆ.

ಜಿಂಕೆಯನ್ನು 'ಕಾಮರೂಪಿ' ಎಂದೂ ವಾಲ್ಮೀಕಿ ಹೇಳಿಲ್ಲ, 'ಮಾಯಾಮಯ' ಎಂದಿದ್ದಾನೆ. (ಅರ. 42-34) ಆದ್ದರಿಂದ ಮಾಯಾಜಿಂಕೆ ಕಾಮದ ಪ್ರತಿಮೆ ಆಗಲಾರದು.

ಮಾರೀಚನನ್ನು ಲಕ್ಷ್ಮಣ 'ಕಾಮರೂಪಿ' ಎಂದಿದ್ದಾನೆ (ಅರ. 43-6) ಆದರೆ ಮಾರೀಚನನ್ನು ಸೀತೆ ಬಯಸುತ್ತಿಲ್ಲ. ಆಕೆ ಬಯಸುವುದು ಸುವರ್ಣಮಯವಾದ ಜಿಂಕೆಯನ್ನು.

ಕೇವಲ ಒಂದು ಜಿಂಕೆಯನ್ನು ಬಯಸಿದರೆ ಆ ಬಯಕೆ ಕಾಮಾಕಾಂಕ್ಷೆಯಾದೀತೆ ?

'ಕಾಮರೂಪಿ' ಎಂಬಲ್ಲಿಯೂ ಕಾಮ ಎಂದರೆ ಸ್ವೇಚ್ಛೆಯೆ. ರಾಕ್ಷಸರೂ ವಾನರರೂ ಸ್ವೇಚ್ಛೆಯಿಂದ ತಮಗೆ ಬೇಕಾದ ರೂಪ ಧರಿಸುವವರೆಂದು ಕಾಮ ರೂಪಿಗಳೆನ್ನಲಾಗಿದೆ—ಅರ. 30-31. 49-24; ಕಿ. 3-23, 4-14; ಸುಂ. 35-77; ಯು. ೮-13 ಇತ್ಯಾದಿ.

ಒಂದುವೇಳೆ ಸೀತೆ ಮಾರೀಚನನ್ನೇ ಕಾಮಿಸಿದ್ದಾಳೆ ಎಂದು ಮೊಂಡುತನ ದಿಂದ ವಾದಿಸಿದರೂ 'ಉಪಾಸಿತುಂ' ರಾಮನೊಡನೆ ಚರ್ಮದ ಮೇಲೆ ಕುಳಿತುಕೊಳ್ಳುವ ಸೀತೆಯ ಬಯಕೆ ಮಾರೀಚನ ಬಗೆಗಿನ ಲೈಂಗಿಕ ಬಯಕೆ ಯಾಗದು. ಕಾಮದ ಪ್ರತಿಮೆ 'ಉಪಾಸಿತುಂ' ಪದದ ಸಾಕ್ಷ್ಯದಲ್ಲಿ ನಿಲ್ಲದು. ನುಚ್ಚುನೂರಾದೀತು.

ಈ ರುದ್ರವಾದ ಕಾಮ ಪ್ರವೃತ್ತಿ ಸ್ತ್ರೀಯರಿಗೆ ಸದೃಶವಾದುದಲ್ಲ ಎನ್ನುವಲ್ಲಿ ತನ್ನ ದೌರ್ಬಲ್ಯವನ್ನು ರಾಮನಿಗೆ ನಿವೇದಿಸುತ್ತಾಳೆ ಎನ್ನುವುದೇನೊ ನಿಜವೆ. ಆದರೆ ಯಾವ ದೌರ್ಬಲ್ಯ ? ಜಿಂಕೆಯನ್ನು ಜೀವಂತವಾಗಿಯಾದರೂ ಕೊಂದಾದರೂ ತಂದುಕೊಡಲೇಬೇಕೆಂದು, ನಾನು ನಿನ್ನಲ್ಲಿ ಆಗ್ರಹಪಡಿಸುತ್ತಿ ದ್ದೇನೆ. ಇದು ಸ್ತ್ರೀಯರಿಗೆ ಉಚಿತವಲ್ಲ, ಸ್ತ್ರೀಯರೆಂದೂ ಪತಿಗಳನ್ನು ಹೀಗೆ ಕಾಡುವುದು ಸರಿಯಲ್ಲ. ಆದರೂ ನಾನೇನು ಮಾಡಲಿ ? ಈ ಜಿಂಕೆಯ ರೂಪಕ್ಕೆ ಧ್ವನಿಗೆ ಸಂಪೂರ್ಣವಾಗಿ ಮಾರು ಹೋಗಿದ್ದೇನೆ' ಎನ್ನುತ್ತಿದ್ದಾಳೆ, ಸೀತೆ. ಈ ದೌರ್ಬಲ್ಯವನ್ನು ಅಪಾರ್ಥಗೊಳಿಸಿ,

'ಸೀತೆ ತನ್ನ ವ್ಯಕ್ತಿ ವಿಶೇಷದ ಅಭಿವ್ಯಕ್ತಿಯಲ್ಲಿ ಸ್ತ್ರೀ ಎನ್ನುವ ಲಿಂಗಭೇದವನ್ನು ಮೀರಿದ ಸ್ವತಂತ್ರ ವ್ಯಕ್ತಿ, ಸ್ತ್ರೀ ಜಾತಿಗೇ ಲಿಂಗಕ್ಕೇ ಅಸದೃಶಳು. 'ಸ್ತ್ರೀಣಾಮಸದೃಶಂ' ರಾಮನಾದರೋ ಪಿತೃ ವಾಕ್ಯ ಪರಿಪಾಲನೆಗಾಗಿಯೇ ರಾಮಾಯಣದ ಮೂಗಿನ ನೇರದವನು. ಲಕ್ಷ್ಮಣ ರೇಖೆ ಎಂದೆಂದೂ ದಾಟದವನು. ಸೀತೆಯಾದರೋ ಅವನ ಗಂಡಸುತನವನ್ನೆ ಪ್ರಶ್ನಿಸಿ ಲಕ್ಷ್ಮಣರೇಖೆಗಳನ್ನೂ ದಾಟಿದವಳು :

ಎಂದೆಲ್ಲ ಹೇಳುವುದು ಅರ್ಥವಿಲ್ಲದ್ದು ಸೀತೆ ರಾಮನಲ್ಲಿ ತನ್ನ ದೌರ್ಬಲ್ಯವನ್ನು ವಿನಯದಿಂದಲೆ ಹೇಳಿಕೊಂಡಿದ್ದಾಳೆ, ಧಾರ್ಷ್ಟ್ಯದಿಂದಲ್ಲ. ಹೆಂಗಸಿಗೆ ಯೋಗ್ಯ ವಲ್ಲದುದರಿಂದ ವಸ್ತುತಃ ಹಾಗೆ ಮಾಡಬಾರದು ನಾನು ಎನ್ನುವ ಸೀತೆಯ ವಿನೀತಭಾವವನ್ನೆ ಈ ಮಾತು ಹೇಳುತ್ತಿದೆ.

# ಸೀತೆ ಏಕೆ ಶಪಿಸಲಿಲ್ಲ

'ಸೀತೆಗೆ ರಾವಣ ಬ್ರಾಹ್ಮಣ ವೇಷದಿಂದ ಬಂದುದರಿಂದ ಬ್ರಾಹ್ಮಣನಾದ್ದರಿಂದಲೆ ಕಾಮಿಸಲು ಯೋಗ್ಯನಾಗುತ್ತಾನೆ. ಅವಳು ರಾವಣನನ್ನು ಒಲ್ಲೆನೆನ್ನಲು ಪ್ರಬಲ ಕಾರಣ ಅವನು ರಾಮನಂತೆ ಆರ್ಯನಲ್ಲ, ರಾಕ್ಷಸ ಎನ್ನುವ ಆರ್ಯ ದ್ರಾವಿಡ ಭೇದವೆ ಕಾರಣ ವಿರುವಂತೆ ಕಾಣುತ್ತದೆ'

—ಈ ಮಾತು ಸೀತೆಯೆ ಹೇಳುವ 'ಸೂರ್ಯನಿಗೂ ಅವನ ಪ್ರಭೆಗೂ ಇರುವಂಥ ರೀತಿಯ ಅಭೇದ್ಯವಾದ ಪ್ರೇಮಸಂಬಂಧ ತನ್ನ ಹಾಗೂ ರಾಮನ ನಡುವೆ ಇದೆ' (ಸುಂ. 21-15) ಎಂಬ ಮಾತಿಗೆ ವಿರುದ್ಧ.

'ರಾವಣ ರಾಕ್ಷಸನಾದ್ದರಿಂದ ತಾನು ಅವನ ಹೆಂಡತಿಯಾಗಲಾರೆ' ಎಂದು ಸೀತೆ ಹೇಳಿದ್ದುದೇನೋ ನಿಜವೆ. ಆದರೆ ಅದರ ಸಂದರ್ಭ ಇದು—'ರಾಮ ದುರ್ಬಲನಾದ ಓರ್ವ ಮನುಷ್ಯ, ರಾಜ್ಯ ಭ್ರಷ್ಟನಾಗಿ ದಿಕ್ಕಿಲ್ಲದೆ ಅಲೆಯುತ್ತಲೂ ಇದ್ದಾನೆ ಅವನನ್ನೆ ಏಕೆ ಬಯಸುತ್ತಿರುವಿ ? ರಾವಣ ಬಲಿಷ್ಠನಾದ ರಾಕ್ಷಸ ಚಕ್ರವರ್ತಿ, ಮೂಲೋಕದ ಸಂಪತ್ತೆಲ್ಲ ಅವನ ಅಧೀನ. ಆದರೂ ಅವನನ್ನು ಒಲ್ಲೆನೆನ್ನುತ್ತಿ. ಮನುಷ್ಯಳಾದ್ದರಿಂದಲೆ ಇರಬೇಕು, ನೀನು ಹಾಗೆ ಮಾಡುತ್ತಿ, ಪಾಪ, ಹಾಗೆ ಮಾಡಬೇಡ' ಎಂದು ರಾಕ್ಷಸಿಯರು ಬೋಧನೆ ಮಾಡಿದಾಗ, ಮನುಷ್ಯ ರಾಕ್ಷಸ ಸಂಬಂಧ ವಿಚಾರ ಬಂದಾಗ, ಮನುಷ್ಯಳು ರಾಕ್ಷಸನ ಹೆಂಡತಿಯಾಗುವುದುಂಟೆ ಎಂದು ಪ್ರತಿಯಾಗಿ ಸೀತೆ ಹೇಳುತ್ತಾಳೆ, ಹೊರತು, ಆಕೆ ಮನುಷ್ಯ ರಾಕ್ಷಸರೊಳಗೆ ಯಾರಾದರೊಬ್ಬರನ್ನು ಸ್ವೀಕರಿಸುವ ಸಂದರ್ಭ ವಿದ್ದು ರಾಕ್ಷಸನನ್ನು ನಿರಾಕರಿಸಿಲ್ಲ. ಮಾತ್ರವಲ್ಲ; ಆರ್ಯನಲ್ಲವೆಂದೂ ನಿರಾಕರಿಸಿದ್ದಲ್ಲ, ಮನುಷ್ಯನಲ್ಲವೆಂದು.

ರಾಮನನ್ನು ಬಿಡದಿರಲು ಕಾರಣ ಹೇಳುತ್ತಾಳೆ ಸೀತೆ—'ನನ್ನ ಪತಿ ದುರ್ಬಲನಿರಲಿ ರಾಜ್ಯಭ್ರಷ್ಟನೆ ಇರಲಿ ನನಗೆ ಅವನೆ ಗತಿ' (ಸುಂ. 24-9) ಆಗ ತಿರುಗಿ, ರಾಕ್ಷಸಿಯರು ಸೀತೆಯನ್ನು ತಿಂದುಹಾಕುವೆವೆಂದು ಬೆದರಿಕೆ ಯೊಡ್ಡಿ ತಮ್ಮ ರಾಕ್ಷಸ ಸ್ವಭಾವ ಪ್ರದರ್ಶನಕ್ಕೆ ಉದ್ಯುಕ್ತರಾದಾಗ ಸೀತೆ ನಿಶ್ಚಯವಾಗಿ ಹೇಳುತ್ತಾಳೆ—'ಅಬ್ಬ ! ಇಂಥ ರಾಕ್ಷಸ ಜಾತಿಯೊಡನೆ

ಮನುಷ್ಯಳು ಸರ್ವಥಾ ಸಂಬಂಧ ಬೆಳೆಸಲಾರಳು' ಎಂದು. ಇದೊಂದು, ಸೀತಾ ರಾವಣರ ವೈಯಕ್ತಿಕ ವಿಚಾರವಾಯಿತು. ಇದನ್ನು ಆರ್ಯ ದ್ರಾವಿಡ ಜನಾಂಗ ಭೇದ ವೈಷಮ್ಯದ ಹೆಸರಿನಲ್ಲಿ ಕರೆಯುವುದು ಸಮರ್ಥನೀಯವಾಗಲಾರದು.

'ರಾವಣ ಸೀತೆಯನ್ನು ಬಲಾತ್ಕರಿಸುವಲ್ಲಿ ಲಕ್ಷ್ಮಣನ ಬಗ್ಗೆ ತೋರಿಸಿದ ಕೋಪ ಕ್ರೌರ್ಯಗಳಾವುವನ್ನೂ ತೋರ್ಗೊಡುವುದಿಲ್ಲ, ಬಯ್ಯುವುದಾಗಲಿ ಶಪಿಸುವುದಾಗಲಿ, ಮಾಡದೆ ಕೊರಗುತ್ತಾಳೆ, ಅಳುತ್ತಾಳೆ'

—ಈ ಮಾತೂ ಲಕ್ಷ್ಮಣ ರಾವಣರೊಳಗಿನ ವ್ಯತ್ಯಾಸವನ್ನು ಮುಚ್ಚಿಟ್ಟು ಹೇಳಿದ್ದೆನ್ನಬೇಕು. ರಾವಣ ಶಾಪಭಯದಿಂದ ಸೀತೆಯನ್ನು ಬಲಾತ್ಕರಿಸುವಂತಿಲ್ಲ ಎಂಬುದು ಸೀತೆಗೆ ತಿಳಿಯದಿರಲಾರದು. ಏಕೆಂದರೆ ರಾವಣನ ಪರಾಕ್ರಮ, ಆವನು ಮಾಡಿದ ಅತ್ಯಾಚಾರಗಳು, ಅವನು ಪಡೆದ ವರಗಳು ಶಾಪಗಳು ಜಗತ್ಪ್ರಸಿದ್ಧವೆ ಆಗಿದ್ದುವು. ಯಾರಾದರೂ ಗೊತ್ತಿಲ್ಲವೆಂದರೆ ಅವರು ಬುದ್ಧಿಹೀನರು ಎಂದು ಅನ್ನಿಸಿಕೊಳ್ಳುವಷ್ಟು ಪ್ರಸಿದ್ಧವಾಗಿದ್ದುವು, ರಾವಣ ಸೀತೆಗೆ ಹೇಳುತ್ತಾನೆ, 'ನನ್ನ ವೀರ್ಯ ಪರಾಕ್ರಮಗಳನ್ನು ಬುದ್ಧಿಗೇಡಿ ನೀನು ಕೇಳಿಲ್ಲವೆಂದು ಕಾಣುತ್ತದೆ' (ಅರ. 49–2) ರಾವಣ ಬಲಾತ್ಕಾರ ಮಾಡದೆ ಸೀತೆಯ ಕಾಲಿಗೆ ಬೀಳುವುದರಿಂದಲೂ ಇದು ಸ್ಪಷ್ಟವಾಗುತ್ತದೆ (ಅರ. 55-35) ಸೀತೆ ರಾವಣನ ಮುಂದೆ ಮಾತನಾಡುವಾಗ 'ನಿರ್ಭಯ'ಳಾಗಿದ್ದಳಂತೆ (ಅರ. 56-1) ಆದ್ದರಿಂದ ರಾವಣ ಸೀತೆಯನ್ನು ಅಪಹರಿಸುವಾಗ ಆಕೆ ಕೋಪಕ್ರೌರ್ಯಗಳನ್ನು ತೋರದೆ ಕೇವಲ ದುಃಖದಿಂದ ಅಳುತ್ತಿದ್ದಳು, ತನ್ನ ಪಾತಿವ್ರತ್ಯಕ್ಕೆ ಭಂಗವಾದೀತೆಂದಲ್ಲ. ರಾಮನ ವಿರಹ ಉಂಟಾಗುತ್ತದೆ ಎಂದು (ಅರ. 56-13) ಲಕ್ಷ್ಮಣನ ವಿಷಯದಲ್ಲಿ ಕೋಪಕ್ರೌರ್ಯಗಳನ್ನು ತೋರುವುದು, ರಾಮನಿಗೆ ಪ್ರಾಣಾಪಾಯ ಭಯ ಇದ್ದಾಗಲೂ ಲಕ್ಷ್ಮಣ ರಕ್ಷಣೆಗೆ ತಾನಾಗಿ ಹೋಗದಿದ್ದುದು ಮಾತ್ರವಲ್ಲ, ಸೀತೆ ಆಗ್ರಹಪಡಿಸಿದರೂ ಹೋಗುತ್ತಿಲ್ಲ' ಎಂದು.

'ಸೀತೆ ರಾವಣನನ್ನು ಬಯ್ಯುವುದಾಗಲಿ ಶಪಿಸುವುದಾಗಲಿ ಮಾಡದೆ ಅಳುತ್ತಾಳೆ' ಎಂಬುದು ಸುಳ್ಳು, ಲಕ್ಷ್ಮಣನನ್ನು ಅಯೋಗ್ಯ ನಿಷ್ಕರುಣಿ ಘಾತಕಿ ಕುಲಘಾತಕಿ ಎಂದೆಲ್ಲ ಬಯ್ದಂತೆಯೆ ರಾವಣನನ್ನೂ ಒಂದು ಸರ್ಗ

ಪ್ರೂರ್ತಿ (ಅರ. 53) ನೀಚ ಅಧಮ ನಾಚಿಕೆ ಇಲ್ಲದವನೆನ್ನುತ್ತಾ ಧಿಕ್ಕಾರ ಹಾಕು ತ್ತಾಳೆ. ರಾಮನಿಂದ ನಿನಗೆ ಕಷ್ಟ ಬರಲಿ (ಅರ. 49-28) ಎಂದೂ, ಯುದ್ಧ ದಲ್ಲಿ ರಾಮ ಬಾಣಗಳಿಂದ ನಿನ್ನ ಮೈಯಲ್ಲಿರುವ ಅಹಂಕಾರ ಬಲ ಪರಾಕ್ರಮ ಔದ್ಧತ್ಯಗಳನ್ನೆಲ್ಲ ಹೊರಹಾಕಲಿ (ಅರ. 56-55) ಎಂದೂ ಶಪಿಸುತ್ತಾಳೆ. ಶಾಪದಿಂದ ತಕ್ಷಣವೆ ಏಕೆ ಭಸ್ಮಮಾಡಲಿಲ್ಲ ಎಂದರೆ ಅದು ರಾಮನಿಗೆ ಸಮ್ಮತ ವಲ್ಲ ಮತ್ತು ತಪಃಶಕ್ತಿ ವ್ಯರ್ಥವಾದೀತೆಂಬ ಭಯ (ಸುಂ. 22-20) ಎಂದು ಸೀತೆಯೆ ಹೇಳುತ್ತಾಳೆ.

'ಸೀತೆ ರಾವಣನನ್ನು ಶಾಪದಿಂದ ಭಸ್ಮಮಾಡುತ್ತಿಲ್ಲ' 'ಆದ್ದರಿಂದ ಆಕೆ ರಾವಣನ ಅನುಗ್ರಹ ಸ್ಪರ್ಶವನ್ನು ಬಯಸುತ್ತಿದ್ದಾಳೆ' ಎನ್ನುವುದು ಪರಸ್ಪರ ವಿರುದ್ಧ. ರಾವಣನನ್ನು ಸೀತೆ ನಿಜವಾಗಿಯೂ ಬಯಸುತ್ತಿದ್ದರೆ, ಅದು ವ್ಯಭಿ ಚಾರವಾಗುವುದರಿಂದ ಅವಳಲ್ಲಿ ತಪಃಶಕ್ತಿ ಎಲ್ಲಿ ಇದ್ದೀತು ? ಆದ್ದರಿಂದ ತಪಃಶಕ್ತಿಯ ಬಲದಿಂದ ಶಾಪ ಕೊಡುವ ಪ್ರಸಕ್ತಿಯೆ ಇಲ್ಲ.

'ತಪಃಶಕ್ತಿ' ಎಂಬುದೆ ಸುಳ್ಳು ಎನ್ನುವುದಾದರೆ ಸೀತೆ ತಪಃಶಕ್ತಿ ವ್ಯರ್ಥ ವಾದೀತೆಂದು ಭಯಪಡುವುದು ಅರ್ಥಶೂನ್ಯವಾದೀತು. ಸೀತೆಗೆ ತಾನು ತಪಃ ಶಕ್ತಿಯಿಂದ ರಾವಣನನ್ನು ಸುಡಬಲ್ಲೆನೆಂಬ ನಂಬಿಕೆ ಇತ್ತು ಎಂಬುದು ಮೇಲಿನ ಮಾತಿನಿಂದಲೆ (ಸುಂ. 22-20) ಸ್ಪಷ್ಟ. ರಾವಣನನ್ನು ಸುಟ್ಟರೆ ತಪಃಶಕ್ತಿ ನಶಿಸುವುದೆಂಬ ಭಯ ಉಳ್ಳವಳು, ಅಂಥ ತಪಃಶಕ್ತಿ ತನ್ನಲ್ಲಿ ಇದೆ ಎಂದು ವಿಶ್ವಾಸ ಉಳ್ಳವಳು ಸೀತೆ ಎಂದ ಮೇಲೆ ರಾವಣನನ್ನು ಆಕೆ ಬಯಸುವುದು ಶಕ್ಯವೆ ?. ಬಯಸಿದರೆ, ತಪಃಶಕ್ತಿ ತಾನಾಗಿ ಸೋರಿ ಹೋಗಲಾರದೆ ? ರಾಮನ ಅನುಮತಿಗೆ ಕಾಯುವುದಕ್ಕೂ ಏನು ಅರ್ಥವಿದ್ದೀತು ? ಆದ್ದರಿಂದ ಸೀತೆಗೆ ತನ್ನಲ್ಲಿ ತಪಃಶಕ್ತಿ ಇದೆ ಎಂಬ ನಂಬಿಕೆ ಇದೆ ಎನ್ನುವುದರಿಂದಲೆ ಆಕೆ ರಾವಣ ನನ್ನು ಕನಸಿನಲ್ಲೂ ಬಯಸುವುದು ಅಶಕ್ಯವೆಂದು ಸಿದ್ಧವಾಗುತ್ತದೆ.

ಸೀತೆ ರಾವಣನ ಕೈಯಲ್ಲಿ 'ಲೈಂಗಿಕ ದುರಾಕ್ರಮಣ'ವನ್ನು—ಮೊದಲಿಗೆ ಅಂಗಾಂಗಗಳ ವರ್ಣನೆ, ಬಳಿಕ ಬಲಾತ್ಕಾರದಿಂದ ಕೂದಲು ತೊಡೆಗಳಿಗೆ ಕೈಹಾಕಿ ಎತ್ತಿಕೊಂಡು ತೊಡೆಯ ಮೇಲಿಟ್ಟುಕೊಂಡು ಲಂಕೆಗೆ ಹಾರುವುದು— ಇಂಥ ಅತ್ಯಾಚಾರವನ್ನು ಅನುಭವಿಸಿಯೂ ತಾನಿನ್ನೂ ಸತಿಯೆ ಆಗಿದ್ದೇನೆ,

ತನ್ನ ತಪಃಶಕ್ತಿ ಇನ್ನೂ ಜ್ವಲಿಸುತ್ತಲೆ ಇದೆ, ರಾವಣನನ್ನು ಶಾಪದಿಂದ ಸುಟ್ಟು ಬಿಡಬಲ್ಲೆ ಎಂಬ ಆತ್ಮ ವಿಶ್ವಾಸ ಹೊಂದಿದ್ದಾಳೆ ಎಂಬುದೊಂದೆ ನಿದರ್ಶನ ಸಾಕು, ಸೀತೆ ರಾವಣನನ್ನು ಬಯಸದೆ ಪರಿಶುದ್ಧಳಾಗಿಯೆ ಇದ್ದಾಳೆ ಎನ್ನಲು. ಇಂಗಿತದಲ್ಲಿ ಪರಪುರುಷನನ್ನು ಬಯಸಿ ಮಾತಿನಲ್ಲಿ ತಾನು ಅವನನ್ನು ತಪಃಶಕ್ತಿ ಯಿಂದ ಸುಡಬಲ್ಲೆನೆನ್ನುವುದು ಆತ್ಮವಂಚನೆಯಾದೀತು. ಬಲಾತ್ಕಾರದಿಂದಾಗಿ ನನ್ನ ಮೈ ರಾವಣನನ್ನು ಸ್ಪರ್ಶಿಸಿದ್ದರೂ ಮನಸ್ಸು ಇನ್ನೂ ಶುದ್ಧವೆ ಇದೆ ಎಂದು ಸೀತೆ ಹೇಳುತ್ತಲೆ ಅಗ್ನಿ ಪರೀಕ್ಷೆಯಲ್ಲಿ ಗೆದ್ದು ಬಂದಳು.

'ದ್ರೌಪದಿಯ ಮುಡಿಗೆ ಕೈ ಹಾಕಿದ ಮಾತ್ರಕ್ಕೆ ಕೌರವರು ಮೃತ್ಯು ತಂದು ಕೊಂಡರು. ರಾವಣ ಸೀತೆಯ ದೇಹ ಗುಹ್ಯಭಾಗವಾದ ತೊಡೆಯ ಹಿಂಭಾಗವನ್ನು ತುಡುಕು ವುದು ತೊಡೆ ಏರಿಸಿಕೊಳ್ಳುವುದು ಪ್ರಖರವಾದ ಲೈಂಗಿಕ ಕ್ರಿಯೆಗಳು ಅವಳಿಗೆ ಏನೂ ಅಲ್ಲ'

—ಈ ಮಾತು ಅರ್ಥವಿಲ್ಲದ್ದು. ದ್ರೌಪದಿಯ ಮುಡಿಗೆ ಕೈಹಾಕಿದುದು ಲೈಂಗಿಕ ಕ್ರಿಯೆ ಎಂದು ಕೌರವರಿಗೆ ಮೃತ್ಯು ತಂದಿಲ್ಲ, ಪಾಂಡವರ ರಾಣಿಯಾದವಳನ್ನು ತುಂಬಿದ ಸಭೆಯಲ್ಲಿ ದಾಸಿ ಎಂದು ಅಪಮಾನ ಮಾಡಿದರೆಂದು. ಸೀತೆಯ ವಿಷಯದಲ್ಲಿಯೂ ರಾವಣನದು ಲೈಂಗಿಕ ಕ್ರಿಯೆಯಾಗಿರುತ್ತಿದ್ದರೆ ಶಾಪದಿಂದ ತಕ್ಷಣದಲ್ಲಿ ಸಾಯುತ್ತಿದ್ದ. ಆದ್ದರಿಂದ ಇದು ಕೇವಲ ದೈಹಿಕ ಬಲಾತ್ಕಾರವೆ ಹೊರತು ಇದರಲ್ಲಿ ಲೈಂಗಿಕತೆಯ ಲವಲೇಶವಿಲ್ಲ.

ದ್ರೌಪದಿಯ ಮುಡಿಗೆ ಕೌರವರು ಲೈಂಗಿಕವಾಗಿ ತುಡುಕಿದ್ದರೆ ದ್ರೌಪದಿ ಆಗಲೆ ಏಕೆ ಶಪಿಸಿ ಸುಡಲಿಲ್ಲ ? ಹಾಗೆಯೆ ಸೀತೆಯೂ ರಾವಣನನ್ನು ಸುಡಲಿಲ್ಲ ಎನ್ನಲೂ ಬರುತ್ತದೆ.

ದ್ರೌಪದಿಯ ಮುಡಿಯನ್ನು ತುಡುಕಿದ ಕೌರವರು ಭೀಮನ ಗದೆ ಏಟಿಗೆ ರಣರಂಗದಲ್ಲಿ ಬಿದ್ದು ಹೊರಳಾಡಿದರೆ ಹೊರತು ದ್ರೌಪದಿಯ ಶಾಪಕ್ಕೆ ಉರಿದು ಬೀಳಲಿಲ್ಲ. ಶಾಪಕೊಟ್ಟರೂ ಸ್ಥಳದಲ್ಲೆ ಬೂದಿಯಾಗಬೇಕೆಂದು ಶಾಪ ಕೊಡಲಿಲ್ಲ, ಭೀಮನ ಗದೆಗೆ ತುತ್ತಾಗಬೇಕೆಂದೆ ಶಪಿಸಿದಳು ದ್ರೌಪದಿ. ಹಾಗೆಯೆ ಸೀತೆಯ ಮೈಯನ್ನು ತುಡುಕಿದ ರಾವಣನಿಗೂ ಪರಿವಾರ ಸಮೇತನಾಗಿ ರಣರಂಗದಲ್ಲಿ ರಾಮನ ಬಾಣಗಳಿಗೆ ಆಹುತಿಯಾಗೆಂದೆ ಶಪಿಸಿದಳು ಸೀತೆ (ಅರ. 49–28) ಶಾಪದಿಂದ ಸುಟ್ಟಿದ್ದರೆ ಅದು ಆತನಿಗೆ ಅತ್ಯಲ್ಪ ಶಿಕ್ಷೆಯಾಗು

ತ್ತಿತ್ತು, ತನ್ನ ರಾಮನಿಂದಲೆ ಅವನಿಗೆ ಮಹಾಶಿಕ್ಷೆ ಕೊಡಿಸಬೇಕೆಂಬ ಛಲ ಅವಳದು.

ಹಿಂದೆ ವೇದವತಿಯಾಗಿ ಹುಟ್ಟಿದವಳು ಈ ಛಲ ತೊಟ್ಟೇ ಅಗ್ನಿಪ್ರವೇಶ ಮಾಡಿದ್ದಳು, ಈಗ ಸೀತೆಯಾಗಿ ಛಲವನ್ನು ತೀರಿಸಿಕೊಳ್ಳುತ್ತಿದ್ದಾಳೆ.

ಸೀತೆಗೆ ತಾನು ರಾವಣನ ಕೈಯಿಂದ ಪಾರಾದರೆ ಮಾತ್ರ ಸಾಕೆಂದಿದ್ದರೆ ಸುಲಭೋಪಾಯವಿತ್ತು. ಹನುಮಂತ ಪರಿಪರಿಯಿಂದ ಬೇಡಿಕೊಂಡ. 'ನನ್ನ ಹೆಗಲೇರಿ ಲಂಕೆಯಿಂದ ಹಾರಿ ರಾಮನ ಬಳಿಗೆ ಹೋಗು' ಎಂದು. ಆದರೆ ಸೀತೆ ಹೇಳಿದಳು, 'ಸಮಸ್ತ ಸೈನ್ಯ ಸಮೇತನಾಗಿ ರಾಮ ಬಂದು ರಾವಣನನ್ನು ಗೆದ್ದು ವಿಜಯಿಯಾಗಿ ನನ್ನನ್ನು ಅಯೋಧ್ಯೆಗೆ ಕರೆದೊಯ್ಯಬೇಕು. ಆಗ ಅದು ರಾಮನಿಗೆ ಒಪ್ಪುತ್ತದೆ.'

'ರಾಮನಿಗೆ' ಎನ್ನುತ್ತಿದ್ದಾಳೆ, ಭಕ್ತಿಯಿಂದ ವಸ್ತುತಃ ತನಗೂ ಅದು ಹೆಮ್ಮೆಯ ಸಂಗತಿಯಾಗುತ್ತದೆ ಎಂದು ಸೀತೆ ತಿಳಿದಿದ್ದಾಳೆ. ಮದುವೆಯಾಗಿ ಒಬ್ಬ ಶೂರನಾದ ಪತಿಯನ್ನು ಹೊಂದಿರುವಾಗ ತನ್ನಲ್ಲಿ ಅಪರಾಧ ಮಾಡಿದವನಿಗೆ ತಾನೆ ಶಿಕ್ಷೆ ಮಾಡಬೇಕಾಗಿ ಬಂದರೆ ಅದು ತನಗೇ ಅವಮಾನ, ವೀರ ಕ್ಷತ್ರಿಯ ರಮಣಿ ಅದನ್ನು ಸರ್ವಥಾ ಸಹಿಸಲಾಳು. ರಾಮನಿಗೂ ಇದೇ ಅಭಿಪ್ರಾಯವಿದ್ದುದರಿಂದ 'ಅವನ ಅನುಮತಿ ಇಲ್ಲ' ಎಂದಳು ಸೀತೆ.

ತಪಃ ಶಕ್ತಿಯನ್ನು ಹಾಳು ಮಾಡಿಕೊಳ್ಳಲಾರೆ ಎಂದೂ ಹೇಳಿದಳು. ಏಕೆಂದರೆ, ರಾಮನ ಅಭಿಪ್ರಾಯಕ್ಕೆ ವಿರುದ್ಧವಾಗಿ, ಅವನ ಪರಾಕ್ರಮ ಕೀರ್ತಿಗಳಿಗೆ ಕಳಂಕ ತರುವಂತೆ ಸೀತೆ ತನ್ನ ತಪಃಶಕ್ತಿಯನ್ನು ಉಪಯೋಗಿಸಿಕೊಂಡರೆ ಅದು ಪಾತಿವ್ರತ್ಯಕ್ಕೆ ಅನುಗುಣವಾಗುವುದಿಲ್ಲ. ಪಾತಿವ್ರತ್ಯಕ್ಕೆ ಭಂಗ ಬಂದಂತಾಗಿ ತಪಃಶಕ್ತಿ ಸ್ವಯಂ ನಶಿಸೀತು ಎಂದುಕೊಂಡಳು.

'ಸೀತೆ ರಾವಣನು ತನ್ನನ್ನು ಹೊತ್ತುಕೊಂಡು ಹೋಗುವಾಗ ಹಾ ಲಕ್ಷ್ಮಣ ಮಹಾಬಾಹು ಎಂದು ಲಕ್ಷ್ಮಣನ ಮಹಾ ಬಾಹುತ್ವವನ್ನು ಸಂಬೋಧಿಸಿ ಕೂಗುತ್ತಾಳೆ ರಾಮನೆನ್ನಾದರೊ ಧರ್ಮರಕ್ಷಕನೆಂದು ನೆನೆದುಕೊಳ್ಳುತ್ತಾಳೆ'

—ಇದೂ ರಾಮಾಯಣ ಕತೆಗೆ ಅನುಸಾರವಾಗಿಲ್ಲ. ರಾವಣನು ಸೀತೆಯನ್ನು ಹಿಡಿದುಕೊಂಡೊಡನೆ ಆಕೆ ಕೂಗಿದ ಮೊದಲ ಕೂಗು 'ರಾಮಾSSSS' ಎಂಬುದು. (ಅರ. 59–21) ಮುಂದೆ ರಾವಣ ಹೊತ್ತುಕೊಂಡು ಹೋಗುವಾಗ ಲಕ್ಷ್ಮಣನನ್ನು ಮೊದಲಿಗೆ ಕೂಗಿದುದು ರಾಮ ಅವನನ್ನು ತನ್ನ ರಕ್ಷಣೆಗೆ ಇರಿಸಿದ್ದರೂ ತಾನು ಅವನನ್ನು ಹೊರಗೆ ಅಟ್ಟಿಬಿಟ್ಟೆನೆಂಬ ಪಶ್ಚಾತ್ತಾಪದಿಂದ. ಬಳಿಕ ರಾಮನನ್ನೆ ಕೂಗುತ್ತಾಳೆ. 'ಪರಂತಪ' ಎಂದು ಸಂಬೋಧಿಸುತ್ತಾಳೆ (ಅರ. 49-26) ಮಹಾಬಾಹು, ಮಹಾಬಲನೆಂದು ಸ್ಮರಿಸಿಕೊಳ್ಳುತ್ತಾಳೆ (ಅರ. 49-35) ಕೇವಲ ಧರ್ಮರಕ್ಷಕನೆಂದಲ್ಲ. ಲಕ್ಷ್ಮಣನನ್ನೇ 'ಗುರುಚಿತ್ತ ಪ್ರಸಾದಕ' ಹಿರಿಯರ ಮನವನ್ನೊಲಿಸಿಕೊಳ್ಳುವವ ಎನ್ನುತ್ತಾಳೆ.

## ಸೀತಾ ರಾವಣ ಜೋಡಿ ?

'ರಾವಣನು ಸೀತೆಯನ್ನು ಎತ್ತಿಕೊಂಡು ಆಕಾಶದಲ್ಲಿ ಹೋಗುವಾಗ ಸೀತಾ ರಾವಣರು ಹೇಗೆ ಅನುರೂಪಿಗಳಾಗಿ ಕಾಣತ್ತಾರೆ ಎನ್ನುವುದನ್ನು ಗಮನಿಸಿ––'ಚಿನ್ನದಂತೆ ಹೊಳೆಯುವ ಜಾನಕಿ ರಾವಣನ ಪಾರ್ಶ್ವದಲ್ಲಿ ಮೋಡದ ಬಳಿಯಲ್ಲಿ ಹೊಳೆಯುವ ಮಿಂಚಿನಂತೆ ಕಾಣಿಸಿದಳು, ಅವಳು ಶಿರದಲ್ಲಿ ಮುಡಿದ ಹೂ ಮಳೆಯಂತೆ ಭೂಮಿಗೆ ಉದುರಿತು. ಅವಳ ಪಾದದಿಂದ ಕಾಲಂದಿಗೆ ಕಳಚಿ ಮಿಂಚಿನ ಗೊಂಚಲಿನಂತೆ ಬಿದ್ದಿತು. ತನ್ನ ದೇಹ ಕಾಂತಿಯಿಂದ ದೊಡ್ಡ ಉಲ್ಕೆಯಂತೆ ಬೆಳಗುತ್ತಿದ್ದಳು ಸೀತೆ. ಬೆಂಕಿಯಂತೆ ಹೊಳೆಯುತ್ತ ಸೀತೆಯ ಆಭರಣಗಳು ಶಬ್ದ ಮಾಡುತ್ತ ಕ್ಷೀಣ ತಾರೆಗಳಂತೆ ಭೂಮಿಗೆ ಬಿದ್ದುವು ಚಂದ್ರನಂತೆ ಹೊಳೆವ ಮುತ್ತಿನ ಮಾಲೆ ಆಕೆಯ ಎದೆಯಿಂದ ಜಾರಿ ಬೀಳುವಾಗ ಆಕಾಶದಿಂದ ಜಾರಿದ ಆಕಾಶಗಂಗೆಯಂತೆ ಕಂಡುಬಂದಿತು. ಇಲ್ಲಿ ಪ್ರಿಯೆಯೊಬ್ಬಳು ಪ್ರಿಯಕರನ ಪ್ರೇಮಸಮಾಗಮದಲ್ಲಿ ವಿವಸ್ತ್ರಳಾಗುವಂತೆ ತನ್ನ ಮುಡಿಯ ಹೂ ಮೈಯ ಆಭರಣಗಳನ್ನು ಒಂದೊಂದಾಗಿ ಕಳಚಿಕೊಳ್ಳುವಂತೆ ಧ್ವನಿಸುತ್ತದೆ.' ಈ ಸಂದರ್ಭವನ್ನು ಸೀತಾಪಹರಣವೆಂದು ಅರಿಯದಿದ್ದಿದ್ದರೆ ಇದೊಂದು ವಿಶಿಷ್ಟ ಶೃಂಗಾರ ಸನ್ನಿವೇಶವೆಂದು ಸಾರುತ್ತಿದ್ದೆವು.'

—ಇದು ನ್ಯಾಯವಾದ ವಿಮರ್ಶೆಯಾಗುವುದಿಲ್ಲ. ಕವಿ ಇಲ್ಲಿ ಸೀತೆಯ ಮುಡಿಯ ಹೂ ಮತ್ತು ಮೈಯ ಆಭರಣಗಳನ್ನು ಅವು ಉದುರುತ್ತಿರುವಂತೆ

ಮಾತ್ರ ವರ್ಣಿಸಿದ್ದರೆ ಮೇಲಿನಂತೆ ಧ್ವನಿಸೂಚನೆಯನ್ನು ತೆಗೆದುಕೊಳ್ಳ ಬಹುದಿತ್ತೇನೋ. ಆದರೆ ಹೂಗಳು ನೂಪುರರತ್ನಮಾಲೆಗಳು ಬೀಳುವುದನ್ನು ಅನೇಕ ರೂಪಕಗಳಿಂದ ವರ್ಣಿಸಿ ಭವ್ಯವಾದ ಒಂದು ರೂಪಕ ಮಾಲೆಯನ್ನೆ ಕವಿ ನಿರ್ಮಿಸಿದ್ದಾನೆ. ಮೊದಲಿಗೆ ರಾವಣಸೀತೆಯರು ಕರಿಯ ಮೋಡಮಿಂಚು ಗಳಂತೆ ಹೊಳೆದರು ಎಂಬ ರೂಪಕ ಅಥವಾ ಉಪಮೆ. ಇದು ಅಷ್ಟರಲ್ಲೆ ನಿಲ್ಲುವುದಿಲ್ಲ. ಮೋಡ ಮಿಂಚುಗಳು ಮಳೆ ಗುಡುಗು ಬಿರುಗಾಳಿಗಳಿಗೆ ಕಾರಣ ವಾಗುತ್ತವೆ ತಾನೆ? ಆದ್ದರಿಂದ ಹೂವಿನ ಮಳೆ ಬಿದ್ದಿತು, ಆ ಮಳೆಯ ಜೊತೆಗೆ ಅದನ್ನೆ ದೂರಕ್ಕೆ ಹಾರಿಸುವಷ್ಟು ವೇಗದ ಬಿರುಗಾಳಿ. ಸೀತೆಯ ಮುಖ ಹಗಲಿನ ಚಂದ್ರನಂತೆ ನಿಸ್ತೇಜವಾಗಿತ್ತು. ಕತ್ತಲು ಹರಡಿತ್ತು (ಅರ. 52–9) ಆಭರಣಗಳ ಧ್ವನಿಯ ಗುಡುಗು ಕೇಳಿ ಬರುತ್ತಿತ್ತು. ಹೀಗೆ ಗುಡುಗು, ಭಯಂಕರ ಬಿರುಗಾಳಿಗಳಿಂದ ಕೂಡಿದ ಮಳೆಯ ನಡುವೆ ಸೀತೆ ಮಹಾ ಉಲ್ಕೆಯಂತೆ ಹೊಳೆಯುತ್ತಾಳೆ. ಉಲ್ಕಾಪಾತದಂತೆ ಆಭರಣಗಳೂ ಬೀಳುತ್ತವೆ. ನೂಪುರಗಳು ಮಿಂಚಿನ ಗೊಂಚಲು ಬಿದ್ದಂತೆ ಬೀಳುತ್ತವೆ, ಅಂದರೆ ನೆಲಕ್ಕೆ ಸಿಡಿಲಿನ ಆಘಾತ ಉಂಟಾಗುತ್ತದೆ, ಮುತ್ತಿನ ಹಾರದ ರೂಪ ದಲ್ಲಿ ಆಕಾಶಗಂಗೆಯೆ ಜಾರಿ ಭೂಮಿಗೆ ಬೀಳುತ್ತದೆ–ಓದುಗನ ಎದೆ ಹೊಡೆದು ಕೊಳ್ಳುವಂತೆ ಮಾಡುವ ಭಯಂಕರ ಸೃಷ್ಟಿ ಪ್ರಕೋಪ ವರ್ಣನೆ ಇದು! ಮುಂದೆ 'ಉತ್ಪಾತ'ದ ಬಿರುಗಾಳಿಯ ಹೊಡೆತಕ್ಕೆ ಸಿಲುಕಿ ಮರಗಳ ಕೊಂಬೆ ಗಳು ಬೀಸಿ 'ಸೀತೆ, ಭಯ ಪಡಬೇಡ' ಎನ್ನುವಂತೆ ಕಂಡುವು. ಕೊಳಗಳಲ್ಲಿ ತಾವರೆಗಳು ಕೆಟ್ಟುವು, ಮೀನುಗಳು ಬೆದರಿದುವು, ಸಖಿಯಾದ ಸೀತೆಗೆ ದುಃಖ ವೆಂದು ಕೊಳಗಳು ಶೋಕಿಸುವಂತೆ ಕಂಡುವು, ಪ್ರಕೃತಿ ಇಡೀ ಸೀತೆಯ ದುಃಖದಲ್ಲಿ ಸಮಭಾಗಿಯಾಗಿತ್ತು...ಇದನ್ನು ಶೋಭಾಯಮಾನವಾದ ವಿಶಿಷ್ಟ ಶೃಂಗಾರ ಸನ್ನಿವೇಶವೆನ್ನಬಹುದೆ?

ಈ ವರ್ಣನೆಗೆ ಪ್ರಾರಂಭದಲ್ಲಿಯೆ 'ಸೀತೆಯ ಮುಖ ರಾವಣನ ಬಳಿಯಲ್ಲಿ ನಾಳದಿಂದ ಕಿತ್ತೆಸೆದ ಕಮಲದಂತೆ ಬಾಡಿಹೋಗಿತ್ತು, ಅತ್ತೂ ಅತ್ತೂ, ರಾಮನಿಲ್ಲದೆ ಹಗಲಿನ ಚಂದ್ರನಂತೆ ಕಾಣುತ್ತಿತ್ತು,' ಎಂಬ ವರ್ಣನೆ. ಕೊನೆಯಲ್ಲಿ 'ಉತ್ಪಾತ'ದ ಬಿರುಗಾಳಿ, ಕೊಳಗಳ ನಾಶ. ನಡುವೆ ಗುಡುಗು, ಮಿಂಚು ಬಿರುಗಾಳಿಗಳ ಸಹಿತವಾಗಿ ಧಾರಾವೃಷ್ಟಿಯ ಜೊತೆಗೆ ಉಲ್ಕಾಪಾತ,

ಆಕಾಶಗಂಗೆಯ ಪತನ–ಇವೆಲ್ಲ ರತಿ ಸಮಾಗಮದ ಸಂಭ್ರಮವೆ ಅಥವಾ ರಾವಣನ ಬಾಳಿನಾಕಾಶದಲ್ಲಿ ವಿಜೃಂಭಿಸಿದ ಭೀಕರ ಉತ್ಪಾತದ ಅತಿವೃಷ್ಟಿಯೆ ಎನ್ನುವುದನ್ನು ಸಹೃದಯರೆ ಹೇಳಬೇಕು.

ಸೀತಾಪಹರಣದಂಥ ಗಂಭೀರ ಸನ್ನಿವೇಶದಲ್ಲಿ ರತಿ ಸಮಾಗಮವನ್ನು ಚಿತ್ರಿಸಬೇಕಾದರೆ ಕವಿಗೆ ಸಮಯದ ಔಚಿತ್ಯ ಪ್ರಜ್ಞೆ ಇಲ್ಲವೆನ್ನಬೇಕಾದೀತು. ವಾಗರ್ಥಗಳ ಸಂಪೃಕ್ತತೆಯನ್ನರಿಯದ ಕುಕವಿ ಎಂದು ಆತನನ್ನು ಕರೆಯಬೇಕಾದೀತು.

'ರಾಮನ ಹೊರತು ಇನ್ನೊಬ್ಬನ ಶರೀರವನ್ನು ನಾನು ಮುಟ್ಟುವುದಿಲ್ಲ. ರಾವಣನ ಬಲಾತ್ಕಾರದಿಂದ ನನಗೆ ಅವನ ಮೈಯ ಸ್ಪರ್ಶವಾಗಿದ್ದರೆ ನಾನೇನು ಮಾಡಲಿ? ನಾನಾಗ ಅಸ್ವತಂತ್ರಳಾಗಿದ್ದೆ.' ಎಂದು ಹನುಮಂತನ ಹೆಗಲ ಮೇಲೆ ಏರಲು ಸೀತೆ ನಿರಾಕರಿಸುತ್ತಾಳೆ. ಹೀಗೆ ಮನಃಪೂರ್ವಕವಾಗಿ ಪರ ಪುರುಷನ ಶರೀರ ಸ್ಪರ್ಶವನ್ನು ಎಂದೂ ಮಾಡದ ಸೀತೆ, ರಾವಣ ಬಲಾತ್ಕಾರದಿಂದ ಎತ್ತಿಕೊಂಡು ಹೋಗುವಾಗ ಅನಿವಾರ್ಯವಾಗಿ ಉಂಟಾದ ಸ್ಪರ್ಶವನ್ನು ಗುಪ್ತವಾಗಿ ಅನುಭವಿಸುವ ಸಾಧ್ಯತೆಯೆ ಇಲ್ಲ. ವಾಸ್ತವವಾಗಿ ದ್ವೇಷಿಸುತ್ತಿದ್ದಳು—'ತಾಮಕಾಮಾಂ ಸ ಕಾಮಾರ್ತಃ....' (ಅರ. 49–22)

ಹಾಗಾದರೆ ಶಾಪ ಕೊಡಬಹುದಿತ್ತಲ್ಲ! ಎಂಬ ಪ್ರಶ್ನೆಗೆ ಹಿಂದೆಯೆ ಉತ್ತರ ಕೊಡಲಾಗಿದೆ.

## ಹಾವಿನ ಸಂಕೇತ

'ರಾವಣ ಸೀತೆಯನ್ನು ಕಾಮಾರ್ತನಾಗಿ ಹಿಡಿದೆಳೆದಾಡಿದ ಸಂದರ್ಭದಲ್ಲಿ ಸೀತೆಯ ಪ್ರತಿಕ್ರಿಯೆಯ ರೀತಿ—

ತಾಮಕಾಮಾಂ ಸ ಕಾಮಾರ್ತಃ ಪನ್ನಗೇಂದ್ರ ವಧೂಮಿವ ।
ವಿವೇಷ್ಟಮಾನಾಮಾದಾಯ ಉತ್ಪಪಾತಾಥ ರಾವಣಃ ॥
(ಅರ. 49-22)

'ನಿಷ್ಕಾಮಳಾದ ಸೀತೆಯು ಹೆಣ್ಣು ಸರ್ಪದಂತೆ ಹೊರಳಾಡುತ್ತಿರಲು ಕಾಮಾರ್ತನಾದ ರಾವಣನು ಅವಳನ್ನು ಹೊತ್ತು ಗಗನವನ್ನು ಅಡರಿದನು'—ಇದು ನಿರ್ವಿಕಾರವಾದ ವಸ್ತು

ನಿಷ್ಠುರತೆಯ ಭಾಷಾಂತರವಲ್ಲ. ಆದಷ್ಟು ಪ್ರಾಮಾಣಿಕವಾದ ಭಾಷಾಂತರ ಹೀಗೆ ಮಾಡ ಬಹುದೆನ್ನಿಸುತ್ತದೆ—'ಅಕಾಮಳಾದ ಸೀತೆಯು ಪನ್ನಗೇಂದ್ರನ ಅಂದರೆ ಆದಿಶೇಷನ ವಧುವಿ ನಂತೆ ಸುತ್ತಿಕೊಳ್ಳುತ್ತಿರಲು ಕಾಮಾರ್ತನಾದ ರಾವಣನು ಅವಳನ್ನು ಹೊಂದಿ ಎಗರಿದನು.' ಇಲ್ಲಿ ವಿವೇಷ್ಟ ಎನ್ನುವ ಪದದ ಅರ್ಥ ಸುತ್ತುವರಿ, ಸುತ್ತಿಕೊಳ್ಳು, ತಳಕು ಹಾಕಿಕೊ ಎಂಬುದು. ಹೊರಳಾಡು ಎಂದಲ್ಲ. ಹೊರಳಾಡು ಎನ್ನುವುದಕ್ಕೆ ಸರಿಯಾದ ಪದ ವಿವರ್ತ ಎನ್ನುವುದು. ಇಲ್ಲಿಯ ಕ್ರಿಯೆ ಬಹಳ ಧ್ವನಿಗರ್ಭಿತವಾದ ಹಾವು ಸುತ್ತಿಕೊಳ್ಳುವ ಪ್ರಸಂಗ. ಇದನ್ನು ಸಮರ್ಥಿಸಲು ಅಲ್ಲಿನ ಪ್ರಾಣಿ ಪನ್ನಗೇಂದ್ರನ ವಧು, ಸರ್ಪದೇವತೆ ವರಿಸಿದ ಕನ್ಯೆ ಕಾಮಸಂದರ್ಭದಲ್ಲಿ ಸುತ್ತಿಕೊಳ್ಳುತ್ತಾಳೆ ಹೊರಳಾಡುವುದಿಲ್ಲ. ಈ ಕಾಮಕ್ರಿಯೆಯನ್ನು ಪುಷ್ಟೀಕರಿಸುವ' ಅಕಾಮ' 'ಕಾಮಾರ್ತ' ಎನ್ನುವ ಕಾಮಪದದ ಎರಡು ಉಪಯೋಗಗಳನ್ನೂ ವಧು ಎನ್ನುವ ಶೃಂಗಾರ ವಿಶಿಷ್ಟತೆಯ ಪದವನ್ನೂ ಪನ್ನಗೇಂದ್ರನ ಹಾವಿನ ಪ್ರಖರವಾದ ಲೈಂಗಿಕ ಸಂಕೇತವನ್ನೂ ಗಮನಿಸಬೇಕಾದ್ದಿದೆ. ವಾಚ್ಯದಲ್ಲಿ ಅಕಾಮಾ ಎಂದಿದ್ದಾಗ್ಯೂ ಆ ಪದ ಆ ಸಂದರ್ಭದ ಕಾಮಾರ್ಥಿಯ ಎದುರಿನಲ್ಲಿ ಅವಳು ವಧುವಾಗಿರುವ ಹೋಲಿಕೆ ಯಲ್ಲಿ ಆ ಹೋಲಿಕೆ ಸೂಚಿಸುವ ಲೈಂಗಿಕ ಸಂಕೇತವಾದ ಪನ್ನಗನಲ್ಲಿ ಅದರಲ್ಲೂ ಇಂದ್ರಿಯ ಸುಖದ ಇಂದ್ರನಲ್ಲಿ ಅದು ಸಕಾಮದ ಆಯಾಮವನ್ನೆ ಪಡೆದುಕೊಳ್ಳುತ್ತದೆ. ಅಕಾಮ ಎಂಬುದು ಐರಾನಿಕ್ ಆಗಿ ಸಕಾಮುವನ್ನೆ ವ್ಯಂಜಿಸುತ್ತದೆ'

—ಇಲ್ಲಿ ಹಾವು ಸುತ್ತಿಕೊಳ್ಳುವ ಪ್ರಸಂಗ 'ಪನ್ನಗೇಂದ್ರ ವಧೂ' ಎಂಬ ಪದದಲ್ಲಿ ಕೇಂದ್ರೀಕೃತವಾಗಿದೆ. ಆದರೆ ಪನ್ನಗೇಂದ್ರನ ವಧುವನ್ನು ರಾವಣ ಹಿಡಿದುಕೊಂಡಿದ್ದಾನೆ, ಅಂದರೆ, 'ಪನ್ನಗೇಂದ್ರ'ಯಾರಿರಬಹುದು ? ಇದರ ಹಿಂದಿನ ಪದ್ಯದಲ್ಲಿಯೆ 'ರಾವಣನು ಹಿಡಿದೆಳೆದಾಗ ಸೀತೆ 'ರಾಮಾऽऽऽ' ಎಂದು ದುಃಖದಿಂದ ಕೂಗಿದಳು,' ಎಂದಿದೆ. ಇಲ್ಲಿ ಒಬ್ಬ ಗಂಡು ಇನ್ನೊಬ್ಬ ಗಂಡಿಗೆ ಸೇರಿದ ಹೆಣ್ಣನ್ನು ಸೆಳೆಯುತ್ತಿದ್ದಾನೆ. ಹೆಣ್ಣು ದುಃಖದಿಂದ ಕೂಗು ತ್ತಿದ್ದಾಳೆ ಎನ್ನುವುದು ಸ್ಪಷ್ಟ. ಪ್ರಕೃತ ಪದ್ಯದಲ್ಲಿ 'ತಾಂ ಅಕಾಮಾಂ' 'ಅಕಾಮಳಾದ ಆ ಸೀತೆಯನ್ನು' ಅಂದರೆ 'ರಾಮಾ' ಎಂದು ದುಃಖದಿಂದ ಕೂಗುತ್ತಿರುವ ಸೀತೆಯನ್ನು ರಾವಣ ಸೆಳೆಯುತ್ತಿದ್ದಾನೆ. ಇದರಿಂದ ಪನ್ನಗೇಂದ್ರನ ವಧುವನ್ನು ,ಅವಳಿಗೆ ಆನಂದ ನೀಡುತ್ತ ಆ ಪನ್ನಗೇಂದ್ರನೆ

ಸೆಳೆಯುತ್ತಿಲ್ಲ, ಇನ್ನೊಬ್ಬ ಗಂಡು ಆ ಹೆಣ್ಣಿಗೆ ದುಃಖ ಕೊಡುತ್ತಾ ಸೆಳೆಯು ತ್ತಿದ್ದಾನೆ ಎಂಬುದು ಸ್ಪಷ್ಟ. ಆಗ ಹೆಣ್ಣು ಏನು ಮಾಡಿಯಾಳು ? ಸುತ್ತಿ ಕೊಳ್ಳುವುದಿಲ್ಲ. ಹೊರಳಾಡುತ್ತಾಳೆ. ಈಗ 'ವಿವೇಷ್ಟಮಾನಾ' ಪದಕ್ಕೆ ಸುತ್ತಿ ಕೊಳ್ಳುವುದು ಎಂಬ ಅರ್ಥ ಹೊಂದಿಕೆಯಾಗುವುದಿಲ್ಲ. ಹೊರಳಾಡುವುದು ಎಂಬ ಅರ್ಥವನ್ನೆ ಹೇಳಬೇಕಾಗುತ್ತದೆ.

'ಹೊರಳಾಡು' ಎನ್ನುವುದಕ್ಕೆ ಸರಿಯಾದ ಪದ 'ವಿವರ್ತ' ಎನ್ನುವುದು ಎಂದ ಮಾತ್ರಕ್ಕೆ 'ವಿವೇಷ್ಟ' ಪದವನ್ನು ಆ ಅರ್ಥದಲ್ಲಿ ಉಪಯೋಗಿಸಬಾರ ದೆಂದಾಗುವುದಿಲ್ಲ. ಅದರಲ್ಲೂ ವಿಶೇಷವಾಗಿ ಋಷಿಗಳಾದ ಕವಿಗಳ ವಿಷಯ ದಲ್ಲಿ, ಮಹಾ ಕವಿಗಳ ವಿಷಯದಲ್ಲಿ ಈ ನಿಯಮಕ್ಕೆ ಬೆಲೆಯೆ ಇಲ್ಲ. ಅವರ ಪ್ರಯೋಗದಿಂದ ಪದಗಳಿಗೆ ನಾವು ಅರ್ಥನಿರ್ಣೈಸಬೇಕೆ ಹೊರತು ನಾವು ತಿಳಿದಿರುವ ಅರ್ಥವನ್ನು ಅವರ ಪ್ರಯೋಗದೊಳಗೆ ತುರುಕಿಸಕೂಡದು. 'ಋಷೀಣಾಂ ಪುನರಾದ್ಯಾನಾಂ ವಾಚಮರ್ಥೋನುಧಾವತಿ!' ಎನ್ನುತ್ತಾನೆ ಭವಭೂತಿ. ಕವಿಗಳು ನಿರಂಕುಶರು ! ಆದ್ದರಿಂದ ವಾಲ್ಮೀಕಿ ಈ ಶ್ಲೋಕದಲ್ಲಿ 'ಸುತ್ತಿಕೊಳ್ಳು' ಎನ್ನುವ ಅರ್ಥದಲ್ಲಿ 'ವಿವೇಷ್ಟ' ಪದವನ್ನು ಪ್ರಯೋಗಿಸಿಲ್ಲ ವೆಂಬುದು ಸಂದರ್ಭದಿಂದ ತಿಳಿದು ಬರುತ್ತಿರುವಾಗ 'ಹೊರಳಾಡು' ಎಂಬ ಅರ್ಥವನ್ನೇ ಆ ಪದಕ್ಕೆ ಸ್ವೀಕರಿಸದೆ ಬೇರೆ ಉಪಾಯವಿಲ್ಲ.

ವಸ್ತುತಃ ಹೊರಳಾಡುವುದೂ ಒಂದು ರೀತಿಯಿಂದ ತನಗೆ ತಾನೇ ಸುತ್ತಿಕೊಳ್ಳುವುದೆ ಆಗಿದೆ. ಆತ್ಮ ಪ್ರದಕ್ಷಿಣೆಯಂತೆ ಇದೂ ಆತ್ಮವೇಷ್ಟನ ಎನ್ನ ಬಹುದು.

ವಿವೇಷ್ಟ ಪದವನ್ನು ವಾಲ್ಮೀಕಿ ಬೇರೆ ಬೇರೆ ಕಡೆ ಹೇಗೆ ಉಪಯೋಗಿ ಸಿದ್ದಾನೆ ಎನ್ನುವದನ್ನು ನೋಡಬೇಕು—

ಕ್ರೌಂಚಪಕ್ಷಿ ನೆತ್ತರಿಂದ ತೊಯ್ದು ನೆಲದಲ್ಲಿ ಹೊರಳಾಡುತ್ತಿತ್ತು.
(ಬಾಲ. 2–11)

ಪುತ್ರಶೋಕದಿಂದ ದಶರಥ ನೆಲದಲ್ಲಿ ಹೊರಳಾಡುತ್ತಿದ್ದ, (ಅಯೋ. 14-1)

ನೆಲದಲ್ಲಿ ಹೊರಳಾಡುತ್ತಿದ್ದ ಕೌಸಲ್ಯೆ ಶೋಭಿಸಲಿಲ್ಲ.
(ಅಯೋ. 65-23)

ಶತ್ರುಘ್ನ ಭರತರು ದುಃಖದಿಂದ ನೆಲದಲ್ಲಿ ಹೊರಳಾಡಿದರು.
(ಅಯೋ. 77-20)

ರಾವಣನ ಅಂತಃಪುರದ ಸ್ತ್ರೀಯರು ಧೂಳಿನಲ್ಲಿ ಹೊರಳಾಡಿದರು.
(ಯು. 110-2)...ಇತ್ಯಾದಿ

ಮೇಲಿನ ಎಲ್ಲ ಸಂದರ್ಭಗಳಲ್ಲಿ 'ವೇಷ್ಟ' ಅಥವಾ 'ವಿವೇಷ್ಟ' ಪದ ಪ್ರಯೋಗವಿದೆ, 'ಸುತ್ತಿಕೊಳ್ಳುವುದು' ಎಂಬ ಅರ್ಥ ಆ ಪದಕ್ಕೆ ಹೊಂದಿಕೆಯಾಗುವುದಿಲ್ಲ, 'ಹೊರಳಾಡುವುದು' ಎಂಬ ಅರ್ಥವೆ ಸರಿ.

ಸುತ್ತಿಕೊಳ್ಳುವುದು ಆಲಿಂಗಿಸುವುದು ಎಂಬ ಅರ್ಥದಲ್ಲಿ ಈ ಕೆಳಗಿನ ಉದಾಹರಣೆಯಲ್ಲಿ ಅಸಂಗತಿಯೂ ಉಂಟಾದೀತು—

ತಾಂ ಲತಾಮಿವ ವೇಷ್ಟಂತೀಂ ಆಲಿಂಗಂತೀಂ ಮಹಾದ್ರುಮಾನ್ ।
ಮುಂಚ ಮುಂಚೇತಿ ಬಹುಶಃ ಪ್ರಾಪ ತಾಂ ರಾಕ್ಷಸಾಧಿಪಃ ॥
(ಅರ. 52-7)

'ಬಿಡು ಬಿಡು ಎಂದು, ಲತೆಯಂತೆ ಹೊರಳಾಡುತ್ತ ದೊಡ್ಡ ಮರಗಳನ್ನು ಆಲಿಂಗಿಸಿಕೊಳ್ಳುತ್ತಾ ಇದ್ದ ಆ ಸೀತೆಯನ್ನು ರಾವಣ ಹಿಡಿದುಕೊಂಡ' ಇಲ್ಲಿ 'ವೇಷ್ಟಂತೀಂ' ಎಂಬ ಪದಕ್ಕೆ ಆಲಿಂಗಿಸುವ ಎಂಬ ಅರ್ಥ ಇಟ್ಟುಕೊಂಡಾಗ 'ಆಲಿಂಗಂತೀಂ' ಎಂಬ ಇನ್ನೊಂದು ಶಬ್ದ ವ್ಯರ್ಥವಾಗುವುದು.

ಪ್ರಕೃತ ಶ್ಲೋಕದಲ್ಲಿ 'ವೀವೇಷ್ಟ' ಎಂದರೆ ಹೊರಳಾಡುವುದು ಎಂದು ಅರ್ಥ ಮಾಡಿದರೂ ಕಾಮುಕಳಾದ ಅಮೃತಮತಿ ಬದಗನ ಚಾವಟಿ ಏಟಿಗೆ ಕೇರೆ ಪೊರಳ್ವಂತೆ ಪೊರಳ್ದಳ್ (ಕಾಮೋನ್ಮಾದದಿಂದ)—

'ಕನ್ಯೆ ಕಾಮ ಸಂದರ್ಭದಲ್ಲಿ ಸುತ್ತಿಕೊಳ್ಳುತ್ತಾಳೆ ಹೊರಳಾಡುವುದಿಲ್ಲ' ಎಂದವರೆ 'ಕಾಮೋನ್ಮಾದದಿಂದ ಹೊರಳಾಡುತ್ತಾಳೆ' ಎಂದೂ ಹೇಳಿದರೆ ಯಾವುದನ್ನು ನಂಬಬೇಕು ? ಯಾವುದನ್ನು ಬಿಡಬೇಕು ?

ಹಾವು ಲೈಂಗಿಕ ಸಂಕೇತವೆನ್ನುವುದು ಅಪ್ಪಟ ಭಾರತೀಯ ಸಂಪ್ರದಾಯ ವಲ್ಲ. ಇತ್ತೀಚೆಗೆ ಪಾಶ್ಚಿಮಾತ್ಯಸಾಹಿತ್ಯದಿಂದ ಆಮದು ಮಾಡಿಕೊಂಡುದುದು.

ವಾಲ್ಮೀಕಿಯಂತೂ ಆ ಸಂಕೇತದಲ್ಲಿ ಹಾವನ್ನು ಎಲ್ಲಿಯೂ ಬಳಸಿ ಕೊಂಡಿಲ್ಲ. ಕೋಪಕ್ಕೆ ರೊಚ್ಚಿಗೆ ಛಲಕ್ಕೆ ಹೆಸರಾದುದು ಹಾವು. ವಿರಾಧನನ್ನು ಕೊಲ್ಲುವಲ್ಲಿ ಲಕ್ಷ್ಮಣ ಹಾವಿನಂತೆ ಫೂತ್ಕರಿಸುವುದು, ಕಾಕಾಸುರನ ಪ್ರಸಂಗದಲ್ಲಿ ರಾಮ ಕೋಪದಿಂದ ಹಾವಿನಂತೆ ಫೂತ್ಕರಿಸುವುದು, ಭೀಮನ ಮೂದಲಿಕೆಗೆ, ಕೊಳದೊಳಗಿದ್ದೂ ಬೆವರಿದ ಕೋಪಿಷ್ಠ ದುರ್ಯೋಧನನನ್ನು ರನ್ನ 'ಉರಗ ಪತಾಕ' ಎಂದು ಕರೆದುದು—ಇವೆಲ್ಲ ಉದಾಹರಣೆಗಳು. ಆದ್ದರಿಂದ ಪನ್ನ ಗೇಂದ್ರನೆಂದರೆ ಕೋಪಿಷ್ಠನಾದ ರಾಮ. ಕೆಣಕಿದರೆ ಹಾವಿನಂತೆ ರೋಷ ಹೊಂದುತ್ತಾನೆ. ಐದು ಹೆಡೆಯ ನಾಗರದಂತೆ ಕ್ರುದ್ಧನಾಗುತ್ತಾನೆ—'ಐದು ಹೆಡೆಯ ನಾಗರನ ಜೊತೆಗೆ ಯಾರು ಸರಸ ಆಡುತ್ತಿದ್ದಾನೆ ?' (ಸುಂ. 38–25) ಪ್ರಕೃತದಲ್ಲಿ ಸೀತೆಯನ್ನು ತುಡುಕಿ ರಾವಣ ರಾಮನನ್ನು ಕೆಣಕುತ್ತಿದ್ದಾನೆ. ಎಂದಮೇಲೆ ರಾವಣನಲ್ಲ ರಾಮನೆ ಕ್ರುದ್ಧನಾಗುವ ನಾಗರಹಾವು ಎನ್ನು ವುದು ಉಚಿತ. ಅವನ ಬಾಹು 'ಭುಜಂಗ ರಾಜೋತ್ತಮಭೋಗ ಬಾಹು' ಅವನ ಬಾಣಗಳೂ ಪ್ರತಿಯೊಂದೂ 'ಆಶೀವಿಷೋಪಮ' 'ಭುಜಂಗಕಲ್ಪ' ರಾವಣನೂ ಕುಪಿತನಾದಾಗ ಹಾವಿನಂತಾಗಬಹುದು. ಆದರೆ · ರಾಮನೆದುರಿಗೆ ಆತ ವಿಷವಿಲ್ಲದ ಹಾವು—'ನಿರ್ವಿಷಾಶೀವಿಷ ಸನ್ನಿಕಾಶಂ' (ಯು. 59–141) ಅವನ ತಲೆಯನ್ನು 'ಆಶೀವಿಷೋಪಮ'ವಾದ ಬಾಣದಿಂದ ರಾಮ ಕತ್ತರಿಸು ತ್ತಾನೆ (ಯು, 107–53) ಹಾವಿನಂತೆ ಫೂತ್ಕರಿಸುವ ಬಾಣದಿಂದಲೆ ರಾವಣನ ಹೃದಯವನ್ನು ಭೇದಿಸುತ್ತಾನೆ (ಯು. 108-3, 8, 10)

'ಪನ್ನಗೇಂದ್ರನ ವಧು' ಸೀತೆ ಎಂದಮೇಲೆ ಅವಳೂ ಹಾವಿನಂತೆ ರೋಷ ಛಲಗಳಿಂದ ತುಂಬಿದವಳೆಂಬ ಧ್ವನಿ ಇದ್ದೇ ಇದೆ. 'ಅಕಾಮಾಂ' ಎಂದು ಸ್ಪಷ್ಟವಾಗಿ ರಾವಣನಲ್ಲಿ ಕಾಮವಿಲ್ಲದವಳು, ಕಾಮಕ್ಕೆ ವಿರುದ್ಧವಾದ ಕ್ರೋಧ ವುಳ್ಳವಳು ಎಂದೆ ಹೇಳಿದೆ. ಏಕೆಂದರೆ 'ಅ' ಎಂಬ ಶಬ್ದಕ್ಕೆ ಅಭಾವ ಎಂದೂ ಅರ್ಥ, ವಿರುದ್ಧ ಎಂದೂ ಅರ್ಥ. ಉದಾ : ಧರ್ಮ ಅಧರ್ಮ ಎಂಬಲ್ಲಿ 'ಅ' ಎಂಬುದು 'ವಿರುದ್ಧ', 'ಧರ್ಮಕ್ಕೆ ವಿರುದ್ಧವಾದ 'ಪಾಪಕೃತ್ಯ' ಎಂದು ಅರ್ಥ ನೀಡುತ್ತದೆ. ರಾವಣ 'ಕಾಮಾರ್ತ'ನಾಗಿದ್ದು ಸೀತೆ 'ವಧು'ವಾಗಿದ್ದಾಳೆ

ಎಂದ ಮಾತ್ರಕ್ಕೆ 'ಅಕಾಮ'ಳು ಸಕಾಮಳಾಗಲಾರಳು. ಸೀತೆ ವಧುವಾಗಿದ್ದರೂ 'ಪನ್ನಗೇಂದ್ರ'ನಾದ ರಾಮನ ವಧು, ರಾವಣನ ವಧು ಅಲ್ಲ. ಆದ್ದರಿಂದ ಅಕಾಮಾ ಎಂದರೆ ಕಾಮಕ್ಕೆ ವಿರುದ್ಧವಾದ ಭಯಂಕರ ಕೋಪ ಉಳ್ಳವಳು ಎಂದೇ ಅರ್ಥ.

ರಾವಣ ಅವಳನ್ನು ಎತ್ತಿಕೊಂಡುದು 'ಪರಿತಪಾದ ಕೋರೆಹಲ್ಲಿನ ಮಹಾ ವಿಷದ ಹೆಣ್ಣು ಹಾವನ್ನು ಬಟ್ಟೆಯಲ್ಲಿ ಕಟ್ಟಿಕೊಂಡ ಹಾಗಾಯಿತಂ'ತೆ (ಅರ. 54-7) ಜಟಾಯುವೂ ರಾವಣನನ್ನು ಎಚ್ಚರಿಸುತ್ತಾನೆ—'ತೀಕ್ಷ್ಣ ವಿಷದ ಹಾವನ್ನು ಬಟ್ಟೆಯಲ್ಲಿ ಕಟ್ಟಿಕೊಂಡಿದ್ದಿ' (ಅರ. 50-17)

'ಪನ್ನಗೇಂದ್ರ ವಧು' ಎಂದರೆ ಶಾಕುಂತಲದ 'ಚಕ್ರವಾಕ ವಧು'ವಿನಂತೆ ಎನ್ನೋಣ. ಮದುವೆಯಾದ ಹೆಣ್ಣು ಎಂದು ಅರ್ಥವಿಟ್ಟುಕೊಳ್ಳಬೇಕಾಗಿಲ್ಲ. ಹೆಣ್ಣು ಹಾವು ಎಂದಿಷ್ಟೆ ಅರ್ಥ ಇಟ್ಟುಕೊಳ್ಳಲು ಶಕ್ಯವಿದೆ. ಈ ದೃಷ್ಟಿಯಿಂದ ನೋಡಿದರೂ ಸೀತೆ ರಾವಣನ ಪಾಲಿಗೆ ವಿಷದ ಹಾವು. ರೋಷದಿಂದ ರಾವಣನ ಕುಲನಾಶ ಮಾಡಲು ಛಲ ತೊಟ್ಟವಳು. ಐದು ಹೆಡೆಯ ಹಾವಿನಂಥ ರಾಮನಿಗೆ ತಕ್ಕ 'ವಧು.' ಲಂಕೆಯ ಸರ್ವನಾಶಕ್ಕೆ ರಾಮನ ಕೋಪ ಸೀತೆಯ ತೇಜಸ್ಸು ಇವೆರಡೂ ಕಾರಣವಾಯಿತು (ಸು. 51-36) ಆದ್ದರಿಂದಲೆ ಸೀತೆ ರಾವಣನನ್ನು ಒಬ್ಬನನ್ನು ಶಾಪದಿಂದ ಸುಡಲಿಲ್ಲ.

ಇಂದ್ರ ಶಬ್ದ ಇಂದ್ರಿಯ ಸುಖಕ್ಕೆ ಸಂಕೇತವೆನ್ನುವುದು ನಿರಾಧಾರವಾದುದು. ಯತೀಂದ್ರ, ಯೋಗೀಂದ್ರ, ಸಂಯಮೀಂದ್ರ ಇಲ್ಲೆಲ್ಲ ಇಂದ್ರಿಯಸುಖವನ್ನು 'ಬಲವಾಗಿ' ಮೆಟ್ಟಿದವರೆಂದೆ ಅರ್ಥವಾಗುತ್ತದೆ. 'ಪನ್ನಗೇಂದ್ರ'ವೂ ಕೂಡ ಹಾಗೇ 'ಬಲವತ್ತಾದ ರೋಷ ಹೊಂದಿದ' ಎಂಬ ಅರ್ಥವನ್ನೆ ಕೊಡುತ್ತದೆ.

ಹೀಗೆ 'ಪನ್ನಗ-ಇಂದ್ರ-ವಧು' ಈ ಮೂರು ಶಬ್ದಗಳೂ ಕಾಮಸನ್ನಿವೇಶಕ್ಕೆ ಪ್ರತಿಕೂಲವಾಗಿರುವುದರಿಂದ 'ಕಾಮಾರ್ತಃ' ಎಂಬ ಒಂದೇ ಒಂದು ಪದ 'ಅಕಾಮಾಂ' ಎಂಬ ಪದದ ವಾಚ್ಯವನ್ನು ತಿರಸ್ಕರಿಸಲಾರದು. ಸಕಾಮವನ್ನು ವ್ಯಂಜಿಸಲಾರದು.

ಕಾಮ ಸನ್ನಿವೇಶಕ್ಕೆ ವಿರುದ್ಧವಾದ ಈ ರೋಷ ಸನ್ನಿವೇಶದಲ್ಲಿ, 'ವಿವೇಷ್ಟಮಾನಾ' ಶಬ್ದಕ್ಕೆ ಸುತ್ತಿಕೊಳ್ಳುವುದೆಂಬ ಅರ್ಥವಿದ್ದರೂ ಅದನ್ನು ಬಲಾತ್ಕಾರವಾಗಿ ಬಿಡಬೇಕಾಗಿ ಬರುತ್ತದೆ. ಕೋಶದಲ್ಲಿ ಒಂದು ಅರ್ಥಸಿಕ್ಕಿತೆಂದು, ಆದಿಕವಿ ವಾಲ್ಮೀಕಿಯ ಒಂದು ಪ್ರಯೋಗವನ್ನು, ಅವನದೆ ಆದ ಹತ್ತಾರು ಪ್ರಯೋಗಗಳನ್ನು ಕಡೆಗಣಿಸಿ, ಅಪಾರ್ಥ ಮಾಡುವುದು ಅಕ್ಷರಜ್ಞರಿಗೆ ಒಪ್ಪುವಂತಹುದಲ್ಲ.

ವಸ್ತುತಃ 'ವಿವೇಷ್ಟಮಾನಾಂ' ಎಂಬುದ್ದರ ಬದಲು 'ವೀಚೆಷ್ಟಮಾನಾಂ' ಎಂಬ ಪಾಠಾಂತರವೂ ಇದೆ. ಅದನ್ನಿಟ್ಟುಕೊಂಡಾಗ ಯಾವ ಕುಚೋದ್ಯಕ್ಕೂ ಅವಕಾಶವಿಲ್ಲ.

## ಸೀತೆ ಪಾಪ ವಿಮುಕ್ತೆ

ಸೀತೆಯ ಇಂಗಿತ ಅತ್ಯಂತ ಪರಿಶುದ್ಧವಾಗಿರುವುದರಿಂದಲೆ ರಾವಣನು ಮಾಡಿದ ಎಲ್ಲ ಪ್ರಯತ್ನಗಳನ್ನೂ ಸೀತೆ ವಿಫಲವಾಗಿಸಿ ತನ್ನ ಪಾತಿವ್ರತ್ಯವನ್ನು ಕಾಯ್ದುಕೊಳ್ಳುತ್ತಾಳೆ. ಅಗ್ನಿ ಪರೀಕ್ಷೆಯನ್ನೂ ಗೆಲ್ಲುವ ಸಾಮರ್ಥ್ಯ ಹೊಂದುತ್ತಾಳೆ. ಅವಳನ್ನು ರಾವಣನೆತ್ತಿಕೊಂಡೊಡನೆ 'ಬ್ರಹ್ಮನು ಕೃತಂ ಕಾರ್ಯಂ' 'ರಾವಣ ನಾಶದ ಕಾರ್ಯ ಇನ್ನು ಮುಗಿದಂತೆಯೆ' ಎಂದುಕೊಂಡನಂತೆ (ಅರ. 52–13)

ಆದರೆ, ರಾಮ ಸೀತೆಯನ್ನು ಪರಿತ್ಯಾಗ ಮಾಡಿದಾಗ ಲಕ್ಷ್ಮಣ ಅವಳನ್ನು ವಾಲ್ಮೀಕಿಯ ಆಶ್ರಮದಲ್ಲಿ ಬಿಟ್ಟು ಹೋಗುವ ಪ್ರಸಂಗದಲ್ಲಿ ಅವಳು ರಾಮನಿಗೆ ಸಂದೇಶವನ್ನಿತ್ತು ಲಕ್ಷ್ಮಣ, ನಾನು ಋತುಕಾಲ ದಾಟಿದವಳು ಎನ್ನುವುದನ್ನು ಕಣ್ಣಾರೆ ನೋಡಿ ಹೋಗು, 'ನಿರೀಕ್ಷ್ಯ ಮಾದ್ಯ ಗಚ್ಛ ತ್ವಂ ಋತು ಕಾಲಾತಿವರ್ತಿನೀಂ' ಎನ್ನುತ್ತಾಳೆ. ಏನು ಅಭಿಪ್ರಾಯ ?

'ಸೀತೆ ಲಕ್ಷ್ಮಣನಿಗೆ ನಾನು ಬಸುರಿ, ಗರ್ಭಿಣಿ ಎನ್ನುವುದಿಲ್ಲ. ನನಗೆ ಮುಟ್ಟು ನಿಂತಿದೆ, ಚೆನ್ನಾಗಿ ನೋಡು, ಹೋಗು. ನನಗೆ ಋತುಕಾಲ ನಿಂತು ಹೋಗಿರುವುದನ್ನು ಕಣ್ಣಾರೆ ನೋಡಿ ಹೋಗು ಎನ್ನುತ್ತಾಳೆ. ಈ ಮಾತುಗಳನ್ನು ಆಡುವಲ್ಲಿ ಸೀತೆ ತನ್ನ

ಇಂಗಿತದ ಆಳದಲ್ಲಿರುವ ಬಯಕೆಗಳಿಗೆ ನಿಷ್ಠುರವಾದ ಭಯಾನಕ ಅಭಿವ್ಯಕ್ತಿ ಕೊಡುತ್ತಿದ್ದಾಳೆ. ಲಕ್ಷ್ಮಣ ಸೀತೆಗೆ ಋತುಕಾಲ ನಿಂತಿರುವುದನ್ನು ಖಚಿತಪಡಿಸಿಕೊಳ್ಳಬೇಕಾದರೆ ಅವಳ ದೇಹದ ಯಾವುದೋ ಒಂದು ಭಾಗವನ್ನು ಪ್ರದೇಶವನ್ನು ಕಣ್ಣಾರೆ ನೋಡಬೇಕು. ಲಕ್ಷ್ಮಣ ನಿಗೆ ಈ ಮಾತು ದಿಗ್ಭ್ರಮೆಗೊಳಿಸುತ್ತದೆ. ಗಟ್ಟಿಯಾಗಿ ಅಳುತ್ತ ಹೇ ಶೋಭನೆ ನನ್ನನ್ನು ಕುರಿತು ಏನು ಹೇಳುತ್ತಿರುವೆ ? ನಿನ್ನ ರೂಪವನ್ನು ನಾನು ನೋಡಿದವನಲ್ಲ ನಿನ್ನ ಪಾದ ಗಳನ್ನು ಮಾತ್ರ ನೋಡಿದವನು ಈಗ ರಾಮನಿಲ್ಲದ ಈ ವನದಲ್ಲಿ ಹೇಗೆ ತಾನೆ ನಿನ್ನನ್ನು ನೋಡಲಿ ಎಂದು ಹೇಳಿ ನಮಸ್ಕರಿಸಿ ನಾವೆಯನ್ನು ಹತ್ತಿದನು. ಇಲ್ಲಿ ಓದುಗನು ಗಮನಿಸ ಬೇಕಾದುದು ಸೀತಾಲಕ್ಷ್ಮಣರ ಪರಸ್ಪರ ಹೃದಯ ವಿದ್ರಾವಕತೆಯನ್ನು. ಅವರ ನಿಗೂಢ ಸಂಬಂಧ ಬಂಧನವೆ ಅವರ ಮೂಕಶೋಕಕ್ಕೆ ಕಾರಣ. ಸೀತೆಯ ರೂಪ ಲಕ್ಷ್ಮಣನನ್ನು ಎಷ್ಟರ ಮಟ್ಟಿಗೆ ಕಾಡಿದೆ ಎಂದರೆ ಅವನು ಅದರ ವಿರುದ್ಧ ತನ್ನ ಮೇಲೆ ಕಡ್ಡಾಯವಾದ ನಿರ್ಬಂಧವನ್ನು ಹೇರಿಕೊಳ್ಳಬೇಕಾಗಿದೆ. ಸೀತೆ ಸುಂದರಿ. ಅವಳ ಸೌಂದರ್ಯ ರಾಮನ ಇನ್ನಿತರ ತಮ್ಮಂದಿರನ್ನು ಕೆಣಕಿದಂತಿಲ್ಲ. ಗಂಡನನ್ನಗಲಿದ ಹೆಂಗಸು ಒಲಿಯಲು ಸುಲಭಳು. ಕಾಮದ ದೌರ್ಬಲ್ಯಕ್ಕೆ ಹೆಚ್ಚು ಪಕ್ಕಾದವಳು. ಸೀತೆ ಸೂಚಿಸಿದ ದೇಹ ಭಾಗವನ್ನು ರಾಮನಿಲ್ಲದ ಸಂದರ್ಭದಲ್ಲಿ ನೋಡುವುದು ಪಾಪ ಭೀರುವಾದ ಲಕ್ಷ್ಮಣನಿಗೆ ಮಹಾಘೋರ. ಈ ಪಾಪ ದಿಂದ ಓಡುವವನಂತೆ ನಾವೆಯನ್ನು ಹತ್ತಿದರೂ ನದಿಯ ಆ ತೀರದಿಂದ ಈ ತೀರದಲ್ಲಿ ಗೋಳಾಡುತ್ತಿದ್ದ, ಅನಾಥಳಾದ ಸೀತೆಯನ್ನು ಮತ್ತೆ ಮತ್ತೆ ತಿರುತಿರುಗಿ ನೋಡುತ್ತಾ ತೆರಳುತ್ತಾನೆ.'

—ಈ ಭಯಂಕರ ಆಪಾದನೆಗೆ ಪೂರ್ವಗ್ರಹ ಒಂದನ್ನು ಬಿಟ್ಟರೆ ಇನ್ನಾವ ಕಾರಣವೂ ಇಲ್ಲ. 'ಸೀತೆ ತಾನು ಬಸುರಿ ಗರ್ಭಿಣಿ ಎನ್ನುತ್ತಿಲ್ಲ ? ಏಕೆ ? ಕಾರಣ ಕೊಟ್ಟಿಲ್ಲ ! 'ಋತುಕಾಲ' ಅಂದರೆ ಸ್ತ್ರೀಯರ ಗರ್ಭಧಾರಣೆಯ ಯೋಗ್ಯಕಾಲವನ್ನು 'ಅತಿವರ್ತಿನಿ' ದಾಟಿದವಳು, ಗರ್ಭ ಧರಿಸಿದವಳು ಎಂದು ಸಹಜವಾಗಿ ಅರ್ಥವಾಗುತ್ತಿರುವಾಗ ಹಾಗೆ ಸೀತೆ ಹೇಳುತ್ತಿಲ್ಲವೆನ್ನಲು ಕಾರಣವೇನು ? ಇದು ಆಗ್ರಹವಲ್ಲವೆ ?

ಋತುಕಾಲ ಎಂದರೆ, ಮುಟ್ಟಿನ ಕಾಲ ಎಂದೂ ಅರ್ಥ ಕೋಶದಲ್ಲಿ ಇರುವುದೇನೊ ನಿಜ. ಕೋಶದಲ್ಲಿರುವ ಎಲ್ಲ ಅರ್ಥವನ್ನೂ ಕಾವ್ಯದ ಒಂದು

ಪ್ರಯೋಗದಲ್ಲಿ ತುರುಕಿಸುವುದು ನ್ಯಾಯವಲ್ಲ. ಪ್ರಕೃತ ಆಗ ತಾನೆ ಮುಟ್ಟು ನಿಂತು ನೀರೆರೆದುಕೊಂಡವಳು ಎನ್ನುವ ಅರ್ಥ ರಾಮಾಯಣ ಕತೆಗೇ ಪೂರ್ವಾಪರ ವಿರುದ್ಧ. ಸೀತೆ ಗರ್ಭಿಣಿ ಎನ್ನುವುದು ರಾಮನಿಗೆ ಮೊದಲೆ ತಿಳಿದು ಬಂದಿತ್ತು. ರಾಮ ಅದನ್ನು ಲಕ್ಷ್ಮಣನಿಗೆ ಹೇಳಿ ದೋಹದದ ನೆಪದಿಂದ ಸೀತೆಯನ್ನು ವಾಲ್ಮೀಕಿಯ ಆಶ್ರಮದಲ್ಲಿ ಬಿಟ್ಟು ಬಾ ಎಂದಿದ್ದ. ಸೀತೆಯೂ ರಾಮ ತನ್ನನ್ನು ಪರಿತ್ಯಜಿಸಿದನೆಂದು ತಿಳಿದೊಡನೆ 'ನಾನಿಂದೆ ಗಂಗೆಯಲ್ಲಿ ಮುಳುಗಿ ಸಾಯುತ್ತಿದ್ದೆ. ಆದರೇನು ಮಾಡಲಿ ? ರಾಮನ ವಂಶದ ಕುಡಿ ನನ್ನ ಗರ್ಭದಲ್ಲಿ ಬೆಳೆಯುತ್ತಿದೆ' ಎನ್ನುತ್ತಾಳೆ. ಹೀಗೆ ಸೀತೆ ಗರ್ಭಿಣಿ ಎಂದು ಲಕ್ಷ್ಮಣನಿಗೆ ನಿಶ್ಚಯವಾಗಿ ತಿಳಿದಿರುವಾಗ ತಾನು ಮುಟ್ಟು ನಿಂತು ಸ್ನಾನ ಮಾಡಿದವಳೆಂದು ಸೀತೆ ಹೇಳುವುದು ಶಕ್ಯವೆ ? ಗರ್ಭಿಣಿ ಮುಟ್ಟಾಗುವುದುಂಟೆ ?

'ಗರ್ಭಧರಿಸುವ ಮುನ್ನ ಮುಟ್ಟಾಗಿದ್ದೆ, ಈಗ ಇಲ್ಲ ಅಂದರೆ ಗರ್ಭಿಣಿಯಾಗಿದ್ದೇನೆ. ಆದ್ದರಿಂದ ನನ್ನ ಸಂಗ ಮಾಡಬಹುದೆ'ನ್ನುವುದಾದರೆ ಮುಟ್ಟಾದವಳೊಡನೆ ಹೇಗೊ ಹಾಗೆ ಗರ್ಭಿಣಿಯೊಡನೆ ಸಂಗ ಮಾಡುವುದೂ ನಿಷಿದ್ಧವೆ, ಪಾಪ ಭೀರುವಾದ ಲಕ್ಷ್ಮಣನ ಮುಂದೆ ಇದು ಹೇಳುವಂಥಹುದಲ್ಲ.

'ಸೀತೆ, ದಿಟ್ಟ ಹೆಂಗಸು. ಮಾನವ ನಿರ್ಮಿತ ಕಟ್ಟಳೆಗಳನ್ನು ಕಾಲದೇಶಕ್ಕೆ ಬಾಗುವ ಬವಲಾಗುವ ಚಂಚಲತೆಯನ್ನು ಮೀರಿ ಪವಿತ್ರವಾದ ಪ್ರೇಮದಲ್ಲಿ ನಿಂತವಳು.'

— ಎನ್ನುವುದಾದರೆ 'ನಾನು ಮುಟ್ಟಾದವಳಲ್ಲ, ಮುಟ್ಟು ನಿಂತವಳು' ಎಂದೇಕೆ ಹೇಳುತ್ತಾಳೆ ? ಮುಟ್ಟಾದವಳು ಸಂಗಕ್ಕೆ ಅಯೋಗ್ಯಳೆಂದು ಭಯವೆ, ಈ 'ದಿಟ್ಟ ಹೆಂಗಸಿ'ಗೆ ? ಲಕ್ಷ್ಮಣನಿಗೆ ಭಯವೆನ್ನುವುದಾದರೆ, ಗರ್ಭಿಣಿಯ ಸಂಗಕ್ಕೂ ಆತ ಭಯ ಪಡುತ್ತಾನೆ, ಅಲ್ಲವೆ ?

ಸುಸಂಸ್ಕೃತಳಾದ ಹೆಂಗಸು ಸೀತೆಗೆ ಅಸಭ್ಯ ಅಸಂಸ್ಕೃತ ಅಶ್ಲೀಲ ವ್ಯವಹಾರ ಒಪ್ಪುವುದಿಲ್ಲ. ತನ್ನ ಶರೀರದ ಒಂದು ಗೋಪ್ಯವಾದ ಭಾಗವನ್ನು ತೋರಿಸುವಷ್ಟು ಆಕೆ ನಾಚಿಕೆಗೆಟ್ಟವಳೆ ?

'ನಾವು ಸೀತಾಲಕ್ಷ್ಮಣರನ್ನು ದೂರಲಾರೆವು ಲೈಂಗಿಕತೆಯನ್ನು ಅವರೀರ್ವರ ಆರೋಪಿಸಲಾರೆವು. ಇಲ್ಲಿಯು ನನ್ನಿವೇಶ ಶೃಂಗಾರದ್ದಲ್ಲ, ಕಾಮದ್ದಲ್ಲ. ಪ್ರೇಮದ ಯಾಚನೆಯನ್ನೆ ಮಾಡುತ್ತಿದ್ದಾಳೆ.'

—ಎನ್ನುವುದೂ ಅರ್ಥವಿಲ್ಲದ್ದು. ನೇರವಾಗಿ 'ಲಕ್ಷ್ಮಣ. ನನ್ನನ್ನು ಹೆಂಡತಿಯ ನ್ನಾಗಿ ಮಾಡಿಕೊಳ್ಳು' ಎನ್ನಬಾರದಿತ್ತೆ ? ಸಂಗ ಕೊಡು ಎನ್ನಬಾರದಿತ್ತೆ ? ಅಶ್ಲೀಲವಾಗಿ ತನ್ನ ಗೋಪ್ಯ ಪ್ರದೇಶವನ್ನೇಕೆ ನೋಡೆನ್ನಬೇಕು ? ಸ್ತ್ರೀ ಜಾತಿಗೆ ಇದು ಅವಮಾನ.

ಲಕ್ಷ್ಮಣನೂ 'ಅನಘ' ಪಾಪವಿಲ್ಲದವಳೆ ಎಂದು ಸೀತೆಯನ್ನು ಕರೆ ಯುತ್ತಿದ್ದಾನೆ. ಇದರ ಸಾಕ್ಷ್ಯದಲ್ಲಿ ಸೀತೆಯ ಮಾತಿಗೆ ಇಂಥ ಅಶ್ಲೀಲಾರ್ಥ ಖಂಡಿತವಾಗಿ ನಿಲ್ಲದು.

ಸೀತೆ ಈ ಮಾತನ್ನಾಡುವುದಕ್ಕೆ ಮೊದಲು, ಆಗ ತಾನೆ, ತಾನು ಪರಿತ್ಯಕ್ತೆ ಯಾದರೂ ಪತಿಗೆ ನಿಷ್ಠಳು, ಅವನ ಹಿತವೆ ನನಗೆ ಪ್ರಾಣಕ್ಕಿಂತ ಪ್ರಿಯ ಎಂದಿದ್ದಾಳೆ—

ಪತಿರ್ಹಿ ದೇವತಾ ನಾರ್ಯಾಃ ಪತಿರ್ಬಂಧುಃ ಪತಿರ್ಗುರುಃ ।
ಪ್ರಾಣೈರಪಿ ಪ್ರಿಯಂ ತಸ್ಮಾತ್ ಭರ್ತುಃ ಕಾರ್ಯಂ ವಿಶೇಷತಃ ॥

ಇದು ಉತ್ತರಕಾಂಡದಲ್ಲಿ 48ನೇ ಅಧ್ಯಾಯದ 18ನೇ ಶ್ಲೋಕ ಅಲ್ಲಿಯೆ 19ನೇ ಶ್ಲೋಕದಲ್ಲಿ,

ನಿರೀಕ್ಷ್ಯ ಮಾದ್ಯ ಗಚ್ಛ ತ್ವಂ ಋತುಕಾಲಾತಿವರ್ತಿನೀಂ ।

ಎನ್ನುತ್ತಾಳೆ ಸೀತೆ. ಈ ಎರಡು ಜೊತೆ ಜೊತೆಯಾಗಿರುವ ಶ್ಲೋಕಗಳು ಪರಸ್ಪರ ವಿರುದ್ಧಾರ್ಥವಾಗುವುದು ಸಂಭವನೀಯವೆ, ಸಮರ್ಥನೀಯವೆ ?

ಸೀತೆ ಗರ್ಭಿಣಿಯಾಗಿದ್ದಳೆಂದೂ, ಪರಿತ್ಯಕ್ತೆಯಾದರೂ ಇನ್ನೂ ಪತಿಗೆ ನಿಷ್ಠಳಾಗಿದ್ದಾಳೆ ಎಂದೂ ವಾಲ್ಮೀಕಿ ಹೇಳಿ, ಒಡನೆ 'ನಿರೀಕ್ಷ್ಯಮಾದ್ಯ' ಎಂದು ಸೀತೆಯ ಬಾಯಲ್ಲಿ ಹೇಳಿಸಿದ್ದಾನೆ. ಈ ಹಿನ್ನೆಲೆಯಲ್ಲಿ ಈ ಮಾತನ್ನು ನೋಡದೆ ಬಿಡಿಯಾಗಿ ಪ್ರತ್ಯೇಕವಾಗಿ ನೋಡಿದರೆ ವಿಮರ್ಶೆಯಾಗುವುದಿಲ್ಲ, ಕುರುಡರ ಆನೆಯ ಕಾಣ್ಕೆಯಾಗುತ್ತದೆ —

'ಆನೆಯನ್ನು ನಾವು ಬಿಡಿಯಾಗಿ ಕಂಡಾಗ ಕುರುಡರ ಕಾಣ್ಕೆಯಂತೆ ನಮಗೆ ಆನೆ ಕಂಬ (ಕಾಲು) ಮೊರ (ಕಿವಿ) ಗೋಡೆ (ಹೊಟ್ಟೆ)ಗಳಾಗಿ ಗೋಚರಿಸುತ್ತದೆ.'

ಅಲ್ಲವೇ ?

ಈ ಶ್ಲೋಕವನ್ನು ಬಿಡಿಯಾಗಿ ತೆಗೆದುಕೊಂಡರೂ 'ಋತು ಕಾಲಾತಿವರ್ತಿನಿ' ಎಂದರೆ, ಮುಟ್ಟು ನಿಂತವಳೆಂದು ಅರ್ಥವಾಗುವುದಿಲ್ಲ. ಆ ಅರ್ಥದಲ್ಲಿ 'ಋತುಸ್ನಾತಾ' ಎಂಬ ಪದ ಸರಿಯಾದುದು. 'ಋತುಸ್ನಾತಳಾದ ಋತುಕಾಲಾನುರೋಧಿನಿಯಾದ ಹೆಂಡತಿಯನ್ನು ಸಂಗಮಾಡದವನು ಪಾಪಿ' ಎಂದು ಭರತ ಹೇಳುತ್ತಾನೆ (ಅಯೋ. 75–52)

ಋತುಕಾಲ ಎಂದರೆ ಸ್ತ್ರೀಯರ ಗರ್ಭಧಾರಣೆಗೆ ಯೋಗ್ಯವಾದ ಕಾಲ ಎಂಬ ಅರ್ಥವೆ ವಾಲ್ಮೀಕಿಯ ಎಲ್ಲ ಪ್ರಯೋಗಗಳಲ್ಲಿಯೂ ಕಂಡುಬರುತ್ತದೆ—ಭರತನು 'ಋತುಕಾಲ ಅನುರೋಧಿನಿ' 'ಋತು ಕಾಲದಲ್ಲಿ ಇರುವವಳು' ಎಂದು ಋತುಸ್ನಾತಳನ್ನು ಅಂದರೆ ಮುಟ್ಟು ನಿಂತವಳನ್ನು ಕರೆದಿದ್ದಾನೆ, ಅಂದರೆ, ಗರ್ಭಧಾರಣ ಯೋಗ್ಯವಾದ ಕಾಲದಲ್ಲಿ ಇರುವವಳು ಎಂದರ್ಥ. ಮುಟ್ಟಾದವಳು ಎಂಬ ಅರ್ಥ ಇಟ್ಟುಕೊಂಡರೆ, ಜೊತೆಗೆ 'ಋತುಸ್ನಾತಾ' 'ಮುಟ್ಟು ನಿಂತು ಸ್ನಾನ ಮಾಡಿದವಳು' ಎನ್ನುವುದು ಪರಸ್ಪರ ವಿರುದ್ಧವಾಗುವುದು.

'ಋತುಮತಿಯಾದ ತಾಯಿ ಶುಕ್ಲಶೋಣಿತ'ಗಳನ್ನು ಗರ್ಭದಲ್ಲಿ ಧರಿಸುವುದೆ ಮಗುವಿನ ಜನನಕ್ಕೆ ಕಾರಣ' (ಅಯೋ. 108-11) – ಇಲ್ಲಿಯೂ ಜಾಬಾಲಿ ಮುನಿ ರಾಮನಿಗೆ ಹೇಳುವ ಮಾತಿನಲ್ಲಿ 'ಋತುಮತಿ' ಎಂದರೆ ಮುಟ್ಟಾದವಳಲ್ಲ, ಮುಟ್ಟಾಗಿ ಸ್ನಾನ ಮಾಡಿದವಳು.

'ಕಾಮಾರ್ಥಿಗಳಾದವರು ಹೆಂಗಸು ಋತುಕಾಲದಲ್ಲಿರಬೇಕೆಂದು ನಿರೀಕ್ಷಿಸುವುದಿಲ್ಲ' (ಬಾಲ. 48–18)—ಇಲ್ಲಿಯೂ ದೇವೇಂದ್ರ ಅಹಲ್ಯೆಗೆ ಹೇಳುವ ಮಾತಿನಲ್ಲಿ ಋತುಕಾಲವೆಂದರೆ ಮುಟ್ಟು ಎಂಬ ಅರ್ಥ ಮಾಡಿದರೆ ವಿರುದ್ಧವೆ ಆಗುತ್ತದೆ. ಗರ್ಭಧಾರಣ ಯೋಗ್ಯಕಾಲವನ್ನು ನಿರೀಕ್ಷಿಸುವುದಿಲ್ಲ ಎನ್ನುತ್ತಿದ್ದಾನೆ, ದೇವೇಂದ್ರ.

ಮಹಾಭಾರತವೂ ಮುಟ್ಟುನಿಂತ ಹೆಂಗಸನ್ನೆ ಋತುಮತಿ ಎಂದು ಕರೆದಿದೆ—'ನಿನ್ನ ಗುರುಪತ್ನಿ ಋತುಮತಿಯಾಗಿದ್ದಾಳೆ. ಗುರುವು ಊರಲ್ಲಿಲ್ಲ. ಆಕೆಯ ಋತು ವ್ಯರ್ಥವಾಗದಂತೆ ಮಾಡು' (ಆದಿ 3-86) ಇಲ್ಲಿಯೂ ಋತು ಎಂದರೆ ಗರ್ಭಧಾರಣ ಯೋಗ್ಯ ಕಾಲವೆಂದೆ ಅರ್ಥ.

'ಉತ್ತಂಕನು ಋತುಕಾಲದಲ್ಲಿದ್ದ ಗುರುಧೌಮ್ಯನ ಹೆಂಡತಿಯನ್ನು ಕೂಡುತ್ತಾನೆ.'

ಎನ್ನುವುದಂತೂ ಮಹಾಭಾರತಕ್ಕೆ ಪ್ರತ್ಯಕ್ಷ ವಿರೋಧಿಯಾದ ಹೇಳಿಕೆ. ಅಲ್ಲಿ ಉತ್ತಂಕ ಹೇಳುತ್ತಾನೆ—'ಹೆಂಗಸರು ಹೇಳುತ್ತಾರೆ ಎಂದು ನಾನು ಅಕಾರ್ಯ ಮಾಡಲಾರೆ. ಅಕಾರ್ಯವನ್ನೂ ಮಾಡೆಂದು ಗುರುಗಳು ನನಗೇನೂ ಅಪ್ಪಣೆ ಮಾಡಿಲ್ಲ.' ಹೀಗೆ ಹೇಳಿ, ಹೆಂಗಸರು ಪರೀಕ್ಷೆಗಾಗಿ ಹೇಳಿರಬಹುದು ಎಂದು ಕೊಂಡು ಉತ್ತಂಕ ಸುಮ್ಮನಿರುತ್ತಾನೆ. ಅಕಾರ್ಯ ಮಾಡಲೊಪ್ಪುವುದಿಲ್ಲ. ಗುರುಗಳು ಹಿಂತಿರುಗಿ ಬಂದಾಗ ಎಲ್ಲ ತಿಳಿದು ಸಂತೋಷಪಡುತ್ತಾರೆ!

'ಋತುಮತಿಯಾದ ಕುಮಾರಿ ಮೂರುವರ್ಷಗಳ ವರೆಗೆ ಕಾದು ಅನಂತರ ತನ್ನ ವಿವಾಹದ ಯತ್ನ ತಾನೆ ಮಾಡಿಕೊಳ್ಳಬಹುದು' (ಮನು. 9.90) ಇಲ್ಲಿಯೂ 'ಋತುಮತಿ' ಎಂದರೆ ಗರ್ಭಧಾರಣ ಯೋಗ್ಯಕಾಲದವಳು.

ಅಸಂದಿಗ್ಧವಾಗಿ, 'ಋತು' ಎಂದರೆ ಏನೆಂದೆ ಧರ್ಮಶಾಸ್ತ್ರ ಹೇಳಿದೆ – 'ಸ್ತ್ರೀಯರಿಗೆ ಸ್ವಾಭಾವಿಕವಾಗಿ ಹದಿನಾರು ದಿನಗಳ ಕಾಲ ಋತು ಎನಿಸುತ್ತದೆ.' (ಮನು. 3.46) ಇಲ್ಲಿ ಮುಟ್ಟಿನ ಕಾಲವೂ ಸೇರಿದಂತೆ ಹದಿನಾರು ದಿನಗಳ ಕಾಲವೆ ಋತು ಎನ್ನುತ್ತದೆ ಮನುಸ್ಮೃತಿ. ಕೇವಲ ಮುಟ್ಟಿನ ಕಾಲವಲ್ಲ, ಕೇವಲ ಮುಟ್ಟಿನ ಕಾಲವೆಂದಿಟ್ಟುಕೊಂಡರೆ 'ಋತೌ ಭಾರ್ಯಾಮುಪೇಯಾತ್' 'ಋತುಕಾಲದಲ್ಲಿ ಮಾತ್ರ ಪತ್ನಿಯ ಸಂಗ ಮಾಡಬೇಕು' ಎಂಬ ವಿಧಿ ವಿರುದ್ಧವಾಗುತ್ತದೆ. ಮನುವೂ ಹೇಳುತ್ತಾನೆ – 'ಋತುಕಾಲದಲ್ಲಿ ಮಾತ್ರ ಸಂಗ ಮಾಡಬೇಕು, ಸ್ವದಾರನಿರತನಾಗಬೇಕು.'

ಮುಟ್ಟಿನ ಕಾಲದಲ್ಲಿರುವವಳನ್ನು ಕೆಲವೆಡೆ ಋತುಮತಿ ಎಂದು ಕರೆದರೂ ಮುಟ್ಟು ನಿಂತವಳನ್ನು 'ಋತುಸ್ನಾತ'ಳೆಂದು ಕರೆಯುವುದು ರೂಢಿ, ಋತು

ಕಾಲಾತಿ ವರ್ತಿನಿ' ಎಂದಲ್ಲ. ಅವಳು ರಾಮಾಯಣ ಹೇಳುವಂತೆ 'ಋತು ಕಾಲಾನುರೋಧಿನಿ' ಆಗುತ್ತಾಳೆ ಹೊರತು 'ಋತುಕಾಲಾತಿವರ್ತಿನಿ' ಆಗುವು ದಿಲ್ಲ. ಕಾಳಿದಾಸನು 'ರಾಣಿ 'ಋತುಸ್ನಾತ'ಳಾಗಿರುವುದನ್ನು ನೆನೆದು ಧರ್ಮ ಲೋಪ ಭಯದಿಂದ ದಿಲೀಪನು ಅವಸರದಲ್ಲಿ ಕಾಮಧೇನುವನ್ನು ಪ್ರದಕ್ಷಿಣೆ ಮಾಡದೆ ಹೋದನು' (ರಘು 1.76) ಎನ್ನುತ್ತಾನೆ ಋತುಸ್ನಾತಳಾದ ಭಾರ್ಯೆಯನ್ನು ಸಂಗ ಮಾಡದಿದಿದ್ದರೆ ಬಾಲಹತ್ಯೆ ಗೋಹತ್ಯೆಗಳ ಪಾಪ ತಗಲುವುದು' ಎಂದು ಪರಾಶರ, ಮನು ಮುಂತಾದವರು ಹೇಳುತ್ತಾರೆ.

## ಲಕ್ಷ್ಮಣನ ಮಹಾಸ್ವನ

ಆದ್ದರಿಂದ ಸೀತೆ ತನ್ನನ್ನು 'ಋತುಕಾಲಾತಿ ವರ್ತಿನಿ' ಗರ್ಭಿಣಿ ಎಂದು ಕಣ್ಣಾರೆ ನೋಡಿ ಹೋಗು ಎನ್ನುತ್ತಾಳೆ, ಅಸಹಾಯಕತೆಯಿಂದ ಬೇಡಿಕೊಳ್ಳು ತ್ತಾಳೆ. 'ನೋಡು ಲಕ್ಷ್ಮಣ, ನಾನು ತುಂಬಿದ ಗರ್ಭಿಣಿ. ಒಂದು ಶಿಶು ವನ್ನು ಹೆತ್ತು ಹೊತ್ತು ಸಲಹಿ ಅದನ್ನು ರಾಮನಿಗೆ ಕೊಟ್ಟೇ ನಾನು ಪರ ಲೋಕಕ್ಕೆ ಹೋಗುತ್ತೇನೆ. ಈಗಲೆ ಗಂಗೆಯಲ್ಲಿ ಧುಮುಕಲಾರೆ. ನಾಳೆ ಈ ಮಗುವನ್ನು ರಾಮನದಲ್ಲ ಎಂದು ಜನರಾಡಿಕೊಳ್ಳುವ ಸಂದರ್ಭ ಬಂದರೆ ನೀನು ಸಾಕ್ಷಿಯಾಗಿರಬೇಕು.'

ಲಕ್ಷ್ಮಣನಿಗೆ ಸೀತೆಯ ಅಸಹಾಯಕತೆ ಕಂಡು ದುಃಖ ಸಹಿಸದಾಯಿತು. 'ಅಮ್ಮ, ಸರ್ವಲೋಕಸಾಕ್ಷಿಯಾಗಿ ಅಗ್ನಿಪರೀಕ್ಷೆ ನಡೆದರೂ ಜನ ನಂಬಲಿಲ್ಲ. ನನ್ನ ಸಾಕ್ಷಿಯನ್ನು ಅದರಲ್ಲೂ ರಾಮನನ್ನು ನೆರಳಿನಂತೆ ಹಿಂಬಾಲಿಸುವ, ಅವನ ಎರಡನೆ ಅಂತರಾತ್ಮದಂತಿರುವ ನನ್ನ ಮಾತನ್ನು ಜನ ನಂಬುವರೆ? ನಿನ್ನ ಹೊಟ್ಟೆಯಲ್ಲಿ ಗರ್ಭವಿರುವುದನ್ನು ವೈದ್ಯನಂತೆ ನಾನು ಪರೀಕ್ಷಿಸಿ ನೋಡ ಬೇಕೆ? ವೈದ್ಯನೂ ಕೂಡ ಪುರುಷರ ರಕ್ಷಣೆಯಲ್ಲಿಲ್ಲದ ಸ್ತ್ರೀಯನ್ನು ಪರೀಕ್ಷಿಸ ಕೂಡದೆಂದು ವೈದ್ಯಶಾಸ್ತ್ರ ಹೇಳುತ್ತದೆ. (-ಚರಕಸಂಹಿತಾ ವಿಮಾನಸ್ಥಾನ) ರಾಮನಿಲ್ಲದ ಈ ಸ್ಥಳದಲ್ಲಿ ನಿನ್ನ ಶರೀರವನ್ನು ನಾನು ಪರೀಕ್ಷಿಸಿ ನೋಡುವು ದೆಂತು?

ಇಲ್ಲಿ ನಾವು ಗಮನಿಸಬೇಕಾದುದು ಸೀತೆಯ ಹೃದಯವಿದ್ರಾವಕವಾದ

ಅಸಹಾಯಕತೆಯನ್ನು, ಲಕ್ಷ್ಮಣನ ಅಸಹನೀಯವಾದ ವೇದನೆಯನ್ನು, ವಸ್ತುತಃ ಲಕ್ಷ್ಮಣ ತನ್ನನ್ನು ಪರೀಕ್ಷಿಸಿ ನೋಡಬೇಕೆನ್ನುವ ಅಭಿಪ್ರಾಯವೂ ಸೀತೆಗೆ ಇರಲಿಲ್ಲ. ದುಃಖದಿಂದ ಹುಚ್ಚಳಂತಾಗಿ ಹೀಗೆ ಹೇಳುತ್ತಿದ್ದಾಳೆ, ಇದನ್ನು ಕಂಡು ಲಕ್ಷ್ಮಣ ಅಳುತ್ತಾನೆ.

ತನ್ನ ವ್ರತ, ಸೀತೆಯನ್ನು ನೋಡಲು ಅಡ್ಡಿಯಾಗಿದೆ ಎಂದು ಆತ ಅಳುತ್ತಿಲ್ಲ, ಪಾಪ ಭೀತಿಯಿಂದ ಹಿಂಜರಿಯುತ್ತಿಲ್ಲ. ಸಂದರ್ಭ ಬಂದರೆ ಎಂಥ ಸಾಹಸಕ್ಕೂ ಆತ ಸಿದ್ಧ. ರಾಮನಿಗೆ ವನವಾಸ ವಿಧಿಸಿದನೆಂದು ತಂದೆಯಾದ ದಶರಥನನ್ನೆ ಕೊಲ್ಲಲು ಹೊರಟ್ಟಿದ್ದ ! (ಅಯೋ. 21–19) ಸೀತೆಗೆ ನಿಜವಾಗಿ ಆ ಅಭಿಪ್ರಾಯವಿತ್ತೆಂದು ತಿಳಿದಿರುತ್ತಿದ್ದರೆ. ಲಕ್ಷ್ಮಣ ನಿಶ್ಚಯವಾಗಿಯೂ ಹಾಗೇ ಮಾಡುತ್ತಿದ್ದನೊ ಏನೋ. ಆದರೆ ಸೀತೆ ಶೋಕದಿಂದ ಹುಚ್ಚಳಾದಂತಾಗಿ ಏನೋ ಹೇಳಿಬಿಟ್ಟಳು. ಅವಳಿಗೇ ಆ ಅಭಿಪ್ರಾಯವಿರಲಿಲ್ಲ. ಏಕೆಂದರೆ, ಅದರಿಂದೇನೂ ಪ್ರಯೋಜನವಿಲ್ಲವೆಂದು ಅವಳಿಗೂ ಗೊತ್ತು. ಲಕ್ಷ್ಮಣ ತಾನೀಗ ಸೀತೆಯನ್ನು ಯಾವ ವಿಧದಿಂದಲೂ ಸಂತೈಸುವಂತಿಲ್ಲವೆಂದು ಗಟ್ಟಿಯಾಗಿ ಅಳುತ್ತ ಕೇವಲ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಹೊರಡುತ್ತಾನೆ.

ತಾಯಿಗೆ ಸಮಾನಳಾದ ಸೀತೆಯನ್ನು ಬಿಟ್ಟಿರಲಾದ ಲಕ್ಷ್ಮಣ, ಮಗನಂತಿರುವ ಲಕ್ಷ್ಮಣನನ್ನು ಬಿಡಲಾರದ ಸೀತೆ—ಇಬ್ಬರೂ ಅಸಹಾಯಕರಾಗಿ ದೂರವಾಗುತ್ತಿದ್ದಾರೆ. ಲಕ್ಷ್ಮಣ ನಿರುಪಾಯನಾಗಿ ತಿರುತಿರುಗಿ ನೋಡುತ್ತ ಗಂಗೆಯ ಆಚೆಯ ದಡಕ್ಕೆ ಹೋಗಿ ನಿಲ್ಲುತ್ತಾನೆ, ಸೀತೆಯನ್ನೆ ನೋಡುತ್ತ. ವಾಲ್ಮೀಕಿಮುನಿ ಬಂದು ಅವಳನ್ನು ಆಶ್ರಮಕ್ಕೆ ಕರೆದೊಯ್ಯುವುದನ್ನು ಕಣ್ಣಾರೆ ಕಂಡು ಬಳಿಕ ಅಯೋಧ್ಯೆಗೆ ಹಿಂತಿರುಗುತ್ತಾನೆ. (ಉ. 50–1)

## ಏಕೆ ನಿಷ್ಠುರವಾದ ವ್ರತ ?

ಲಕ್ಷ್ಮಣ ಹದಿನಾಲ್ಕು ವರ್ಷಗಳ ಕಾಲ ರಾಮಸೀತೆಯರ ಜೊತೆಗೆ ವನವಾಸ ಮಾಡುವಾಗ ಅದೆಷ್ಟು ಬಾರಿ ರಾಮನಿಲ್ಲದ ವೇಳೆ ಸೀತೆಯನ್ನು ರಕ್ಷಿಸಿಕೊಂಡಿರಬೇಕಾಗುವ ಪ್ರಸಂಗ ತನಗೆ ಬರುವುದೊ ಯಾರಿಗೆ ಗೊತ್ತು ? ಎಂದು ಆಲೋಚಿಸಿ, ತಮ್ಮಿಬ್ಬರಲ್ಲಿ ಯಾರಾದರೂ ಒಬ್ಬರು ಜಾರಿದರೂ

ಅಪಾಯವೆಂದು ಮನಗಂಡು ತಾನೇ ಎಚ್ಚರವಿರಬೇಕೆಂಬ ಅಭಿಪ್ರಾಯದಿಂದ ಸೀತೆಯ ಪಾದಗಳನ್ನು ಮಾತ್ರ, ವಂದನೆ ಮಾಡುವ ಕಾಲದಲ್ಲಿ, ಕಾಣುವೆನೆಂದು ಕಷ್ಟಾಯವಾದ ನಿರ್ಬಂಧವನ್ನು ತನ್ನ ಮೇಲೆ ತಾನೇ ಹೇರಿಕೊಂಡಿದ್ದಾನೆ, ಚರಕಸಂಹಿತೆ ವೈದ್ಯರಿಗೆ ಮೇಲೆ ಹೇಳಿದ ನಿಯಮ ಹೇರಿದಂತೆ. ಏಕೆಂದರೆ ಖರದೂಷಣಾದಿವಧ ಪ್ರಸಂಗದಲ್ಲಿ ರಾಮ ಏಕಾಂಗಿಯಾಗಿ ಹದಿನಾಲ್ಕು ಸಾವಿರ ರಾಕ್ಷಸರೊಂದಿಗೆ ಯುದ್ಧ ಮಾಡುತ್ತಿದ್ದಾಗ ಲಕ್ಷ್ಮಣ ಸೀತೆಯನ್ನು ಗುಹೆಯೊಳಗೆ ಕರೆದುಕೊಂಡು ಹೋಗಿ ಅಲ್ಲಿ ಅವಳನ್ನು ಕಾಪಾಡಿಕೊಂಡಿದ್ದ ! (ಅರ. 24-16) ಇಂಥ ಸಂದರ್ಭಗಳು ಭರತ ಶತ್ರುಘ್ನರಿಗೆ ಬರಲು ಕಾರಣವಿಲ್ಲವಾದ್ದರಿಂದ ಅವರು ಲಕ್ಷ್ಮಣನಂತೆ ವ್ರತ ತೊಡಬೇಕಾದ ಪ್ರಸಂಗ ಬರಲಿಲ್ಲ. ಆದ್ದರಿಂದ ಸೀತೆಯ ಸೌಂದರ್ಯ ಲಕ್ಷ್ಮಣನನ್ನು ಮಾತ್ರ ಕೆಣಕಿತೆಂದು ಆರೋಪಿಸುವುದು ನಿರಾಧಾರ.

ಸೀತೆ ತನ್ನನ್ನು 'ಋತುಕಾಲಾತಿವರ್ತಿನಿ' ಎನ್ನದೆ 'ಗರ್ಭಿಣಿ' ಎಂದೇ ನೇರವಾಗಿ ಏಕೆ ಕರೆದುಕೊಳ್ಳಲಿಲ್ಲ ? ಎಂದರೆ, ಸೀತೆಗೆ ತಾನು ಗರ್ಭಿಣಿ ಎಂದಿಷ್ಟೆ ಹೇಳುವ ಅಭಿಪ್ರಾಯವಿರಲಿಲ್ಲ. ಅದು ಲಕ್ಷ್ಮಣನಿಗೂ ಗೊತ್ತು. ಆದರೆ 'ತಾನಿನ್ನು ಪರಪುರುಷರಿಂದ ಗರ್ಭಧಾರಣೆ ಮಾಡುವಂತಿಲ್ಲ' ಎನ್ನಬೇಕಾಗಿದೆ. ಅದಕ್ಕೆ 'ನಾನು ಈಗ 'ಋತು'ವನ್ನು ಗರ್ಭಧಾರಣೆಯ ಕಾಲವನ್ನು ದಾಟಿದ್ದೇನೆ' ಎಂದೇ ಎನ್ನುತ್ತಿದ್ದಾಳೆ. ತಾನು ಗರ್ಭಿಣಿ ಎಂದಿಷ್ಟೇ ಹೇಳಿದರೆ, ಗರ್ಭಿಣಿಯಾದ ಹೆಂಡತಿಯನ್ನು ಬಿಟ್ಟಿದ್ದಾನೆ ರಾಮ ಎಂದು ರಾಮನನ್ನು ಆಕ್ಷೇಪಿಸುತ್ತಿದ್ದಾಳೆಯೆ ? ಅಥವಾ ತಾನು ಈ ಅವಸ್ಥೆಯಲ್ಲಿ ಹೇಗೆ ಬದುಕಿರಲಿ ಎನ್ನುತ್ತಿದ್ದಾಳೆಯೆ ? ಎಂದೆಲ್ಲ ಲಕ್ಷ್ಮಣನಿಗೆ ಗಲಿಬಿಲಿಯಾಗುವ ಪ್ರಸಂಗವೂ ಇಲ್ಲದಿಲ್ಲ. ತನ್ನ ಅವಸ್ಥೆಗೆ ತಾನು ಕೊರಗುತ್ತಿಲ್ಲ, ರಾಮನನ್ನು ದೂಷಿಸುತ್ತಿಲ್ಲ. 'ನಾಳೆ ನನ್ನ ಮಗುವನ್ನು ಲೋಕಾಪವಾದಕ್ಕೆ ಹೆದರಿ ರಾಮ ಸ್ವೀಕರಿಸದಿದ್ದರೆ ಹೇಗೆ' ಎಂಬ ಚಿಂತೆ ಸೀತೆಯದು ಆದ್ದರಿಂದ 'ನಾನೀಗಾಗಲೇ ಗರ್ಭಿಣಿ ಆಗಿಬಿಟ್ಟಿದ್ದೇನೆ, ಗರ್ಭಧಾರಣೆಯ ಕಾಲ ನನಗೆ ಈ ಮಗುವಿನ ಪ್ರಸವವಾಗುವವರೆಗೂ ಇರುವುದಿಲ್ಲ ಎಂದು ತಿಳಿದು ನೀನಾದರೂ ಮುಂದೆ ಹುಟ್ಟಲಿರುವ ನನ್ನ ಮಗುವನ್ನು ರಾಮನದೆಂದು ನಂಬು' ಎಂದು ಹೇಳುತ್ತಿದ್ದಾಳೆ ಸೀತೆ.

## ಒಂದು ಕೊನೆಯ ಆಸೆ

ಅಥವಾ ಋತು ಶಬ್ದಕ್ಕೆ ಎರಡು ತಿಂಗಳ ಕಾಲವೆಂಬ ಅರ್ಥ ಇಟ್ಟು ಕೊಳ್ಳೋಣ. ಈಗ ಯಾವ ತೊಂದರೆಯೂ ಇಲ್ಲ. 'ಲಕ್ಷ್ಮಣ, ಈಗ ನಾನು ಎರಡು ತಿಂಗಳ ಕಾಲ ದಾಟುವವರೆಗೂ ನೀನು ನನ್ನ ಬಳಿ ಆಶ್ರಮದಲ್ಲಿರ ಬಲ್ಲೆಯ ? ಸಾಧ್ಯವಿದ್ದರೆ ಇದ್ದು ನನ್ನ ಯೋಗಕ್ಷೇಮ ನೋಡಿ ಹೋಗು. ಅಷ್ಟರಲ್ಲಿ ನಾನು ಹೆತ್ತು ತಾಯಾಗಿ ಮಗುವಿನ ಮುಖ ನೋಡಿ ಎಲ್ಲ ದುಃಖ ಮರೆಯುವಂತಾಗುತ್ತದೆ. ಅಂದಿನ ವರೆಗೆ ನನಗೆ ಬಂಧುಗಳಾರೂ ಇಲ್ಲ. ಈ ಸಮಯದಲ್ಲಿ ನನ್ನನ್ನು ತಾಯಿಯಂತೆ ಭಕ್ತಿಯಿಂದ ಕಾಣುವ ನೀನಾದರೂ ನನ್ನ ಬಳಿ ಇದ್ದರೆ ನನ್ನ ದುಃಖ ಹಗುರಾದೀತು. ಅಲ್ಲದೆ, ಮುಂದೆ ಪ್ರಸವ ಹೇಗಾದೀತೋ ಎಂಬ ಆತಂಕದ ಗಳಿಗೆಯಲ್ಲಿ ನಿನ್ನಂಥ ಬಂಧುಗಳು ಬಳಿ ಇದ್ದರೆ ಒಳ್ಳೆಯದು' ಎನ್ನುತ್ತಾಳೆ, ಸೀತೆ.

ಕಷ್ಟಕಾಲದಲ್ಲಿ ಬಂಧುಗಳು ಹಿತ್ಯೈಷಿಗಳು ಬಳಿಯಲ್ಲಿರಬೇಕೆಂದು ಹೆಣ್ಣಾದ ಸೀತೆ ಬಯಸಿದರೆ ತಪ್ಪಾಗದು. ಹಿಂದೆ ರಾಮನ ವಿರಹದಿಂದ ಬೇಯುತ್ತ ಅಶೋಕವನದಲ್ಲಿ ದಿನಗಳನ್ನೆಣಿಸುತ್ತಿದ್ದ ಸೀತೆ, ಹನುಮಂತ ಬಂದಾಗ, ಒಂದು ದಿನದ ಮಟ್ಟಿಗಾದರೂ ನನ್ನ ಬಳಿ ಇದ್ದು ನೀನೂ ವಿಶ್ರಾಂತಿ ಪಡೆ, ನನಗೂ ದುಃಖ ಹಗುರ ಮಾಡೆಂದು ಹೇಳಿದ್ದುಂಟು (ಸುಂ. 39–20)

ಲಕ್ಷ್ಮಣ ಮಾತ್ರ ಏನೂ ಹೇಳಲು ತೋಚದೆ ಪ್ರದಕ್ಷಿಣ ನಮಸ್ಕಾರ ಮಾಡಿ ಗಟ್ಟಿಯಾಗಿ ಅತ್ತುಬಿಟ್ಟ. 'ಅತ್ತ ರಾಮ ಇತ್ತ ಸೀತೆ ಇಬ್ಬರೂ ಬೇರೆ ಯಾಗಿ ವಿರಹದಿಂದ ಬೇಯುತ್ತಿದ್ದಾರೆ. ನಾನು ಯಾರನ್ನು ಸಮಾಧಾನ ಪಡಿಸಲಿ ? ಸೀತೆಯ ಮೇಲೆ ರಾಮನಿಗೆ ಪ್ರೀತಿ ವಿಶ್ವಾಸ ಇದೆ ಎಂದು ಸೀತೆಗೆ ತಿಳಿದಿರುವುದರಿಂದ ಅವಳಾದರೊ ವಿರಹವನ್ನು ತಡೆದುಕೊಳ್ಳಬಲ್ಲಳು. ರಾಮ ನಿರಪರಾಧಿನಿಯಾದ ಪ್ರಿಯೆಯನ್ನು ಕೈಯಾರೆ ತಾನೆ ದೂರ ಮಾಡಬೇಕಾಗಿ ಬಂದುದಕ್ಕೆ ಎಷ್ಟು ನೊಂದು ಕೊಳ್ಳುವನೊ ! ಅವನನ್ನೆ ನಾನು ಸಂತೈಸಬೇಕು. ಇಷ್ಟು ಮಾತ್ರವಲ್ಲ, ಸೀತೆಯ ಬಳಿ ನಾನು ವಾಸ ಮಾಡುವಂತೆಯೂ ಇಲ್ಲ. ರಾಮನಿಲ್ಲದಾಗ ನಾನು ಸೀತೆಯ ಬಳಿ ನಿಂತರೆ ಜನ ಏನೆಂದಾರು ? ಸ್ವತಃ ಸೀತೆಯೆ ಅಂದು ಮಾಯಾ ಜಿಂಕೆಯ ಹಗರಣದಲ್ಲಿ ನನ್ನಲ್ಲಿ ಸಲ್ಲದ ಮಾತಾಡಿ

ದ್ದುಂಟು. ಆವಳ ಪಾದದರ್ಶನ ಮಾತ್ರ ಮಾಡುತ್ತಿದ್ದ ನನ್ನನ್ನು ಅವಳೆ ನಂಬಲಿಲ್ಲವೆಂದರೆ ಜನರಾದರೂ ನಂಬುವರೆ ?' ಎಂದು ಒಂದು ಕ್ಷಣ ಆಲೋಚಿಸಿ, ನುಡಿದ—'ಅಮ್ಮಾ, ಇದೇನು ಹೇಳುತ್ತಿರುವೆ ? ನನ್ನ ವ್ರತ ನಿನಗೇ ಗೊತ್ತಿದೆ. ರಾಮನಿಲ್ಲದಾಗ ನಿನ್ನ ದರ್ಶನವನ್ನೂ ಮಾಡದೆ ಕೇವಲ ನಿನ್ನ ಪಾದ ದರ್ಶನ ಮಾತ್ರ ಮಾಡುವವ ನಾನು. ಈಗ ನಿನ್ನ ಬಳಿ ವಾಸ ಮಾಡುವುದೂ ಉಂಟೆ ? ಅದು ಆಗದ ಮಾತು. ಬಳಿಯಲ್ಲಿ ರಾಮನಿದ್ದರೆ ನಾನು ಸಾಯುವ ವರೆಗೂ ನಿನ್ನ ಸೇವೆಗೇ ಇರುವವನು, ಅವನಿಲ್ಲವೆಂದರೆ ನಾನೂ ಇಲ್ಲ. ದಯವಿಟ್ಟು ಕ್ಷಮಿಸು.'

ಹೀಗೆ ಹೇಳಿ ನಮಸ್ಕಾರ ಮಾಡಿ ನದಿ ದಾಟಿ ಆಚೆ ದಡದಲ್ಲಿ ಅನಾಥೆ ಯಾಗಿ ಅಳುತ್ತಿದ್ದ ಸೀತೆಗೆ ತಾನೀಗ ಯಾವ ಬಗೆಯಿಂದಲೂ ಸಹಾಯ ಮಾಡಲು ಅಸಮರ್ಥನಾಗಿರುವೆನಲ್ಲ ಎಂದು ಶೋಕ ಪರವಶನಾಗಿ ರಥವನ್ನೇ ರುತ್ತಾನೆ. ಸೀತೆಯ ಒಂದು ಕೊನೆಯಾಸೆಯೂ ಹೀಗೆ ವಿಫಲವಾಯಿತು !

## ಸೀತಾ ಲಕ್ಷ್ಮಣರ ಪವಿತ್ರ ಬಂಧುತ್ವ

'ಸೀತಾ ಎಂದರ ಉಳುವಲ್ಲಿ ಭೂಮಿಯಲ್ಲಿ ಬೀಳುವ ಗೆರೆ, ಹೀಗೆ ಸೀತೆ 'ಬಿತ್ತನೆ'ಗೆ ಕಾತರಳಾದ 'ನೆಲ.' ಆದರೆ ಇಡಿ ರಾಮಾಯಣದಲ್ಲಿ ಸೀತೆ ಈ 'ಬಿತ್ತನೆ'ಯಿಂದ ವಂಚಿತ ಳಾದ ಹೆಣ್ಣು. 'ಲಕ್ಷ್ಮಣ' ಎಂಬ ಪದ ಲಕ್ಷ್ಮ ಲಕ್ಷಣ ಎಂಬ ಪದಗಳಿಂದ ಬಂದುದು. ಲಕ್ಷ್ಮ ಲಕ್ಷಣ ಎಂದರೆ ಗುರುತು ಗುರಿ ಜನನೇಂದ್ರಿಯ. ಲಕ್ಷ್ಮಣ ಒಳ್ಳೆಯ ಪುರುಷ ಲಕ್ಷಣ ವಿಶೇಷದ ಲೈಂಗಿಕ ಪ್ರತಿಷ್ಠೆಯ ಗಂಡುಗಲಿ. ಹೀಗೆ ಸೀತಾ ಲಕ್ಷ್ಮಣರಲ್ಲಿ ಪರಸ್ಪರ ಪ್ರೇಮಿಗಳಾಗುವ ಯೋಗ್ಯತೆ ಅರ್ಹತೆಗಳಿವೆ, ನಿಸರ್ಗವೆ (ದಂಡಕಾರಣ್ಯ) ಅವರನ್ನು ಓ ಲಕ್ಷ್ಮಣಾ ಹಾ ಸೀತಾ ಎಂದು ಕೂಗಿ ಸಾರುತ್ತದೆ.'

—ಇದೊಂದು ಬರಿಯ ನೀಚ ಕಲ್ಪನೆ, 'ಸೀತಾ' ಎಂದರೆ ಉಳುವಲ್ಲಿ ಭೂಮಿ ಯಲ್ಲಿ ಬೀಳುವ ಗೆರೆ ಎಂಬುದು ನಿಜ. ಆದರೆ ಸೀತೆ 'ಬಿತ್ತನೆ'ಗೆ ಕಾತರಳಾದ 'ನೆಲ'ವಾಗಿದ್ದು ರಾಮಾಯಣದಲ್ಲಿ ಮಕ್ಕಳಿಲ್ಲದೆ ಕೊರಗಿದುದಿಲ್ಲ. ಮುದ್ದಾದ ಇಬ್ಬರು ಮಕ್ಕಳು ಲವಕುಶರು ಹುಟ್ಟಿದ್ದಾರೆ. ಊರ್ಮಿಳೆ ಮಾಂಡವಿ ಶ್ರುತ

ಕೀರ್ತಿಯರಿಗೂ ಸೀತೆಯಂತೆಯೆ ಇಬ್ಬಿಬ್ಬರು ಮಕ್ಕಳು. ಇದರಲ್ಲಿ ಸೀತೆಯ ಬಗ್ಗೆ ಮಾತ್ರ 'ಬಿತ್ತನೆ'ಯಿಂದ ವಂಚಿತಳಾದ ಹೆಣ್ಣೆನ್ನಲು ಕಾರಣವಿಲ್ಲ.

ಪತಿಪ್ರೇಮ ತನ್ನಲ್ಲಿಲ್ಲವೆಂದೂ ಸೀತೆ ಇಡೀ ರಾಮಾಯಣದಲ್ಲಿ ಎಲ್ಲಿಯೂ ಹೇಳಿಲ್ಲ. ರಾಮ ಪರಿತ್ಯಜಿಸಿದಾಗಲೂ ಅಂಥ ಮಾತುಗಳನ್ನು ಆಕೆ ಆಡುವು ದಿಲ್ಲ. ಆದ್ದರಿಂದ 'ಸೀತಾ' ಎಂಬ ಹೆಸರು, ಅವಳು ಅಯೋನಿಜೆ, ದಿವ್ಯ ಸುಂದರಿ ಎಂಬುದನ್ನು ಸೂಚಿಸುತ್ತದೆ.

ಆದ್ದರಿಂದಲೆ ಅವಳು ವಯಸ್ಸಿಗೆ ಬಂದಾಗ ಅವಳನ್ನು ಮದುವೆ ಮಾಡಿ ಕೊಡುವ ಬಗ್ಗೆ ತಂದೆ ಜನಕನಿಗೆ ಚಿಂತೆ. ಮಗಳು ದೂರವಾಗುತ್ತಾಳೆ ಎಂದು ಭಯ. ಬಡವನಿಗೆ ಹಣ ಕಳೆದು ಹೋದರೆ ಆಗುವಂತಹ ದುಃಖ (ಅಯೋ. 118–34) ಆದರೆ ಮದುವೆ ಮಾಡಿ ಕೊಡದಿರಲಾಗುತ್ತದೆಯೇ? ಹೀಗೆ ನಾನಾ ಬಗೆಯಿಂದ ಜನಕನಿಗೆ ಚಿಂತೆ ಉಂಟಾಗಿತ್ತು ಹೊರತು ಸೀತೆಗೆ 'ತಾನು ತಂದೆಗೆ ಭಾರವಾಗಿದ್ದೇನೆ' ಎಂದು ಅನಿಸಿದಂತೆ ರಾಮಾಯಣದಲ್ಲಿ ಕಾಣುವುದಿಲ್ಲ. ಹೆಣ್ಣನ್ನು ಗಂಡುಗಳು ಒಪ್ಪದಿದ್ದಾಗ ತಾನೆ, ಆಕೆ ತಂದೆ ತಾಯಿಗಳಿಗೆ ಭಾರವಾ ಗುತ್ತಾಳೆ ? ಪ್ರಕೃತದಲ್ಲಿ ಸೀತೆಯನ್ನು ಎಲ್ಲರೂ ಬಯಸುವವರಾದ್ದರಿಂದ ಅವಳಿಗೆ ಅನುರೂಪನಾದ ವರನನ್ನು ಹುಡುಕುವ ಚಿಂತೆ ತಂದೆತಾಯಿಗಳಿಗೆ. ಅದು ಸೀತೆಗೆ ಅಭಿಮಾನಾಸ್ಪದವಾದ ಸಂಗತಿಯಾಗಬೇಕು. 'ಭಾರ' ಆದೆನೆಂದು ಆಕೆ ಅಂದುಕೊಳ್ಳಲಾರಳು.

ಹೀಗೆ 'ಸೀತೆ' ಎಂದರೆ ಅಯೋನಿಜೆಯಾದ ದಿವ್ಯಸುಂದರಿ. ಅಂಥವಳಿಗೆ 'ರಾಮಾ' ಅಂದರೆ ಸ್ತ್ರೀಯರಿಗೆ, ಮೋಹಕನಾದುದರಿಂದ 'ರಾಮ'ನೆ ಯೋಗ್ಯ ವರ.ಅವರ ಜೋಡಿ ಅನುರೂಪವಾದುದು, ಹೊರತು, ಸೀತಾ ಲಕ್ಷ್ಮಣರದಲ್ಲ. ಏಕೆಂದರೆ 'ಲಕ್ಷ್ಮಣ' ಎಂದರೆ ಸೀತಾ ರಾಮರ ಸೇವೆಗಾಗಿಯೆ ಹುಟ್ಟಿದವನು. ಅವರ ಸೇವೆಯನ್ನು 'ಲಕ್ಷ್ಮಿ' ಸಂಪತ್ತೆಂದು ತಿಳಿದವನು.(ಲಕ್ಷ್ಮೀ+ನ=ಲಕ್ಷ್ಮಣ. 'ಲಕ್ಷ್ಮ್ಯಾ ಅಚ್ಚ' ಎಂಬ ಪಾಮಾದಿ ಗಣಸೂತ್ರ ಪ್ರಕಾರ ಲಕ್ಷ್ಮೀ ಶಬ್ದಕ್ಕೆ 'ನ' ಪ್ರತ್ಯಯ, ಈಕಾರಕ್ಕೆ ಅಕಾರಾದೇಶ, ನಕಾರಕ್ಕೆ ಣಕಾರಾದೇಶ. ಹೀಗೆ ಲಕ್ಷ್ಮಣ ಶಬ್ದ ಉಂಟಾಗಿದೆ. 'ಲಕ್ಷ್ಮೀ' ಅಂದರೆ ಸಂಪತ್ತು ಉಳ್ಳವನು ಲಕ್ಷ್ಮಣ)

'ಲಕ್ಷ್ಮಣನು ಲಕ್ಷ್ಮೀಸಂಪನ್ನ' (ಬಾಲ. 18.30) ಎಂದು ವಾಲ್ಮೀಕಿಯೇ ಸ್ಪಷ್ಟವಾಗಿ ಹೇಳುತ್ತಾನೆ.

ರಾಮ ಪಟ್ಟಾಭಿಷಿಕ್ತನಾದಾಗ ಲಕ್ಷ್ಮಣನನ್ನು ಯುವರಾಜ ಪದವಿ ಸ್ವೀಕರಿಸಲು ಒತ್ತಾಯಿಸಿದ. ಕ್ರಿಯಾಶೀಲನ ಕಾಯಕದವ ಲಕ್ಷ್ಮಣ ಕೇಳಲಿಲ್ಲ. ಅವನಿಗೆ ಸೀತಾ ರಾಮರ ಸೇವೆಯೆ ಸಂಪತ್ತು. ಅವರ ಗುಣಗಳಿಗೆ ಮಾರು ಹೋಗಿ ದಾಸನಾದವ (ಕಿ.4-12) ಆದ್ದರಿಂದಲೆ ಅವರನ್ನು ಕಾಡಿನಲ್ಲಿ ಹಿಂಬಾಲಿಸಿದ. ಅವರ ರಕ್ಷಣೆಗೆ ಸದಾ ಎಚ್ಚರದಿಂದ ನಿದ್ದೆಗೆಡುತ್ತ ನಿಂತ (ಅಯೋ. 51-9) ಗುಹೆಯೊಳಗೆ ಸೀತೆಯನ್ನು ಆತ ಸರ್ಪ ನಿಧಿಯನ್ನು ಕಾಪಾಡುವಂತೆ ಕಾಪಾಡಿದ.

ಸೀತೆ ಒಂದು ದೊಡ್ಡ ನಿಧಿಯಂತೆ, ಲಕ್ಷ್ಮಣ ಹಾವಿನಂತೆ ಎಂಬುದು ಅವರ ಸ್ವಭಾವದಿಂದ ತಿಳಿಯಬಹುದು. ಸೀತೆ ಜನಕನಿಗೆ ದೊರಕಿದುದು ದೊಡ್ಡನಿಧಿ ಸಿಕ್ಕಿದಂತೆ ಆಯಿತೆಂದೂ ಬಳಿಕ ಒಳ್ಳೆಯ ಸಮೃದ್ಧಿ ಆಯಿತೆಂದೂ ಅವಳೆ ಅನಸೂಯೆಗೆ ಹೇಳುತ್ತಾಳೆ. (ಅಯೋ. 118-32) ಲಕ್ಷ್ಮಣನಂತೂ ಸೀತಾ ರಾಮರಿಗೆ ಯಾರೇ ವಿರೋಧ ಮಾಡಲಿ ಕೃಷ್ಣಸರ್ಪದಂತೆ ರೋಷದಿಂದ ಫೂತ್ಕರಿಸುವವನೆಂದು ರಾಮಾಯಣದುದ್ದಕ್ಕೂ ಕಾಣುತ್ತದೆ. ಸರ್ಪಕ್ಕೆ ನಿಧಿಯಿಂದೇನಾಗಬೇಕಾಗಿಲ್ಲ. ಆದರೂ ರಕ್ಷಿಸ ತ್ತದೆ. ರಕ್ಷಣೆಯಿಂದಲೇ ಅದಕ್ಕೆ ತೃಪ್ತಿ. ಬಲಾತ್ಕಾರದಿಂದ ಅದನ್ನೋಡಿಸಿ ನಿಧಿಯನ್ನೆತ್ತಿಕೊಂಡರೆ ಅದು ದಕ್ಕುವುದಿಲ್ಲ. ರಾವಣ ಹಾಗೇ ಮಾಡಿ ಮೋಸದಿಂದ ಮಾರೀಚನ ಸಹಾಯದಿಂದ ಲಕ್ಷ್ಮಣನನ್ನು ದೂರಮಾಡಿ ಸೀತೆಯನ್ನೆತ್ತಿಕೊಂಡು, ಸರ್ವನಾಶ ಹೊಂದಿದ. ಮಣ್ಣಿನ ಮಗಳು ಸೀತೆಗೆ ಹುತ್ತದೊಳಗಿನ ಹಾವಿನ ಸ್ವಭಾವದ ಲಕ್ಷ್ಮಣನ ರಕ್ಷಣೆ ಸಹಜ. 'ಸೀತಾ ಲಕ್ಷ್ಮಣ' ಎಂಬ ನಿಸರ್ಗದ ಕೂಗೂ ಈ ಸಂಬಂಧವನ್ನೇ ಸೂಚಿಸುತ್ತದೆ ಎಂದೇಕೆ ಹೇಳಬಾರದು ?

ಹೀಗೆ ಶುದ್ಧ ಚಾರಿತ್ರ್ಯಕ್ಕೇ ಇನ್ನೊಂದು ಹೆಸರು ಸೀತೆ, ಪತಿನಿಷ್ಠೆಯೆ ರೂಪಗೊಂಡು ಬಂದವಳು ಸೀತೆ. ಗರ್ಭಿಣಿಯಾದ ತನ್ನನ್ನು ರಾಮ ಪರಿತ್ಯಾಗ ಮಾಡಿದರೂ 'ಪತಿಯೇ ನಾರಿಗೆ ದೇವತೆ, ಅವನ ಹಿತವೆ ಆಕೆಗೆ ಪ್ರಾಣಕ್ಕಿಂತ ಪ್ರಿಯ' ಎನ್ನುತ್ತ ರಾಮನನ್ನು ಒಂದಿಷ್ಟು ದೂಷಿಸದೆ ದೂರ

ನಿಂತವಳು ಸೀತೆ. ಬಳಿಕ ಮುದ್ದಾದ ಇಬ್ಬರು ಮಕ್ಕಳನ್ನು ಹೆತ್ತು ಹೊತ್ತು ಬೆಳೆಸಿ ಅವರಿಂದ ರಾಮನ ಕಥೆಯನ್ನು ಹಾಡಿಸಿ ಕೇಳಿ ನಲಿದ ಸಾಧ್ವಿ ಸೀತೆ.

ಸೀತೆಗೆ ರಾಮ ಮತ್ತೆ ತನ್ನ ಶೀಲವನ್ನು ರುಜುವಾತು ಪಡಿಸಬೇಕೆಂದು ಆಜ್ಞೆ ಮಾಡಿದಾಗ ಆಕೆ ತನ್ನ ಚಾರಿತ್ರ್ಯವನ್ನೂ ಪ್ರಾಮಾಣಿಕತೆ ಮತ್ತು ಶೀಲವನ್ನೂ ಎಲ್ಲರೆದುರಿನಲ್ಲೂ ಪ್ರಕಟಿಸಿ ಸರ್ವ ಸ್ವತಂತ್ರಳಾಗಿ ತನ್ನದೇ ಆದ ನಿರ್ಧಾರದಲ್ಲಿ ರಾಮನನ್ನು ಆಗಲುತ್ತಾಳೆ. ವಿವಾಹ ವಿಚ್ಛೇದಿತಳಾಗುತ್ತಾಳೆ. ಆ ವಿವಾಹ ವಿಚ್ಛೇದಕ್ಕೆ ಆ ಮಗಳ ಸ್ವಾತಂತ್ರ್ಯಕ್ಕೆ ತಾಯಿಯೆ ಭೂಮಿಯೆ ಮಗಳನ್ನು ಅಭಿನಂದಿಸುತ್ತಾಳೆ.'ದೈವಂ ಹಿ ಪತಿಃ ಸ್ತ್ರಿಯಾಃ(ಉ95-10) ಎಂಬ ವಾಲ್ಮೀಕಿಯ ಋಷಿ ವಾಕ್ಯವನ್ನು ಉಲ್ಲಂಘಿಸಿ ತವರಿಗೆ ಬಂದ ಮಗಳನ್ನು ತಬ್ಬಿಕೊಳ್ಳುತ್ತಾಳೆ.

—ಈ ಮಾತು ಬಹಳ ವಿಚಿತ್ರ. ರಾಮ ಸೀತೆಯನ್ನು ತ್ಯಾಗ ಮಾಡಿದನೆಂದರೆ ಅದುವೆ ವಿವಾಹ ವಿಚ್ಛೇದ, ಇನ್ನು ಸೀತೆ ಬೇರೆ ವಿವಾಹ ವಿಚ್ಛೇದವಾಗುವುದಾದರೂ ಹೇಗೆ ?

'ದೈವತಂ ಹಿ ಪತಿಃ ಸ್ತ್ರಿಯಾಃ' ಎಂಬುದನ್ನು 'ಉಲ್ಲಂಘಿಸುವವಳಲ್ಲಿ ಚಾರಿತ್ರ್ಯ ಪ್ರಾಮಾಣಿಕತೆ ಶೀಲವಾದರೂ ಏನಿದ್ದೀತು ?'

ತನಗೆ ಲಭಿಸಿದ ಗಂಡನಲ್ಲಿ ಸಂತೃಪ್ತಿಕಾಣದೆ ತನ್ನನ್ನು ಪ್ರೀತಿಸುವ ಪ್ರಿಯಕರನತ್ತ ವಾಲುವುದು ಪರಿಶುದ್ಧತೆಯೆ. ಅದಕ್ಕೆ ದೈಹಿಕವಾದ ಕಾಮದ ಆಯಾಮವಿದ್ದರೂ ಆ ಕಾಮನೆ ಪ್ರೇಮದ ಆತ್ಮೀಯತೆಯೆ'

ಎನ್ನುತ್ತ ಸೀತೆ ರಾಮನನ್ನು ಬಿಟ್ಟು ಲಕ್ಷ್ಮಣನನ್ನು ಬಯಸಿದುದೂ ಪ್ರಾಮಾಣಿಕತೆ ಶುದ್ಧತೆ ಎನ್ನುವುದಾದರೆ ಸೀತೆ ಏನೆಂದು ಶಪಥ ಮಾಡಬೇಕಾಗಿತ್ತು ? ರಾಮಾಯಣದಲ್ಲಿ ಹೇಳಿದಂತೆ 'ಮನೋವಾಕ್ಕಾಯಗಳಿಂದ ರಾಮನನ್ನೇ ಆರಾಧಿಸುತ್ತೇನೆ, ಇನ್ನೊಬ್ಬರನ್ನು ನಾನು ಮನಸ್ಸಿನಲ್ಲಿಯೂ ಬಯಸುವುದಿಲ್ಲ' ಎಂದು ಮೂರು ಬಾರಿ ಶಪಥ ಮಾಡಿದ್ದು ತಪ್ಪಾಗುವುದಿಲ್ಲವೇ ? 'ಮನೋವಾಕ್ಕಾಯಗಳಿಂದ ರಾಮನನ್ನು ಆರಾಧಿಸುವುದಿಲ್ಲ, ಅವನಲ್ಲಿ ನನಗೆ ಸಂತೃಪ್ತಿಯಿಲ್ಲ, ಲಕ್ಷ್ಮಣನನ್ನೆ ಬಯಸುತ್ತೇನೆ' ಎಂದೆ ಶಪಥ ಮಾಡಬೇಕಾಗಿತ್ತಲ್ಲವೆ ? ಲಕ್ಷ್ಮಣನನ್ನೆ ಬಯಸುತ್ತೇನೆ ಎಂದರೂ ತಪ್ಪಾಗುತ್ತದೆ ! 'ರಾವಣನ ಅನುಗ್ರಹ ಸ್ಪರ್ಶವನ್ನೂ

ಗುಪ್ತವಾಗಿ ಆನಂದಿಸಿದವಳಲ್ಲವೆ ? 'ಮಾಯಾ ಜಿಂಕೆಯಾಗಿ ಕಣ್ಮನಗಳನ್ನು ಸೂರೆಗೊಂಡ ಮಾರೀಚನನ್ನೂ ಪ್ರೇಮಿಸಿದವಳಲ್ಲವೇ? ಆದರೆ ಗಂಡಿನ ಬೇಟೆಯಲ್ಲಿಯೆ ತಿರುಗುವ ಶೂರ್ಪಣಖಿಗೇ ಗೊತ್ತು ಸೀತೆ ಎಂಥ ಪತಿವ್ರತೆ ಎಂಬುದು. 'ಸೀತೆ ರಾಮನ ಪ್ರೀತಿಯ ಧರ್ಮಪತ್ನಿ. ಸದಾ ಪತಿಯ ಪ್ರಿಯ ಹಿತದಲ್ಲಿಯೇ ನಿರತಳಾದವಳು' (ಅರ. 34-15) ಎನ್ನುತ್ತಾಳೆ. ಅಂಥ ಸೀತೆ 'ದೈವತಂ ಹಿ ಪತಿಃ ಸ್ತ್ರಿಯಾಃ' ಎಂಬ ನಿಯಮವನ್ನು ಉಲ್ಲಂಘಿಸಿಯಾಳೆ ? ಉಲ್ಲಂಘಿಸುವವಳಾದರೆ ಪತಿಯಾಜ್ಞೆಗೆ ತಲೆ ಬಾಗಿ ಶಪಥ ಮಾಡುವುದಾದರೂ ಅವಳ ಸ್ವಾಭಿಮಾನಕ್ಕೆ ಕುಂದಲ್ಲವೇ ? ವಿವಾಹ ವಿಚ್ಛೇದನ ಮೊದಲೆ ಆಗಿದ್ದುದರಿಂದ ಸ್ವತಂತ್ರಳಾಗಿ ತವರಿಗೇ ಹೋಗಬೇಕಾಗಿತ್ತು. ತನ್ನ ಶೋಷಣೆಗೈದ ಪತಿ ಹಾಗೂ ಸಮಾಜದ ಮುಂದೆ ತಲೆ ಬಾಗುವ ದೈನ್ಯವೇಕೆ ತೋರಿದಳು ?

'ಸೀತೆ ಸತೀತ್ವವನ್ನು ರುಜುವಾತುಪಡಿಸುವುದು ಸ್ವಾಭಿಮಾನದಿಂದ'

ಎಂದರೂ ಸತೀತ್ವವೆಂದರೇ ಏನೆಂಬುದನ್ನು ಹೇಳಬೇಕು.

'ಅಗ್ನಿ ಪರೀಕ್ಷೆಯ ಕಾಲದಲ್ಲಿ ರಾಮನೆ ಸೀತೆಗೆ ಲಕ್ಷ್ಮಣನಲ್ಲಿ ಮನಸ್ಸು ಮಾಡು ಎನ್ನುವ ಸೂಚನೆ ಕೊಟ್ಟಿದ್ದರಿಂದ ಅದನ್ನು ಸೀತೆ ಅನುಮೋದಿಸುತ್ತಾಳೆ. ಆ ಮೂಲಕ ತಾನು ತನ್ನ ಮಟ್ಟಿಗೆ ಧರ್ಮ ಚ್ಯುತಿಯನ್ನು ಮಾಡುತ್ತಿಲ್ಲವೆಂಬ ಆತ್ಮ ವಿಶ್ವಾಸ ಅವಳಿಗಿದೆ'

—ಎನ್ನುವುದಂತೂ ಸೀತೆಯ ಮಾತಿಗೇ ವಿರುದ್ಧ. 'ಹಿರಿಯರು ಕನ್ಯೆಯನ್ನು ಯಾರಿಗೆ ಧಾರೆ ಎರೆದು ಕೊಡುತ್ತಾರೊ ಸತ್ತ ಮೇಲೂ ಅವಳು ಅವನ ಪತ್ನಿಯೆ ಆಗಿರುತ್ತಾಳೆ (ಅಯೋ. 29-18) ಎನ್ನುವವಳು ಸೀತೆ. ಅವಳ ದೃಷ್ಟಿಯಲ್ಲಿ ಇದುವೆ ಸತೀತ್ವ. ವಿವಾಹ ವಿಚ್ಛೇದನವೆಂಬ ಪದ ಅವಳಿಗೆ ಅರ್ಥ ಶೂನ್ಯ, ಲಕ್ಷ್ಮಣನನ್ನೂ ಬಯಸಿ ಸತೀತ್ವವನ್ನು ರುಜುವಾತು ಪಡಿಸಬೇಕೆಂದರೆ, ಅದು ಇದ್ದರೆ ತಾನೆ ?

ಪತಿ ಮೃತನಾದಾಗ, ಮಕ್ಕಳಾಗಿರದಿದ್ದರೆ, ಹೆಣ್ಣು ಮೈದುನನನ್ನು ಕೂಡಬಹುದು. (ಇದೂ ಕಲಿಯುಗದ ಧರ್ಮವಲ್ಲ.) ಪತಿ ಜೀವಂತನಿದ್ದು ಪರಿತ್ಯಕ್ತೆಯಾದವಳು ಮೈದುನನನ್ನೂ ಕೂಡುವಂತಿಲ್ಲ. ಬಂಧುಗಳ ರಕ್ಷಣೆಯಲ್ಲಿ ಅವರ ಆಶ್ರಯದಲ್ಲಿ ಇರಲು ಮಾತ್ರ ಶಾಸ್ತ್ರದ ಸಂಮತಿ. ಆದ್ದರಿಂದ

ರಾಮ ಸೀತೆಗೆ 'ಲಕ್ಷ್ಮಣನಲ್ಲಿ ಮನಸ್ಸು ಮಾಡು' ಎಂದಿದ್ದರೆ ಲಕ್ಷ್ಮಣನ ಆಶ್ರಯದಲ್ಲಿರಲು ಮನಸ್ಸು ಮಾಡು ಎಂದಿಷ್ಟೆ ಅರ್ಥ.

ಹಾಗಾದರೆ ರಾಮನಿಗೆ ಸರಿಯಾಗಿ ಮಾತಾಡಲು ಬರದು ಎಂದು ಒಪ್ಪಬೇಕಾಗು ತ್ತದೆ. ರಾಮ ಮಾತುಗಾರರಲ್ಲಿ ಶ್ರೇಷ್ಠ 'ವದತಾಂ ವರ' ಎಂದು ವಾಲ್ಮೀಕಿ ಬಿರುದು ಕೊಟ್ಟಿದ್ದಾನೆ, ಹನುಮಂತನ ಮಾತನ್ನು ಹೊಗಳುವಾಗ ರಾಮ ಮೆಚ್ಚಿದ ಗುಣಗಳಲ್ಲಿ ಅಸಂದಿಗ್ಧತೆಯೂ ಒಂದು. 'ಕುರು ಬುದ್ಧಿಂ' 'ನಿವೇಶಯ ಮನಃ' ಎಂಬ ಸಂದಿಗ್ಧವಾದ ಪದಗಳನ್ನೇಕೆ ಉಪಯೋಗಿಸಿದ ?

'ಕಶ್ಚಿತ್ಕಾಂತಾ' ಪೂರ್ವಪಕ್ಷ ಮಾಡುವವರಿಗೆ ಎಲ್ಲ ಒಂತೂ ಸಂದಿಗ್ಧವೆ. ಹಿಂದು ಮುಂದು ನೋಡಬೇಕು ರಾಮ ಮೊದಲಿಗೇ ಹೇಳಿದ್ದಾನೆ 'ಪರಗೃಹ ದಲ್ಲಿದ್ದ ಹೆಣ್ಣನ್ನು ಯಾವ ತೇಜಸ್ವಿ ಪುರುಷ ತಿರುಗಿ ಸ್ವೀಕರಿಸಿಯಾನು ? (ಯು. 115-19) ಇಂಥ ಹೆಂಡತಿಯನ್ನೇ ಇಟ್ಟುಕೊಳ್ಳಲೊಪ್ಪದ 'ತೇಜಸ್ವಿ' ಪುರುಷರು ಪರಿತ್ಯಕ್ತೆಯಾದ ಪರರ ಹೆಣ್ಣನ್ನು ಸ್ವೀಕರಿಸಲೊಪ್ಪುವರೆ ? ಲಕ್ಷ್ಮಣ ನಲ್ಲಿ ಮನಸ್ಸು ಮಾಡು ಎಂದರೆ ಅದು ಸಂಭವನೀಯವೆ ? ಆದ್ದರಿಂದಲೆ 'ನೀನೆಲ್ಲಿಗಾದರೂ ಹೋಗು. ಇಗೊ, ಹತ್ತು ದಿಕ್ಕುಗಳಿವೆ' ಎಂದು ಮೊದಲೆ ಹೇಳಿದ್ದ, ರಾಮ. (ಯು. 115-18) ಯಾರಾದರೂ ನಿನಗೆ ಆಶ್ರಯ ಕೊಟ್ಟಾರು ಎಂದೆ ಅರ್ಥ. ಯಾರು ಎಂದರೆ ಲಕ್ಷ್ಮಣ ಭರತ ಶತ್ರುಘ್ನ ಸುಗ್ರೀವ ವಿಭೀಷಣರಿದ್ದಾರೆ ಎನ್ನುತ್ತಾನೆ, ರಾಮ. ಶಾಸ್ತ್ರ ಪ್ರಕಾರ ಗಂಡ ಸತ್ತಾಗ ಮೈದುನನನ್ನು ಹೆಣ್ಣು ಕೂಡಬಹುದೆಂದಿದ್ದರೂ ಇಲ್ಲಿ ರಾಮನಿದ್ದಾನೆ ಮಾತ್ರವಲ್ಲ ಸುಗ್ರೀವ ವಿಭೀಷಣರನ್ನೂ ಹೆಸರಿಸುತ್ತಾನೆ. ಆದ್ದರಿಂದ ಇಲ್ಲಿ ಕೂಡುವ ಪ್ರಶ್ನೆಯೆ ಇಲ್ಲ, ಕೇವಲ ಆಶ್ರಯದ ಪ್ರಶ್ನೆ ಎಂಬುದು ಸ್ಪಷ್ಟ.

ಸುಗ್ರೀವ ಅಣ್ಣನ ಹೆಂಡತಿಯನ್ನು ಕೂಡಿದುದು ಅಣ್ಣ ಸತ್ತಾಗ, ಸೀತೆಗೆ ಅಂಥ ಸಂದರ್ಭ ಬಂದಿಲ್ಲ.

ಸೀತೆ ರಾಮನಲ್ಲೆ ಅನುರಕ್ತಳಾಗಿದ್ದರೆ ಶಪಥ ಮಾಡಿ ಭೂಪ್ರವೇಶವೇಕೆ ಮಾಡಿದಳು ? ಎಂಬ ಪ್ರಶ್ನೆ ಸಹಜ. ಆದರೆ ಆಕೆಗೆ ಅಯೋಧ್ಯೆಯ ಪ್ರಜೆಗಳ

ಬಗ್ಗೆ ಅಸಮಾಧಾನಪಿರಬೇಕು. ನಿಷ್ಕಾರಣ ಅಪವಾದ ಹೊರಿಸಿದರೆಂದು. ತನ್ನ ಪ್ರೀತಿ ಪಾತ್ರರಾದ ಪ್ರಜೆಗಳೆ ಹೀಗೆ ಮಾಡಿದರೆಂದು. ಈ ಕಾರಣದಿಂದಲೆ ರಾಮನೂ ಮಹಾ ಪ್ರಸ್ಥಾನ ಕೈಗೊಂಡ.

ವಸ್ತುತಃ ಹತ್ತು ಸಾವಿರ ವರ್ಷಗಳ ಕಾಲ ತಾನು ಪತಿ ದೇವನಿಗೆ ದಾಂಪತ್ಯ ಸುಖ ನೀಡಿ ಇಬ್ಬರು ಮುತ್ತಿನಂಥ ಮಕ್ಕಳನ್ನು ಹೆತ್ತು ಸಾಕಿ ಸಲಹಿ ರಾಮನಿಗಿತ್ತು ತನ್ನ ಕರ್ತವ್ಯ ಪೂರೈಸಿರುತ್ತೇನೆ ತನಗೂ ರಾಮನಿಗೂ ಬಂದ ಅಪವಾದವನ್ನೂ ಶಪಥದಿಂದ ಪರಿಹರಿಸಿಕೊಂಡಿದ್ದೇನೆಂಬ ಸಂತೃಪ್ತಿ ಯಿಂದ ಮುತ್ತೈದೆಯಾಗಿ ಮಣ್ಣಿನಿಂದ ಮರಳಿ ಮಣ್ಣಿಗೆ ನಡೆದಳೆಂದರೆ ತಪ್ಪಾಗದು. ಪರಲೋಕದಲ್ಲಿ ಪತಿಯನ್ನು ಇದಿರುಗೊಳ್ಳಲೆಂದೆ ಇಹಲೋಕವನ್ನು ತ್ಯಜಿಸಿದಳು ಸೀತೆ. 'ದೈವತಂ ಹಿ ಪತಿ: ಸ್ತ್ರಿಯಾ :' ಎಂಬ ಋಷಿವಾಣಿಯನ್ನು ಅಕ್ಷರಶಃ ನಿಜಗೊಳಿಸಿದ್ದಾಳೆ, ಆಕೆ ಭಾರತದ ಆದರ್ಶನಾರಿಯರಲ್ಲಿ ಮೊದಲಿಗಳೆನಿಸಿದ್ದಾಳೆ.

## ಪಟದ ರಾಮಾಯಣ

'ಹೆಳವನ ಕಟ್ಟೆ ಗಿರಿಯಮ್ಮನ 'ಲವಕುಶರ ಕಾಳಗ'ದ ಪಟದ ಸಂಧಿಯಲ್ಲಿ ರಾಮ ಲಕ್ಷ್ಮಣರು ಒಮ್ಮೆ ಬೇಟೆಗೆ ಹೋಗುತ್ತಾರೆ. ಬೇಟೆಯಾಡಿ ದಣಿದು ವಿಶ್ರಾಂತಿ ಪಡೆಯುತ್ತಿದ್ದ ರಾಮನಿಗೆ ದುಃಸ್ವಪ್ನವಾಯಿತು. ಇತ್ತ ಶೂರ್ಪಣಖಿ ಕೊರವಿಯಾಗಿ ಸೀತೆಯ ಬಳಿಗೆ ಬಂದಳು. ಅನ್ನವಸ್ತ್ರ ಹೊನ್ನು ಹಣ ಒಲ್ಲದೆ ರಾವಣನ ಪಟವನ್ನು ಮಾತ್ರ ಸೀತೆಯ ಕೈಯಿಂದ ಬರೆಸಿ ಜೀವದಾನ ಮಾಡಿಸಿದಳು. 'ಎಂದೆಂದಿಗು ಅಳಿಯದಿರು, ಕಿರಿಯ ಲಕ್ಷ್ಮಣ ದೇವ ಹೊಡೆದರೆ ಮಡಿ' ಎಂದು. ಕೊರವಿ ಅದನ್ನೆತ್ತಿ ಮೇಲೆ ಹಾರಿ ಬಿಟ್ಟು ಹೊರಟು ಹೋದಳು. ಪಟ ಕುಣಿಯ ತೊಡಗಿತು 'ಯಾರಿಗೂ ಅಸುಗೊಳ್ಳದೆ ಕುಣಿಯಿತು' 'ಇಂದಿನ ವಿಧಿಯನೆ ಕಳೆಯಲಾರೆನೆಂದು ಬಂದೊರಗಿದಳು ಮಂಚದಲೆ. ಛಂದಾಗಿ ಸೀರೆಯ ಮುಸುಕಿನಲಿ ಆ ಪಟ ಬಂದೆರಗಿತು ತೋಳ ಎಡೆಗೆ.' ಸೀತೆ ಅದನ್ನು ಹಾಸಿಗೆಯ ಕೆಳಗೆ ಹಿಡಿದಿಟ್ಟು ಮಲಗಿದಳು. ಬೇಟೆಯಿಂದ ಬಂದ ರಾಮ ಕಂಡು ಕೋಪಿಸಿದ. ಒಡನೆ ಲಕ್ಷ್ಮಣ ಪಟವನ್ನು ಹರಿದು ಹಾಕಿದ. ಅದಕ್ಕೂ ಕೋಪಿಸಿಕೊಂಡು ರಾಮ, ಜಾನಕಿಯನ್ನು ಕೊಂದು ಬಾರೆಂದು ವಿಧಿಸಿ, ಲಕ್ಷ್ಮಣನನ್ನು ಜಾನಕಿಯೊಡನೆ ವನಕ್ಕೆ ಕಳಿಸಿದ. ಲಕ್ಷ್ಮಣನು ಖಡ್ಗವನ್ನೆತ್ತಲು ದೇವತೆಗಳು ಅಡ್ಡ ಬಂದರು. ಕೊನೆಗೆ. ಗುರುತನ್ನು ಮಾತ್ರ ಒಯ್ದು 'ಸೀತೆಯನ್ನು ಕೊಂದು

ಬಂದೆನೆ'ಂದು ಲಕ್ಷ್ಮಣನೆಂದಾಗ ರಾಮನಿಗೆ ವ್ಯಸನವಾಯಿತು. 'ಸಿಟ್ಟಿನ ವೇಳೆಗೆ ಮೂಗು ಕೊಯ್ದರೆ ಅಣ್ಣಾ ಶಾಂತವೇಳೆಗೆ ಹತ್ತುವುದೆ' ಎಂದ ಲಕ್ಷ್ಮಣ. ಈ ಪಟದ ರಾಮಾಯಣದಲ್ಲಿ ಸೀತೆ ರಾವಣನ ದೇಹದೊಂದೊಂದು ಭಾಗವನ್ನು ಚಿತ್ರಿಸುತ್ತ ಸವಿಯು ತ್ತಾಳೆ. ಆ ಚಿತ್ರಾನುಭವವನ್ನು ನಿಜಗೊಳಿಸಲೊ ಎಂಬಂತೆ ಅವಕ್ಕೆ ಜೀವದಾನ ಮಾಡು ತ್ತಾಳೆ, ಎಂದೆಂದಿಗೂ ಅಳಿಯದಂತೆ, ಆದರೆ ಕಿರಿಯ ಲಕ್ಷ್ಮಣದೇವ ಹೊಡೆದರೆ ಮಣಿಯು ವಂತೆ. ತನ್ನ ಮನದಲ್ಲಿ ಹುದುಗಿ ಚಿತ್ರವಾಗಿ ಹೊರಬಿದ್ದ ಮನದನ್ನನ ಸಾವನ್ನು ರಾಮನಿಂದ ಇಚ್ಛಿಸುವುದಿಲ್ಲ. ತನ್ನ ಇಂಗಿತದ ಮೊಟ್ಟಮೊದಲ ಮನದನ್ನನಾಗಿದ್ದ ಲಕ್ಷ್ಮಣನಿಂದ ಅಪೇಕ್ಷಿ ಸುತ್ತಾಳೆ. ರಾವಣನ ಸಾವು ಆಗುವುದಿದ್ದರ ಲಕ್ಷ್ಮಣನಿಂದ ಮಾತ್ರ ಆಗಲಿ ಎನ್ನುವಲ್ಲಿ ತನ್ನ ಪ್ರೇಮದ ಅಗ್ರಪೂಜೆಯನ್ನು ಲಕ್ಷ್ಮಣನಿಗೆ ಸಲ್ಲಿಸುತ್ತಿದ್ದಾಳೆ. ಪಟವು ಕುಣಿದು ಛಂದಾಗಿ ಸೀರೆಯ ಮುಸುಕಿನಲ್ಲಿ ಸೇರಿ ಸೀತೆಯ ತೋಳ ಎಡೆಗೆ ಬಂದೆರಗುವುದೂ ಸೀತಾ ರಾವಣರ ಸಮಾಗಮವನ್ನು ಪೂರ್ಣಗೊಳಿಸುತ್ತದೆ. ಹಾಸಿಗೆಯ ಕೆಳಗೆ ಹಿಡಿದಿಟ್ಟು ಮಲಗುವುದು ವಿಚಿತ್ರವಾದ ಬಚ್ಚಿಡುವಿಕೆ ಈ ಸಮಾಗಮವನ್ನು ಪ್ರಬಲವಾಗಿ ಪ್ರಷ್ಟೀಕರಿಸುತ್ತದೆ'—

ಈ ವಿಮರ್ಶೆಯೂ ನ್ಯಾಯವಾದುದಲ್ಲ. ಗಿರಿಯಮ್ಮ ಹರಿದಾಸ ಪಂಥಕ್ಕೆ ಸೇರಿದ ಓರ್ವ ಭಕ್ತೆ, ಅವಳ ಮಾತಿಗೆ ವಿಪರೀತಾರ್ಥ ಗ್ರಹಿಸುವುದು ವಿಡಂಬನೆಯೆ ಸರಿ.

ಕೊರವಿಯ ಮಾತು ಕೇಳಿ ಅದರಂತೆ ನಡೆದರೆ ಅದು ಇಂಥ ಗೊಂದಲ ದಲ್ಲಿ, ಅನರ್ಥದಲ್ಲಿ ಪರ್ಯವಸಾನವಾದೀತೆಂದು ಸೀತೆ ಎಣಿಸಿರಲಾರಳು. 'ಇಂದಿನ ವಿಧಿಯನೆ ಕಳೆಯಲಾರೆನೆ'ಂದು ಹತಾಶಳಾಗಿ ಮಂಚದಲ್ಲಿ ಬಂದೊರಗಿ ದರೆ ಅಲ್ಲಿಯೂ ಪಟವು 'ಛಂದಾಗಿ ಸೀರೆಯ ಮುಸುಕಿನಲ್ಲಿ ಸೇರಿ ತೋಳ ಎಡೆಗೆ ಬಂದೆರಗ' ಬೇಕೆ ! ಎಂಥವರಿಗೂ ಅಯ್ಯೋ ಪಾಪ ! ಅನಿಸದಿರದು. ಇಂಥ ಗಂಭೀರಸನ್ನಿವೇಶವನ್ನು ಪ್ರಣಯ ಸನ್ನಿವೇಶವೆಂದು ಬಗೆಯುವುದು ಸಹೃದಯತೆ ಎನಿಸುವುದಿಲ್ಲ,

ಗಂಭೀರ ಶೋಕ ಕರುಣೆಗಳ ನಡುವೆ ಲಕ್ಷ್ಮಣ ರಾಮನಿಗೆ 'ಸಿಟ್ಟಿನ ವೇಳೆಗೆ ಮೂಗು ಕೊಯ್ದರೆ' ಎಂದು ಮುಂತಾಗಿ ಹಾಸ್ಯ ಚಟಾಕಿ ಹಾರಿಸು ವುದನ್ನು ಕಂಡರೆ ಗಿರಿಯಮ್ಮ ಎಷ್ಟು ಹಾಸ್ಯ ಪ್ರಿಯಳು ಎಂದು ಊಹಿಸ

ಬಹುದು. ಅದರಿಂದಲೆ ಆಕೆ ಪಟದ ಕುಣಿತ, ಸೀರೆಯ ಮುಸುಕಿನಾಟ, ಪಟವನ್ನು ಹಾಸಿಗೆಯ ಕೆಳಗೆ ಹಿಡಿದಿಟ್ಟು ಬಚ್ಚಿಡುವ ಯತ್ನ ಮುಂತಾದ ಹಾಸ್ಯ ಪ್ರಸಂಗಗಳನ್ನು ವಿನೋದಕ್ಕಾಗಿ ಹೆಣೆದು ರಾಮಾಯಣ ಬರೆದಿದ್ದಾಳೆ, ಅದೊಂದು ದೊಡ್ಡ 'ರಾವಣಾಯಣ'ವಾದೀತೆಂದು ಆಕೆ ಪ್ರಾಯಶಃ ಆಲೋಚಿಸಿರಲಿಕ್ಕಿಲ್ಲ.

ಸಹೃದಯರು ಕಥೆಯನ್ನು ಹೀಗೆ ತೆಗೆದುಕೊಳ್ಳಬೇಕು —ಕೊರವಿ ನಿಜದಲ್ಲಿ ಯಾರೆಂದು ತಿಳಿಯದ ಸೀತೆ ಮೋಸ ಹೋಗಿದ್ದಳು. ನನ್ನ ರಾಮ ಕೊಂದ ರಾಕ್ಷಸ ಸಾವನ್ನಪ್ಪಿದನಲ್ಲ ಎಂದು ಹೆಮ್ಮೆಯಿಂದ, ಅವನ ಆಕಾರವನ್ನು ಕೊರವಿಗೆ ತೋರಿಸಿದಂತಾಗುತ್ತದೆ ಎಂದುಕೊಂಡು ಚಿತ್ರ ಬರೆಯಲು ಒಪ್ಪಿದಳು. ರಾವಣ ತನ್ನ ಲೋಕೋತ್ತರ ಸೌಂದರ್ಯಕ್ಕೆ ಮರುಳಾಗಿ ಹೇಗೆ ನಾಶ ತಂದುಕೊಂಡನೆಂದು ಹೆಮ್ಮೆಯಿಂದಲೇ ನೆನೆಯುತ್ತಾ ಆತ ತಿರುಗಿ ಜೀವಂತನಾಗಿ ಬಂದರೆ ಅವನ ಸ್ವಭಾವದಲ್ಲಿ ಪರಿವರ್ತನೆ ಏನಾದರೂ ಕಂಡೀತೆ ಎಂದು ನೋಡಿದಂತೆಯೂ ಆಗುತ್ತದೆ ಎಂದುಕೊಂಡು ಚಿತ್ರಪಟಕ್ಕೆ ಜೀವದಾನ ಮಾಡಲೂ ಒಪ್ಪಿದಳು, ಸ್ವಭಾವ ಪರಿವರ್ತನೆಯಾಗದೆ ಪಟದ ರಾವಣ ಯದ್ವಾತದ್ವಾ ಕುಣಿಯ ತೊಡಗಿದರೆ ರಾಮನೇನಾದರೂ ಬೇಟೆಯಿಂದ ಹಿಂತಿರುಗಿ ಬಂದು ಕುಣಿಯುವ ಪಟವನ್ನು ಕಂಡರೆ, 'ಎಂಥ ಅನುಚಿತವಾದ ಆಟ !' ಎಂದು ಕೋಪಿಸಿಕೊಂಡು ಪಟವನ್ನು ಹರಿಯಲು ಮುಂದಾಗದಿದ್ದರೆ ಪರಿಸ್ಥಿತಿ ವಿಕೋಪಕ್ಕೆ ಹೋದೀತು. ಅಂಥ ಸಮಯದಲ್ಲಿ ನನ್ನ ಅಸಹಾಯಕತೆ ಕಂಡು ತಡೆಯದೆ ಪಟವನ್ನು ಹರಿಯಲು ಮುಂದೆ ಬರುವವ ಲಕ್ಷ್ಮಣನೆ ಎಂದುಕೊಂಡು 'ಕಿರಿಯ ಲಕ್ಷ್ಮಣದೇವ ಹೊಡೆದರೆ ಮಡಿ' ಎಂದಿದ್ದಳು. ಕೊನೆಗೆ ಸೀತೆ ಅಂದು ಕೊಂಡಂತೇ ಆಯಿತು,

ರಾಮನಿಗೆ ಕೋಪ, ಸೀತೆ ಹೃದಯದಲ್ಲಿ ರಾವಣನನ್ನು ಬಯಸಿದಳೆಂಬ ಗ್ರಹಿಕೆಯಿಂದಲ್ಲ. ಲೋಕಾಪವಾದದಿಂದ ತಾನು ಪ್ರಿಯತಮೆಯಾದ ಆಕೆಯನ್ನು ಬಿಡಬೇಕಾಗಿ ಬಂದಿರುವಾಗ ಅವಳೂ ಇಂಥ ಸಮಯದಲ್ಲಿ ಜನ ನೋಡಿದರೆ ನಗುವಂಥ ವಿನೋದ ಮಾಡುತ್ತಿದ್ದಾಳಲ್ಲ ಎಂಬ ಅಸಮಾಧಾನದಿಂದ. ಜನ ಏನು ಹೇಳೀತು, ಅದನ್ನು ರಾಮ ಹೇಳಿದ.

ಶಿರಶ್ಛೇದಕ್ಕೆ ಆಜ್ಞೆ ಮಾಡಿದನೆನ್ನಲು ಆಧಾರವಿಲ್ಲ. ಗಿರಿಯಮ್ಮನ ಹಾಡಿನಲ್ಲಿ ಅದು ಕಾಣುವುದಿಲ್ಲ,

ರಾಮ ಸಿಟ್ಟಿನ ವೇಳೆಗೆ 'ಮೂಗು ಕೊಯ್ದುಕೊಂಡು'ದುದು ಸೀತಾ ಪರಿತ್ಯಾಗವೇ ಹೊರತು ಶಿರಶ್ಛೇದದಾಜ್ಞೆಯಲ್ಲ. ಕೋಪದ ಭರದಲ್ಲಿ ತ್ಯಾಗ ಮಾಡಿದ ಮೇಲೆ ಶಾಂತನಾದಾಗ ತಿರುಗಿ ಸ್ವೀಕರಿಸಲಾಗುವುದೇ ? ಎನ್ನುತ್ತಾನೆ ಲಕ್ಷ್ಮಣ. ಅವನಿಗೆ ನಿಜ ಸಂಗತಿ ತಿಳಿಯದು. ಲೋಕಾಪವಾದ ಭಯದಿಂದ ಸೀತೆಯನ್ನು ತ್ಯಾಗ ಮಾಡಿದ ಅಂಶವನ್ನು ರಾಮ ಲಕ್ಷ್ಮಣನಲ್ಲಿ ಮುಚ್ಚಿಟ್ಟು ತಾನೊಬ್ಬನೆ ಅಂತರಂಗದಲ್ಲಿ ದುಃಖ ಅನುಭವಿಸುತ್ತಿದ್ದಾನೆ, 'ಲಕ್ಷ್ಮಣನೂ ಕೊರಗುವುದು ಬೇಡ' ಎಂದು.

ಒಂದು ವೇಳೆ ಶಿರಶ್ಛೇದದಾಜ್ಞೆಯನ್ನು ರಾಮ ನೀಡಿದನೆಂದರೂ. ರಾಮನಿಗೆ ದುಃಸ್ವಪ್ನವಾಯಿತೆಂದು ಮೊದಲೆ ಹೇಳಿರುವುದರಿಂದ, ಇದೆಲ್ಲ ಆ ದುಃಸ್ವಪ್ನವೆ ಸರಿ. ಸೀತೆ ಏನೂ ಮಾಡಿಲ್ಲ. ಲೋಕಾಪವಾದವನ್ನೆ ಚಿಂತಿಸುತ್ತಿದ್ದುದರಿಂದ ಇಂಥ ವಿಚಿತ್ರ ಸ್ವಪ್ನ ರಾಮನಿಗೆ. ಸ್ವಪ್ನ ಹೀಗೇ ಹಾಗೇ ಕಾಣಬೇಕೆಂದಿಲ್ಲವಲ್ಲ!

ವಸ್ತುತಃ ಕನಸಿನಲ್ಲೂ, ರಾಮನಿಗೆ ಸೀತೆ ರಾವಣನ ಚಿತ್ರ ಬರೆದಂತೆ ಕಂಡರೆ ನಾವು ಅನುಮಾನ ಪಡಬೇಕಾಗಿಲ್ಲ. ಚಿತ್ರ ಲೇಖನ ಚಿತ್ರದರ್ಶನದಲ್ಲಿ ಸ್ತ್ರೀಯರಿಗೆ ಆಸಕ್ತಿ ಇರುವುದುಂಟು. ಭವಭೂತಿಯ ಉತ್ತರರಾಮ ಚರಿತ್ರೆಯಲ್ಲಿ ಸೀತೆ ವನವಾಸಕ್ಕೆ ಸಂಬಂಧಿಸಿದ ಚಿತ್ರಗಳನ್ನು ನೋಡುತ್ತಾ ರಾಮನ ಎದೆಗೆ ಒರಗಿ ನಿದ್ದೆ ಹೋದಂತೆ ವರ್ಣನೆ ಇದೆ. ಆದ್ದರಿಂದ ತನ್ನ ಹಿಂದಿನ ಅಸಾಧಾರಣ ಅನುಭವಕ್ಕೆ ಮತ್ತು ರಾಮನ ಅದ್ಭುತ ಶೌರ್ಯ ಪರಾಕ್ರಮಗಳಿಗೆ ಸಂಬಂಧಿಸಿದ ವ್ಯಕ್ತಿ ರಾವಣನೆಂದು ಹೆಮ್ಮೆಯಿಂದ ಬರೆದು ಕೊರವಿಗೆ ತೋರಿಸಲು ಸೀತೆ ಒಪ್ಪಿದ್ದಾಳೆ. ಆಕೆ ಒತ್ತಾಯಿಸಿದಾಗ ನಿರಾಕರಿಸಲಾಗಲಿಲ್ಲ.

ರಾಮ ತಾನು ಸೀತೆಯ ಶಿರಶ್ಛೇದಕ್ಕೆ ಆಜ್ಞೆಕೊಟ್ಟಂತೆ ಮತ್ತು ದೇವತೆಗಳು ಅದನ್ನು ತಡೆದಂತೆ ಕನಸು ಕಂಡುದುದೂ ಅರ್ಥ ಪೂರ್ಣವೆ ಆಗಿದೆ. 'ಸೀತೆಯನ್ನು ಪರಿತ್ಯಾಗ ಮಾಡುವುದೆಂದರೆ ಅವಳಿಗೆ ಅದು ಶಿರಶ್ಛೇದಕ್ಕೆ ಸಮಾನ. ಅದನ್ನು ದೇವತೆಗಳೆಂದೂ ಸಮ್ಮತಿಸಲಾರರು. ಏಕೆಂದರೆ ಸೀತೆ ಪವಿತ್ರಳು. ಈ ಹಿಂದೆ ಲಂಕೆಯಲ್ಲೂ ಸ್ಮೃ ದೇವತೆಗಳು ಅಗ್ನಿ ಪರೀಕ್ಷೆಯನ್ನು ತಡೆದುದುಂಟು (ಯು, 11-9)' ಎಂದು ರಾಮ ಸದಾ ಆಲೋಚಿಸುತ್ತ ಕೊರಗುತ್ತಿದ್ದಾನೆ, ಪಾಪಿಗಳಾದ ಪಟ್ಟಣಿಗರು ಆಡಿದ ಮಾತಿಗೆ (ಉ. 43-11)

ಸೀತೆಯನ್ನು ಬಿಡಬೇಕೆಂದಿದ್ದಾನೆ. ಆದ್ದರಿಂದ ಶಿರಶ್ಛೇದದ ಯತ್ನ ಹಾಗೂ ದೇವತೆಗಳು ಅದನ್ನು ತಡೆದುದು ಆತನಿಗೆ ಕನಸಿನಲ್ಲಿ ಕಂಡುಬಂದುವು.

ರಾಮನಿಗೆ ಸೀತೆಯ ವಿಷಯದಲ್ಲಿ ನಿಜವಾಗಿ ಅನುಮಾನ ಅಸಮಾಧಾನಗಳಿರುತ್ತಿದ್ದರೆ, ಆಕೆಯನ್ನು ಪರಿತ್ಯಜಿಸಿದುದು ಮನಃಪೂರ್ವಕವೆ ಆಗಿದ್ದರೆ ಮುಂದೆ ವಾಲ್ಮೀಕಿಯ ಆಶ್ರಮದಲ್ಲಿ ಸೀತೆ ಲವಕುಶರನ್ನು ಹಡೆದಾಗ ಶತ್ರುಘ್ನ ಕಂಡು 'ಮಾತೆ'ಯನ್ನು ಅಭಿನಂದಿಸುವುದು (ಉ. 66–12) ಯುಕ್ತವಾಗಿರುತ್ತಿರಲಿಲ್ಲ.

ವಾಲ್ಮೀಕಿರಾಮಾಯಣದ ಆಂತರ್ಯಕ್ಕೆ ವಿರುದ್ಧವಾಗಿ ಗಿರಿಯಮ್ಮ ಬರೆವಳೆನ್ನುವುದೆ ನಂಬಲರ್ಹವಲ್ಲ ಆದರಿಂದ ಆಕೆಗೇನು ಪ್ರಯೋಜನ ? ಇದೇನೂ ಬಂಡಾಯ ಸಾಹಿತ್ಯವಲ್ಲವಲ್ಲ ! ಇದು ಭಕ್ತಿ ಸಾಹಿತ್ಯ. ಹರಿದಾಸ ಸಾಹಿತ್ಯ.

ದಶರಥ ಜಾತಕದ ಬಗ್ಗೆ ಹೇಳುವುದಾದರೆ ಅದೊಂದು ವಿಡಂಬನೆ ಗಂಭೀರವಾಗಿ ಪರಿಗಣಿಸಲು ಯೋಗ್ಯವಲ್ಲ.

## ಭಾರತೀಯ ಸಂಸ್ಕೃತಿಯಲ್ಲಿ ಸ್ತ್ರೀ

'ಭಾರತೀಯ ಸಂಸ್ಕೃತಿಯಲ್ಲಿ ಅಸ್ಪೃಶ್ಯತೆ ಎರಡು ಬಗೆಯದು. ಒಂದು, ಜಾತಿ ಅಸ್ಪೃಶ್ಯತೆ; ಎರಡು, ಲಿಂಗ ಅಸ್ಪೃಶ್ಯತೆ. ಜಾತಿ ಅಸ್ಪೃಶ್ಯತೆಯಲ್ಲಿ ಹರಿಜನರು ಮತ್ತು ಶೂದ್ರರು ಇದ್ದಾರೆ. ಇನ್ನು ಲಿಂಗ ಅಸ್ಪೃಶ್ಯತೆ. ಹೆಣ್ಣು ಈ ಸಂಸ್ಕೃತಿಯಲ್ಲಿ ಅವಳ ಜೀವನದುದ್ದಕ್ಕೂ ಕೆಲವು ಕ್ಲುಪ್ತ ಕಾಲಗಳಲ್ಲಿ ಅಸ್ಪೃಶ್ಯಳು. ಅವಳು ಮೈನೆರೆತಾಗ, ಪ್ರತಿತಿಂಗಳೂ ಮುಟ್ಟಾದಾಗ, ಪ್ರತಿ ಸಾರಿ ಹೆತ್ತಾಗ, ವಿಧವೆಯಾದಾಗ ಅಸ್ಪೃಶ್ಯಳು. ವಿಧವೆಯಾದಾಗ ಹೆಣ್ಣು ತನ್ನ ನಿತ್ಯದ ಮಡಿ ಪ್ರಪಂಚದಲ್ಲಿ ಅಸ್ಪೃಶ್ಯಳಷ್ಟೇ ಅಲ್ಲ, ನೋಡಲು ಅಮಂಗಲೆಯೂ, ಅಪಶಕುನಳೂ ದುರ್ದೆಶೆ ತರುವವಳೂ ಆದ್ದರಿಂದ ಹರಿಜನರಿಗಿಂತಲೂ 'ಅದೃಶ್ಯ'ಳು. ಆದರೆ ಈ ಮೈಲಿಗೆ ಅಸ್ಪೃಶ್ಯತೆಗಿಂತಲೂ ಘೋರವಾದ ಅಸ್ಪೃಶ್ಯತೆ, ಹೆಣ್ಣು ಹೆಣ್ಣಾಗಿ ಹುಟ್ಟಿದ ಲಿಂಗಭೇದಕ್ಕಾಗಿಯೆ, ಅವಳನ್ನು ಮುಟ್ಟುವುದರಿಂದಾಗಬಹುದಾದ ಲೈಂಗಿಕತೆ ಕಾಮಪ್ರಚೋದನೆಯ ಭಯಕ್ಕಾಗಿಯೇ ಅವಳನ್ನು ಜೀವನ

ಮುದ್ದಕ್ಕೂ ಮುಟ್ಟದಿರುವಿಕೆ. ಇದು ಭಾರತೀಯ ಸಂಸ್ಕೃತಿಗೇ ವಿಶಿಷ್ಟವಾದ ಸಾಂಸ್ಕೃತಿಕ ವಿಕಾರ. ಲೈಂಗಿಕತೆಯ ಲೇಪವಿಲ್ಲದ ಕೇವಲ ಅಕ್ಕರೆಯ ಮುಟ್ಟುವ ತಟ್ಟುವ ಸಹಜ ಕ್ರಿಯೆಯಲ್ಲಿಯೂ ಹೆಣ್ಣು ಅಸ್ಪೃಶ್ಯಳು. ಗಂಡಸರಲ್ಲಾದರೊ ಹೆಗಲಮೇಲೆ ಕೈಹಾಕಿ ಕೊಂಡು ನಡೆಯುವುದು ಸಾಮಾನ್ಯವಾದ ಅಭ್ಯಾಸವಾಗಿದೆ.'

ಭಾರತೀಯ ಸಂಸ್ಕೃತಿಯನ್ನು ಹೀಗೆ ಹಳಿಯುವುದು ಒಂದು ರೀತಿಯ ಮನೋವಿಕಾರವೆನ್ನಬೇಕು. ನಮ್ಮ ಸಂಸ್ಕೃತಿಯಲ್ಲಿ ಹೆಣ್ಣು ಪುರುಷನ ಅರ್ಧಾಂಗಿನಿ, ಸಹಧರ್ಮಿಣಿ, ಮಾತ್ರವಲ್ಲ, 'ಪತ್ನಿ' 'ಪತಿಂ ನಯತಿ' ಅಂದರೆ, ತನ್ನ ಧರ್ಮಾಚರಣೆಯಿಂದ, ಪಾತಿವ್ರತ್ಯದಿಂದ, ಪತಿಯನ್ನು ಆತ ಎಷ್ಟೇ ದುಷ್ಟನಾಗಿ ನರಕಭಾಗಿಯಾದರೂ ಸರಿಯೆ, ಹಾವಾಡಿಗನು ಬಿಲದೊಳಗಿನ ಸರ್ಪವನ್ನು ಬಲಾತ್ಕಾರವಾಗಿ ಸೆಳೆದು ಹೊರಗೆ ತೆಗೆಯುವಂತೆ, ತನ್ನೊಡನೆ ಸೆಳೆದುಕೊಂಡು ಸ್ವರ್ಗಕ್ಕೆ ಕರೆದೊಯ್ಯುವವಳು, ಸತಿಸಾವಿತ್ರಿಯಂತೆ, ಭಾರತದ ಆದರ್ಶ 'ಪತ್ನಿ'–

ವ್ಯಾಲ ಗ್ರಾಹೀ ಯಥಾ ವ್ಯಾಲಂ ಬಲಾದುದ್ಧರತೇ ಬಿಲಾತ್
ಏವಮುತ್ಕೃಷ್ಯ ದೂತೇಭ್ಯಃ ಪತಿಂ ಸ್ವರ್ಗಂ ವ್ರಜೇತ್ ಸತೀ-

ಸ್ಕಾಂದ.

'ಸಹಧರ್ಮಿಣಿ'ಯನ್ನು ಅಸ್ಪೃಶ್ಯಳೆಂದು ದೂರವಿಟ್ಟರೆ ಪತಿಗೆ ಧರ್ಮ ಅರ್ಥ ಕಾಮರೂಪವಾದ ಯಾವ ಪುರುಷಾರ್ಥ ಸಾಧನೆಯೂ ಆಗುವುದಿಲ್ಲ ಎನ್ನುತ್ತದೆ ಧರ್ಮಶಾಸ್ತ್ರ. ರಾಮ ಸೀತೆಯನ್ನು ಪರಿತ್ಯಾಗಮಾಡಿದರೂ ಅವಳ ಸ್ವರ್ಣಪ್ರತಿಮೆಯನ್ನಾದರೂ ಮಾಡಿ ಜೊತೆಗೆ ಇಟ್ಟುಕೊಂಡು ಯಾಗಾದಿ ಗಳನ್ನು ಮಾಡಿದ. (ಉ. 91–25)

## ಭಾರತೀಯರಲ್ಲಿ ಸ್ತ್ರೀ ಅಸ್ಪೃಶ್ಯಳೆ ?

ಸ್ತ್ರೀ ಮೈನೆರೆತಾಗ ಪ್ರತಿತಿಂಗಳು ಮುಟ್ಟಾದಾಗ ಪ್ರತಿಸಾರಿ ಹೆತ್ತಾಗ ಪ್ರತ್ಯಕ್ಷವಾಗಿ ಅವಳ ದೈಹಿಕ ಧರ್ಮ ಅವಳನ್ನು ಅವಳ ಹಿತಕ್ಕಾಗಿಯೇ 'ಅಸ್ಪೃಶ್ಯೆ'ಳನ್ನಾಗಿಸಿದೆ. ಮುಟ್ಟಿನ ಪರಿಣಾಮವಾಗಿ ಕೆಲವರಿಗೆ ಸಹಿಸಲಾಗ

ದಷ್ಟು ಬಾಧೆಯಾಗುತ್ತದೆ. ಬಾಧೆಯಾಗದಿದ್ದರೂ ಶರೀರ ದುರ್ಬಲವಾಗು ತ್ತದೆ. ಆಗ ಅವರಿಗೆ ಗೃಹಕೃತ್ಯದ ಯಾವ ಜವಾಬುದಾರಿ ಇಲ್ಲದೆ ಸ್ವತಂತ್ರ ರಾಗಿ ಮಲಗಲು ವಿಶ್ರಾಂತಿ ಪಡೆಯಲು ಅವಕಾಶ ಬೇಕು. ಗೊತ್ತಿಲ್ಲದೆ ಕೆಲವು ಜನ ಕೆಲಸ ಮಾಡುತ್ತಾರೆ. ಅದಕ್ಕಾಗಿ ಧರ್ಮಶಾಸ್ತ್ರ ಅಸ್ಪೃಶ್ಯತೆಯನ್ನು ವಿಧಿಸಿದೆ.

ವಸ್ತುತಃ ಪ್ರೊ| ಶೇಕರಂಥ ಪಾಶ್ಚಾತ್ಯ ಸಂಶೋಧಕರೆ ಅನ್ನುವಂತೆ ಮುಟ್ಟಾದ ಹೆಣ್ಣಿನ ದೇಹ ಫಿಲಿಪೈನ್ಸ್ ದ್ವೀಪಗಳಲ್ಲಿ ಕಂಡುಬರುವ 'ಯುಪಸ್' ಎಂಬ ಜಾತಿಯ ವಿಷವೃಕ್ಷದಂತೆ. ಸಮೀಪಕ್ಕೆ ಬರುವವರಿಗೆ ಮಾರಕವಾದ ವಿಷಕೀಟಾಣುಗಳನ್ನು ರೋಮರಂಧ್ರಗಳಿಂದ ಹೊರಗೆ ಹಾಕುತ್ತದೆ. ಅಮೆರಿಕ ದಲ್ಲಿ ಅನೇಕ ಕಡೆ ಮುಟ್ಟಾದವರಿಗೆ ಹೂಹಣ್ಣುಗಳ ತೋಟಗಳಲ್ಲಿ ಪ್ರವೇಶ ನಿಷೇಧಿಸಲಾಗುತ್ತದೆ. ಅವರ ಸ್ಪರ್ಶದಿಂದ ಕಾಯಿ ಉದುರುತ್ತದೆ ಎನ್ನುತ್ತಾರೆ. ಕೆಲವು ಕೀಟಗಳು ಗಿಡಗಳಿಂದ ಕೆಳಗೆ ಬೀಳುತ್ತವೆ ಎನ್ನುತ್ತಾರೆ. ಆದ್ದರಿಂದ ಆರೋಗ್ಯದೃಷ್ಟಿಯಿಂದಲೂ ಹೆಣ್ಣಿಗೆ ಆಗ ಅಸ್ಪೃಶ್ಯತೆ ಬೇಕು. ಆಯುರ್ವೇದ 'ಅತ್ಯಾಯಾಸಾನ್ ಪರಿಹರೇತ್' ಮುಟ್ಟಾದ ಹೆಣ್ಣು ಅತಿಯಾದ ಆಯಾಸದ ಕೆಲಸಗಳನ್ನು ಬಿಡಬೇಕು ಎಂಬುದೂ, ಧರ್ಮಶಾಸ್ತ್ರ 'ಸಂಸ್ಪೃಷ್ಟಂ ಚಾಪ್ಯ ದಕ್ಷಯಾ' ಮುಟ್ಟಾದವಳು ಮುಟ್ಟಿದ ಅನ್ನವನ್ನು ಉಣಕೂಡದು ಎಂಬುದೂ ಅರ್ಥಹೀನವಲ್ಲ.

ಪ್ರಸವಕಾಲದ ಅಸ್ಪೃಶ್ಯತೆಯೂ ಹೆಣ್ಣಿನ ಆರೋಗ್ಯದ ದೃಷ್ಟಿಯಿಂದಲೆ ವಿಹಿತವಾಗಿದೆ.

ಪ್ರಸವ ಕಾಲದ ಕೆಲವು ದಿನಗಳಲ್ಲಿ ಹೆಣ್ಣಿಗೆ ಮಾತ್ರವಲ್ಲ ಅವಳ ಬಂಧು ಗಳಿಗೂ ಅಸ್ಪೃಶ್ಯತೆ ಇದೆ. ಇದರಿಂದ ಹೆಣ್ಣನ್ನು ಮಾತ್ರ ದೂರ ಇಟ್ಟಂತಾಗು ವುದಿಲ್ಲ. ಹೆತ್ತ ತಾಯಿ ಮಕ್ಕಳನ್ನು ಬಂಧುಗಳು ಆ ಕಾಲದಲ್ಲಿ ಬಂದು ನೋಡಿ ಆನಂದಿಸುತ್ತಾರೆ. ಸೀತೆ ಲವಕುಶರನ್ನು ಅರ್ಧರಾತ್ರಿ ಸಮಯದಲ್ಲಿ ಹೆತ್ತಾಗ ಶತ್ರುಘ್ನ ಕೇಳಿ ಒಡನೆ ಆ ತಾಯಿ ಮಕ್ಕಳನ್ನು ಕಂಡು 'ಮಾತೆ'! ಎನ್ನುತ್ತ ಅಭಿನಂದಿಸಿದನಂತೆ. (ಉ. 66–12)

# ವಿಧವೆ ಅಮಂಗಲೆಯೇ ?

ವಿಧವೆಯಾದವಳು ಅಸ್ಪೃಶ್ಯಳೆನ್ನುವುದು ಅರ್ಥವಿಲ್ಲದ ಮಾತು. ವಿಧವೆಗೆ ಅವಳ ಮಡಿ ಪ್ರಪಂಚ ಇತರರನ್ನೆ ಅವಳಿಗೆ ಅಸ್ಪೃಶ್ಯರನ್ನಾಗಿ ಮಾಡಿವೆ. ವಸ್ತುತಃ ಧರ್ಮಶಾಸ್ತ್ರ ಅಷ್ಟೊಂದು ಮಡಿಯನ್ನು ಅವರಿಗೆ ವಿಧಿಸುವುದಿಲ್ಲ.

ಆಕೆ ನೋಡಲು ಅಮಂಗಲೆ ಎನ್ನುವುದೂ ಶಾಸ್ತ್ರ ಪರಂಪರೆಗೆ ವಿರುದ್ಧ.

ಏವಂ ಚರ್ಯಾಪರಾ ನಿತ್ಯಂ ವಿಧವಾಪಿ ಶುಭಾ ಮತಾ—ಸ್ಕಾಂದ

'ವಿಧವೆ ತನ್ನ ನಿಯಮದಲ್ಲಿ ತಾನಿದ್ದರೆ ಆಕೆಯೂ ಸುಮಂಗಲಿಯೆ' ಅಗಲಿದ ಗಂಡನನ್ನೆ ನೆನೆಯುತ್ತ ಬ್ರಹ್ಮಚಾರಿಣಿಯಾದ ವಿಧವೆ ಗಂಗೆಗೆ ಸಮಾನಳು, ಸಾಕ್ಷಾತ್ ರಮಾದೇವಿಯಂತೆ ಪೂಜ್ಯಳು ಎಂದೆಲ್ಲ ಪುರಾಣಗಳು ಸಾರುತ್ತಿವೆ, ಮಹಾತ್ಮಾ ಗಾಂಧೀಜಿ ಹೇಳಿದರು –

'ನಿಜವಾದ ಹಿಂದೂ ವಿಧವೆ, ಅಮೋಘ ನಿಧಿ ಎಂದು ನಾನು ನಂಬುತ್ತೇನೆ. ಹಿಂದೂ ಧರ್ಮ ಮಾನವತೆಗೆ ಕೊಡುವ ಒಂದು ಕಾಣಿಕೆ ಆಕೆ.'

'ಲೈಂಗಿಕತೆಯ ಲೇಪವಿಲ್ಲದ ಕೇವಲ ಅಕ್ಕರೆಯ ಮುಟ್ಟುವ ತಟ್ಟುವ ಸಹಜಕ್ರಿಯೆಯಲ್ಲಿಯೂ ಹೆಣ್ಣು ಅಸ್ಪೃಶ್ಯಳು' ಎನ್ನುವ ಮಾತನ್ನೂ ಗಾಂಧೀಜಿ ಖಂಡಿಸಿದ್ದರು–

'ಶರೀರ ಸ್ಪರ್ಶವಿಲ್ಲದ್ದು ಶುದ್ಧಪ್ರೇಮವಲ್ಲ ಎನ್ನುವವರಿಗೆ ಶುದ್ಧಪ್ರೇಮವೆಂದರೇನೋ ಗೊತ್ತೇ ಇಲ್ಲ.'

ಶರೀರ ಸ್ಪರ್ಶ ಅಷ್ಟೇನೂ ನಿರಪಾಯದ್ದಲ್ಲ. ಗಾಂಧೀಜಿ ಹೇಳುತ್ತಾರೆ. 'ಮಹಿಳೆಯರ ಸ್ಪರ್ಶಮಾತ್ರದಿಂದ ಕೆಲವು ಪುರುಷರು ಕಾಮೋದ್ರೇಕ ಹೊಂದುವುದುಂಟು. ಹಾಗೇ ಪುರುಷರ ಸ್ಪರ್ಶಮಾತ್ರದಿಂದ ಕೆಲವು ಮಹಿಳೆಯರು ಕಾಮೋದ್ರೇಕ ಹೊಂದುವುದುಂಟು.'

ಬಲವಾನಿಂದ್ರಿಯ ಗ್ರಾಮೋ ವಿದ್ವಾಂಸಮಪಿ ಕರ್ಷತಿ—ಭಗವದ್ಗೀತೆ.

ಎಂಥ ವಿವೇಕಿಗಳೂ ಕೆಲವೊಮ್ಮೆ ಶರೀರಸ್ಪರ್ಶದಿಂದ ವಿಚಲಿತರಾಗುತ್ತಾರೆ. ಆದ್ದರಿಂದ ಪರಸ್ತ್ರೀಯರನ್ನೂ ಪರಪುರುಷರನ್ನೂ ಶಾಸ್ತ್ರ ಅಸ್ಪೃಶ್ಯ

ರನ್ನಾಗಿಸಿದುದು ಅವ್ಯಾವಹಾರಿಕವೆಂದರೆ ಆತ್ಮವಂಚನೆಯೆ ಆಗುತ್ತದೆ. ಈ ಅಸ್ಪೃಶ್ಯತೆಯನ್ನು ಸಾಂಸ್ಕೃತಿಕ ವಿಕಾರವೆನ್ನುವವರಿಗೆ ಸಂಸ್ಕೃತಿ ಎಂದರೆ ಏನೆಂದೆ ತಿಳಿದಿಲ್ಲ.

## 'ಅಮ್ಮ ಅಪ್ಪ' ಎನ್ನಕೂಡದಪ್ಪ !

'ನಾವು ಹೆಣ್ಣನ್ನು ತಾಯಿ ಅಮ್ಮ ಅಪ್ಪ ಎಂದು ಕರೆಯಲು ಕಾರಣ ಹೆಣ್ಣನ್ನು ತಾಯ್ತನದಲ್ಲಿ ಕಲ್ಪಿಸಿಕೊಂಡಾಗ ಮಾತ್ರ ಅವಳ ಬಗ್ಗೆ ಯಾವ ಲೈಂಗಿಕತೆಯ ಸೋಂಕು ಇರಲಾರದು ಎನ್ನುವ ಮಹಾಭ್ರಮೆ'

—ಹೀಗೆನ್ನುವುದೆ ಮಹಾಭ್ರಮೆ. ಹೆಣ್ಣನ್ನು ತಾಯ್ತನದಲ್ಲಿ ಕಂಡಾಗ ಮಾತ್ರ ಲೈಂಗಿಕತೆಯ ಸೋಂಕಿನ ಪರಿಹಾರವೆನ್ನುವುದಾದರೆ ಗಂಡನ್ನು ಅಪ್ಪ, ಅಣ್ಣ, ಎಂದು ಹೆಣ್ಣು ಕರೆಯುವಾಗಲೂ ಲೈಂಗಿಕ ಕುತ್ತಿನಿಂದ ಪಾರಾಗುವ ಉದ್ದೇಶವೇ ? ಹಾಗಿದ್ದರೆ ಗಂಡೂ ಅಸ್ಪೃಶ್ಯನೆ ! ಎಳೆ ಮಕ್ಕಳನ್ನೂ ಅಮ್ಮ ಅಪ್ಪ ಎನ್ನುತ್ತೇವೆ. ಅಲ್ಲಿಯೂ ಲೈಂಗಿಕತೆಯ ಭೀತಿಯೆ ? ಕಾಮಾಲೆ ರೋಗಿಗೆ ಜಗತ್ತೆ ಹಳದಿಯಾಗಿ ಕಾಣುತ್ತದೆ, ಹಾಗೆ ಇರಬಹುದು ! ವಸ್ತುತಃ 'ಹೆಣ್ಣುಮಗಳೊಬ್ಬಳು' ಎನ್ನುವಾಗ 'ಮಗಳು' ಎಂಬ ಶಬ್ದ ಸ್ವತಂತ್ರವಾಗಿ ಯಾವ ಅರ್ಥವನ್ನೂ ಕೊಡುವುದಿಲ್ಲ, ಹಾಗೆಯೇ 'ಬಾಮ್ಮ, ಬಾರಪ್ಪ, ಬಾಅಣ್ಣ' ಎಂದಾಗೆಲ್ಲ ಈ ಅಪ್ಪ ಅಮ್ಮ ಅಣ್ಣಗಳು ಸ್ವತಂತ್ರವಾಗಿ ಏನೂ ಅರ್ಥವಿಲ್ಲದವು. ಕೇವಲ ಪ್ರೀತ್ಯಾದರ ಗೌರವ ಸೂಚಕಗಳು.

'ಹೆಣ್ಣು ತಾಯಾಗಿ ಬೆಳೆದ ಪ್ರಬುದ್ಧೆ, ಗಂಡು ಅವಳಿಗೆ ಶಿಶುವಾಗಿ ಸ್ಥಗಿತನಾದ ಅಬಲ'

—ಈ ಮಾತನ್ನು ತಿರುಗಿಸಿ, 'ಗಂಡು ಅಪ್ಪನಾಗಿ ಬೆಳೆದು ಪ್ರಬುದ್ಧ, ಹೆಣ್ಣು ಕೂಸಾಗಿ ಸ್ಥಗಿತಳಾದ ಅಬಲೆ' ಎಂದೇಕೆ ಹೇಳಬಾರದು ?

'ಆರ್ಯರು ಎನಿಸಿಕೊಂಡ ಪಾಶ್ಚಾತ್ಯರಲ್ಲಿ ಹೆಣ್ಣು ಲೈಂಗಿಕ ಬೆಳವಣಿಗೆಯಲ್ಲಿ ಪೂರ್ಣತೆಯನ್ನು ಪಡೆದ ಹೆಂಡತಿ, ಗಂಡಾದರೊ ಹೆಣ್ಣನ್ನು ಲೈಂಗಿಕ ಪಕ್ವತೆಯಲ್ಲಿ ಎದುರುಗೊಳ್ಳುವ ಗಂಡು'.

—ಈ ಮಾತು ಗಂಡುಗಳನ್ನು ಫಾದರ್ ಎಂದೂ ಹೆಣ್ಣುಗಳನ್ನು ಸಿಸ್ಟರ್ ಎಂದೂ ಕರೆಯುವ ಪಾಶ್ಚಾತ್ಯ ಸಭ್ಯತೆಯನ್ನು ಅಪಲಾಪ ಮಾಡುವಂಥದ್ದು.

'ತಾಯಿಯ ಶವಸಂಸ್ಕಾರ ಸಮಯದಲ್ಲಿ ಪುರೋಹಿತನು ಮಗನಾದವನಿಂದ 'ಹೇ ತಾಯೇ, ನಾನು ಶಿಶುವಾಗಿ ನಿನ್ನ ಸ್ತನ ಪಾನ ಮಾಡುತ್ತ ತಿಳಿಯದೆ ನಿನ್ನ ಸ್ತನಗಳ ಮೇಲೆ ಕೈಹಾಕಿ ಮರ್ದನ ಮಾಡಿದ್ದೇನೆ. ಅರಿಯದೆ ಮಾಡಿದ ಈ ಘೋರ ಪಾಪವನ್ನು ಕ್ಷಮಿಸು ಎಂಬರ್ಥದ ಶ್ಲೋಕ ಹೇಳಿಸುತ್ತಾನೆ. ಇದು ಈಡಿಪಸ್ ಕಾಂಪ್ಲೆಕ್ಸ್ ಎಂಬ ತಾಯ್ಗಂಡತನ'

—ಈ ಮಾತು ಶುದ್ಧಾಂಗವಾಗಿ ಸುಳ್ಳು, ಶ್ಲೋಕದಲ್ಲಿ ತಾಯನ್ನು ಸಂಬೋಧಿಸುವುದಿಲ್ಲ. ಸ್ತನಗಳ ಮೇಲೆ ಕೈ ಹಾಕಿದ ಅಂಶವೂ ಅಲ್ಲಿಲ್ಲ. 'ಅರಿಯದೆ' ಎಂಬ ಅಂಶವೂ ಇಲ್ಲ. ಘೋರ ಪಾಪವನ್ನು ಕ್ಷಮಿಸೆಂದೂ ಹೇಳುತ್ತಿಲ್ಲ. ತಪ್ಪು ಅನುವಾದ, ಶ್ಲೋಕಕ್ಕೆ ಅಪಚಾರ. ಆ ಶ್ಲೋಕ ಹೀಗಿದೆ–

ಯದಾಪಿಪೇಷ ಮಾತರಂ ಪುತ್ರಃ ಪ್ರಮುದಿತೋ ಧಯನ್ ।
ಏತತ್ತ್ವದಗ್ನೇ ಅನೃಣೋ ಭವಾಮ್ಯಹತೌ ಪಿತರೌ ॥

ಅಗ್ನಿಯನ್ನು ಕುರಿತು ಪ್ರಾರ್ಥನೆ. 'ನಾನು ಶಿಶುವಾಗಿದ್ದಾಗ ತಾಯನ್ನು ಪೀಡಿಸಿ ಸ್ತನಪಾನ ಮಾಡಿದ್ದೆ. ಆ ಋಣ ತೀರಲಿ. ತಂದೆ ತಾಯಿಗಳಿಗೆ ನನ್ನಿಂದ ಹಿಂಸೆ ಆದಂತಾಗದಿರಲಿ'. ಇಲ್ಲಿ ಲೈಂಗಿಕ ಪಾಪದ ಪ್ರಸ್ತಾಪವೇ ಇಲ್ಲ. 'ಈ ಉತ್ತರ ಕ್ರಿಯೆಯಿಂದ ತಂದೆ ತಾಯಿಗಳಿಗೆ ತಾನು ಪರಲೋಕ ಕಾರಣನಾಗಿ ಅವರ ಋಣದಿಂದ ತಾನು ಮುಕ್ತನಾಗಬೇಕೆಂಬ ಪ್ರಾರ್ಥನೆ ಮಾತ್ರ ಇದೆ. ಅವರಿಗೆ ತಾನು ಮಾಡಿರಬಹುದಾದ ಹಿಂಸೆಗೆ ಈ ಪ್ರತ್ಯುಪಕಾರದಿಂದ ಪರಿಹಾರ ಸಿಗಲಿ ಎಂಬಾಸೆ ಇದೆ.

ಮನು ಧರ್ಮಶಾಸ್ತ್ರದಲ್ಲಿ 'ಗಂಡಸು ತಾಯಿಯ ಜೊತೆಗಾಗಲಿ ಸೋದರಿಯ, ಮಗಳ ಜೊತೆಗಾಗಲಿ ಏಕಾಂತದಲ್ಲಿ ಇರಬಾರದು' ಎಂದು ವಿಧಿಸಿರುವುದು ತಪ್ಪಲ್ಲ. ಇಲ್ಲದಿದ್ದರೆ ಲೈಂಗಿಕವಿಕಾರದ ಅಪಾಯ ಉಂಟು. ತಾಯ್ಗಂಡತನಕ್ಕೆ ಅವಕಾಶ ಉಂಟಾದೀತು. ಇದು ಬೇರೆ. ಶಿಶುಗಳಲ್ಲಿ ಉಂಟೆನ್ನಲಾದ ಈಡಿಪಸ್ ಕಾಂಪ್ಲೆಕ್ಸ್ ಬೇರೆ. ಅದಕ್ಕೆ ಮನು ಧರ್ಮಶಾಸ್ತ್ರದ ಸಂಬಂಧವಿಲ್ಲ.

'ಅನಸೂಯೆ ತ್ರಿಮೂರ್ತಿಗಳನ್ನು ಶಿಶುಗಳನ್ನಾಗಿ ಪರಿವರ್ತಿಸಿಯೆ ನಗ್ನಳಾಗಿ ಉಪಚರಿಸಿ ಅವರಿಂದ ಮಕ್ಕಳ 'ವರ' ಪ್ರಸಾದ ಪಡೆದುದು ತಾಯ್ತ್ಗಂಡತನ'

ಎಂದು ಹೇಳುವುದೂ ಅರ್ಥವಿಲ್ಲದ ಮಾತು. ತ್ರಿಮೂರ್ತಿಗಳನ್ನು ಮಕ್ಕಳಾಗಿ ಪರಿವರ್ತಿಸಿದರೆ ತನ್ನ ಪಾತಿವ್ರತ್ಯ ಶಕ್ತಿ ತೋರ್ಪಡಿಸಿದಂತೆಯೂ ಆಗುತ್ತದೆ, ಮಕ್ಕಳ ಮುಂದೆ ಲೈಂಗಿಕ ವಿಕಾರಕ್ಕೆ ಆಸ್ಪದವಿಲ್ಲದ್ದರಿಂದ ಪಾತಿವ್ರತ್ಯ ರಕ್ಷಣೆಯೂ ಆಗುತ್ತದೆ ಎಂಬ ಅಭಿಪ್ರಾಯದಿಂದ ಆಕೆ ಹಾಗೆ ಮಾಡಿದಳು. ಮಕ್ಕಳ 'ವರ' ಪ್ರಸಾದ ತಾಯ್ತ್ಗಂಡತನವಾಗುವುದಿಲ್ಲ. ಏಕೆಂದರೆ ಅತ್ರಿಮುನಿಯಿಂದಲೆ ಆವಳಲ್ಲಿ ಗರ್ಭ ಉಂಟಾಗುವಂತೆ ವರ ನೀಡಿದ್ದರು, ತ್ರಿಮೂರ್ತಿಗಳು.

ಹೆಣ್ಣು ಹೆರುವುದರಿಂದಲೆ ಅಸ್ತಿತ್ವ ಉಳ್ಳವಳೆನ್ನಲು 'ಸೂತ್ರಿ' ಎಂಬ ಶಬ್ದವನ್ನು ತೋರಿಸುವುದು ಸರಿಯಲ್ಲ. ಒಂದೇ ವಸ್ತುವಿಗೆ ಅನೇಕ ಗುಣಧರ್ಮವನ್ನು ಸೂಚಿಸುವ ಅನೇಕ ಹೆಸರುಗಳಿರುತ್ತವೆ. ಯಾವುದಾದರೊಂದು ಹೆಸರನ್ನು ತೋರಿಸಿ ಅದರಿಂದಲೆ ಆ ವಸ್ತುವಿನ ಅಸ್ತಿತ್ವವನ್ನು ಅಳೆಯುವುದು ನಿರ್ಧರಿಸುವುದು ವೈಜ್ಞಾನಿಕವಲ್ಲ. ಇಲ್ಲದಿದ್ದರೆ 'ಭಾಮಿನೀ' ಎಂದರೆ ಕೋಪಿಷ್ಠೆ. 'ವಾಮಾ' ಎಂದರೆ ವಿರೋಧ ವರ್ತನೆ ಮಾಡುವವಳು. ಹೆಣ್ಣಿನ ಅಸ್ತಿತ್ವವೆ ಕೋಪದಿಂದ ಎಂದೋ ವಿರೋಧವರ್ತನೆಯಿಂದ ಎಂದೋ ಏಕೆ ಹೇಳಬಾರದು ? ಪುರುಷನಿಗೂ 'ಜನಕ' ಎಂದು ಹೆಸರಿದೆ. ಹುಟ್ಟಿಸುವುದರಿಂದಲೆ ಅಸ್ತಿತ್ವ ಆತನಿಗೆ ಎನ್ನಬಹುದು !

ಹೆಣ್ಣು ಹೆರುವುದರಿಂದಲೆ ಅಸ್ತಿತ್ವ ಉಳ್ಳವಳೆನ್ನುವುದಕ್ಕೆ ಆಯುರ್ವೇದವೆ ಭೀಕರ ಸಾಕ್ಷಿಯಾಗಿದೆ, ಅದರಲ್ಲಿ ಗಂಡನ್ನು ಕುರಿತು ವೈದ್ಯ ಚಿಕಿತ್ಸೆಗಳಿವೆಯೆ ಹೊರತು ಹೆಣ್ಣನ್ನು ಕುರಿತು ಯಾವ ಔಷಧೋಪಚಾರಗಳೂ ಇಲ್ಲ. ಇರುವುದಾದರೆ ಕೇವಲ ಹೆರುವವಳಿಗಾಗಿ ಹೊರತು ಹೆರಲಾಗದ ಹೆಣ್ಣು ಮಗುವಿಗಾಗಲಿ ಮುದುಕಿಗಾಗಲಿ ಇಲ್ಲ'

ಎನ್ನುವುದು ಭೀಕರ ಸುಳ್ಳು ಆರೋಪ. ಗಂಡನ್ನು ಕುರಿತು ಚಿಕಿತ್ಸೆಗಳಿದ್ದರೆ, ಹೆಣ್ಣು ಮಗುವಿಗೆ, ಮುದುಕಿಗೆ ಬೇರೆ ಚಿಕಿತ್ಸೆ ಬೇಕೆ ? ಅಲೋಪಥಿಯಲ್ಲಾದರೂ ಗಂಡು ಮಗುವಿಗೊಂದು ಹೆಣ್ಣು ಮಗುವಿಗಿನ್ನೊಂದು,. ಮುದುಕನಿಗೊಂದು ಮುದುಕಿಗಿನ್ನೊಂದು ಚಿಕಿತ್ಸೆ ಎಂದು ಭೇದವಿದೆಯೆ ? ಗಂಡನ್ನು

ಕುರಿತ ಚಿಕಿತ್ಸೆ ಕೇವಲ ಗಂಡಿಗಲ್ಲ. ಗಂಡಸ್ಸು ಹೇಳುವ ಪುರುಷ ನರ ಮನುಷ್ಯ ಇತ್ಯಾದಿ ಶಬ್ದಗಳಿಗೇ ಲಿಂಗ ಭೇದ ವಿವಕ್ಷೆ ಇಲ್ಲದೆ ಮನುಷ್ಯ ಜಾತಿ ಎನ್ನುವ ಅರ್ಥವೂ ಉಂಟು. ಹೆರುವುದು ಇಡೀ ಮನುಷ್ಯ ಜಾತಿಗೆ ಸಂಬಂಧಿ ಸಿದ್ದಲ್ಲ. ಆದ್ದರಿಂದ ಹೆಣ್ಣಿನದೆಂದು ಪ್ರತ್ಯೇಕ ಚಿಕಿತ್ಸೆ ಹೇಳಿದೆ.

## ನ ಸ್ತ್ರೀ ಸ್ವಾತಂತ್ರ್ಯಮರ್ಹತಿ

'ಹೆಣ್ಣು ಮೂಲಭಯಳಾಗಿದ್ದಾಳೆ. ಮನು ಹೆತ್ತ ತಾಯನ್ನೂ ಹಡೆದ ಮಗಳನ್ನೂ ಒಡ ಹುಟ್ಟಿದ ಸೋದರಿಯನ್ನೂ ನಂಬಲಾರ. ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ ಮನೆ ಮಾತು ಮಾಡಿದ್ದಾನೆ. ಯತ್ರ ನಾರ್ಯಸ್ತು ಪೂಜ್ಯಂತೇ ಎನ್ನುವ ಪೂಜೆ ಮಾಡುವ ಕ್ರಿಯೆಯೂ ಅಸ್ಪೃಶ್ಯತೆಯ ಇನ್ನೊಂದು ರೂಪವಾಗಿದ್ದು ಯೋನಿಪೂಜೆ ಮಾಡುವ ಶಾಕ್ತರಂತೆ ಅವಳ ಮಾನವೀಯ ಸಂಬಂಧದಿಂದ ಹೊರತಾಗಿದ್ದಾನೆ.'

—ಇದು ಮನುಧರ್ಮಶಾಸ್ತ್ರದ ಬಗ್ಗೆ ತಮಗಿರುವ ಭಯಂಕರ ಅಜ್ಞಾನ ದುರಾಗ್ರಹಗಳನ್ನೆ ವ್ಯಕ್ತ ಮಾಡುತ್ತದೆ. ಮನುವಿಗೆ ಹೆಣ್ಣು ಮೂಲಭಯಳಲ್ಲ. ಹೆಣ್ಣಿನೊಡನೆ ಏಕಾಂತದಲ್ಲಿ ವ್ಯವಹಾರ ಮಾಡುವ ಗಂಡಿನ ಚಿತ್ತ ಸ್ಥೈರ್ಯ ವನ್ನು ಮಾತ್ರ ಆತ ನಂಬಲಾರ. 'ಬಲವಾನಿಂದ್ರಿಯಗ್ರಾಮೋ ವಿದ್ವಾಂಸ ಮಪಿ ಕರ್ಷತಿ' ಎಂದು ಅವನೂ ಸಾರುತ್ತಾನೆ. (2–215) ಇದು ಭಾರತೀಯ ಸಂಸ್ಕೃತಿಗೇ ಅಂಟಿದ್ದಲ್ಲ. ಇಡೀ ಮಾನವಜಾತಿಗೆ ಬಂದಿರುವಂಥದ್ದು. ಈ ನಗ್ನ ಸತ್ಯವನ್ನು ಯಾರೂ ಮುಚ್ಚಿಡುವಂತಿಲ್ಲ. ಇದರಿಂದ ಸ್ತ್ರೀ ಸ್ವಾತಂತ್ರ್ಯಕ್ಕೆ ಧಕ್ಕೆ ಬರುವುದೂ ಇಲ್ಲ.

ಸ್ವಾತಂತ್ರ್ಯವೆಂದರೆ ಸ್ವೇಚ್ಛಾಚಾರವಲ್ಲ, ದಿಕ್ಕೆಟ್ಟಂತೆ ಕುಣಿಯುವುದೂ ಅಲ್ಲ. ತನ್ನ ಹಿತಕ್ಕೆ ಬೇಕಾಗುವಂತೆ ವರ್ತಿಸಲು ಯಾವ ಅಡ್ಡಿ ಆತಂಕಗಳೂ ಇಲ್ಲದಿರುವುದೆ ಸ್ವಾತಂತ್ರ್ಯ. ಅದಕ್ಕೆ ಮನುವಿನ ಸಮ್ಮತಿ ಇದೆ, ಸ್ತ್ರೀಗೆ ಅಂಥ ಸ್ವಾತಂತ್ರ್ಯ ಬೇಕೆಂದೇ ಹೇಳಿದ್ದಾನೆ–

ಆತ್ಮಾನಮಾತ್ಮನಾ ಯಾಸ್ತು ರಕ್ಷೇಯುಸ್ತಾ: ಸುರಕ್ಷಿತಾ: (9–12)

'ಹೆಣ್ಣು ತನ್ನನ್ನು ತಾನೇ ರಕ್ಷಿಸಿಕೊಂಡರೆ ಮಾತ್ರ ಆಕೆ ಸುರಕ್ಷಿತಳು.'

ಬಲಾತ್ಕಾರದಿಂದ, ಆಕೆಯನ್ನು ರಕ್ಷಿಸಲು ಯಾರಿಂದಲೂ ಸಾಧ್ಯವಿಲ್ಲ ಎನ್ನುತ್ತಾನೆ—

ನ ಕಶ್ಚಿದ್ಯೋಷಿತ: ಶಕ್ತ: ಪ್ರಸಹ್ಯ ಪರಿರಕ್ಷಿತುಂ (9–10)
ಏಕೆಂದರೆ ಇದಕ್ಕೆ ಕಾರಣ ಕೊಡುತ್ತಾನೆ—

ಅರಕ್ಷಿತಾ ಗೃಹೇ ರುದ್ಧಾ: ಪುರುಷೈರಾಪ್ತಕಾರಿಭಿ: (9-12)

ಆಪ್ತಜನರ ಒಂದು ಪಡೆಯನ್ನೆ ಕಾವಲಾಗಿಟ್ಟರೂ ಹೆಣ್ಣು ಜಾರದಿರುತ್ತಾಳೆ ಎನ್ನುವುದು ಸುಳ್ಳು, ಭ್ರಮೆ. ಅವಳನ್ನು 'ಉಪಾಯ'ದಿಂದ ರಕ್ಷಿಸಬೇಕಂತೆ–

ಅರ್ಥಸ್ಯ ಸಂಗ್ರಹೇ ಚೈನಾಂ ವ್ಯಯೇ ಚೈವ ನಿಯೋಜಯೇತ್ (9–11)

ಪುರುಷನು ಸಂಪಾದಿಸಿ ತಂದ ಜೀವನಾವಶ್ಯಕ ಪದಾರ್ಥಗಳನ್ನೂ ಸಂಪತ್ತನ್ನೂ ಸ್ತ್ರೀ ರಕ್ಷಿಸಿಡಬೇಕು, ಸರಿಯಾಗಿ ವಿನಿಯೋಗ ಮಾಡಬೇಕು. ಗೃಹಕೃತ್ಯ, ಮಕ್ಕಳ ಲಾಲನೆ, ಪೋಷಣೆ ಮಾಡುತ್ತಿರಬೇಕು.

ವ್ಯವಸ್ಥಿತ ಸಮಾಜದಲ್ಲಿ ಹೆಣ್ಣಿಗೆ ದುಡಿದು ಸಂಪಾದನೆ ಮಾಡುವ ಸಂಸಾರ ನಡೆಸುವ ಹೊಣೆ ಬೀಳಬಾರದು, ಪುರುಷ ಆ ಹೊಣೆ ಹೊರಬೇಕು. ಸ್ತ್ರೀ ಅದನ್ನು ಸುವ್ಯವಸ್ಥಿತಗೊಳಿಸಬೇಕು. ಆಕೆ ಗೃಹಿಣಿ, ಮನೆಯೊಡತಿ.

ದುಡಿಮೆಯಲ್ಲಿ ಪುರುಷನಂತೆ ಸಮಾನತೆ ಆಕೆಗೆ ಹಿತಕರವಲ್ಲ. ಪುರುಷನ ನೆರವಿಲ್ಲದೆ ಆಕೆ ಸ್ವತಂತ್ರಳಾಗಿ ದುಡಿಯಲಾರಳು. . ಮಕ್ಕಳನ್ನು ಹೆತ್ತು ಹೊತ್ತು ಸಾಕುವುದರಲ್ಲಿಯೆ ಅವಳ ಶಕ್ತಿ ಸಾಮರ್ಥ್ಯ ವ್ಯಯವಾಗುತ್ತದೆ. ಕಮ್ಮಾರ, ಬಡಗಿ, ಮುಂತಾದ ಕಷ್ಟಕರ ಕೆಲಸವಂತೂ ಆಕೆಯ ಶರೀರಕ್ಕೆ ಒಗ್ಗಲಾರದು. ಸೌಮ್ಯವಾದ ಇತರ ಉದ್ಯೋಗ ಮಾಡಬಹುದು, ಆದರೆ ಪ್ರಧಾನವಾಗಿ ಅಲ್ಲ, ಗೃಹಕೃತ್ಯ ಮಾಡಿ ವಿರಾಮ ಕಾಲದಲ್ಲಿ ಮಾತ್ರ ಅವನ್ನು ಮಾಡಬಹುದು.

ಆದ್ದರಿಂದ ಸಹಧರ್ಮಿಣಿಯಾದ ಸ್ತ್ರೀಗೆ ಪುರುಷ, ಪುರುಷನಿಗೆ ಸ್ತ್ರೀ ಇಬ್ಬರೂ ಪರಸ್ಪರ ಪೂರಕರು, ಸಹಾಯಕರು. ಯಾರೊಬ್ಬರ ಸ್ಥಾನಕ್ಕೆ ಕುಂದು ಬಂದರೂ ಇಬ್ಬರಿಗೂ ನಾಶ. ಪರಸ್ಪರ ಪೂರಕವಾಗಲೆಂದೆ ಪ್ರಕೃತಿ ಲಿಂಗ ಭೇದವನ್ನು ಸೃಷ್ಟಿಸಿದೆ. ಅವರ ಶರೀರ ಮನಸ್ಸುಗಳ ಸ್ವಭಾವಕ್ಕೆ ಅನುಗುಣವಾಗಿಯೆ ಕರ್ಮಗಳನ್ನು ನಿರ್ಣಯಿಸಿದೆ.

ಸ್ತ್ರೀ ಅಬಲೆ, ನಿಜ, ದೈಹಿಕ ಬಲದಲ್ಲಿ ಮಾತ್ರ. ಮಾನಸಿಕವಾಗಿ ಆಕೆ ಕ್ಷಮೆ ಸಹನ ಶಕ್ತಿಯ ಮೂರ್ತಿ. ಪ್ರೀತಿ ಒಲವು ಅಕ್ಕರೆ ಸಹನೆ ಆಕೆಯ ಸ್ವಭಾವ.

ಹಿಂದೂ ಕುಟುಂಬ ಪದ್ಧತಿ ಆಕೆಗೆ ಒಗ್ಗುವಂಥದ್ದು. ಆಸ್ತಿಯ ಹಕ್ಕು ಆಕೆಗೆ ಬೇಕಿಲ್ಲ. ವಿವಾಹವಾಗಿ ತನ್ನ ಗಂಡನ ಸ್ಥಾನಮಾನಗಳಲ್ಲಿ ಸಹಪಾಲು ದಾರಳಾಗಬೇಕು. ಇಂಥ ಪ್ರತಿಷ್ಠಿತನ ಪತ್ನಿ ತಾನೆಂಬುದೆ ಅಭಿಮಾನಾಸ್ಪದ ಆಕೆಗೆ. ಈ ಸ್ಥಾನಮಾನಗಳನ್ನು ಆಕೆ ಬಿಟ್ಟು ಕೊಡಲು ಸಿದ್ಧಳಿಲ್ಲ. ಈ ಗುಣ ಗಳು ಮಹಿಳೆಯರ ಸ್ವಭಾವಸಿದ್ಧವಾಗಿದ್ದು ಸೃಷ್ಟಿಯ ಉಳಿವಿಗೆ ಮುನ್ನಡೆಗೆ ಕಾರಣವಾಗಿವೆ. ಈ ಗುಣಗಳನ್ನೇ ಮಹಿಳೆಯರ ದೋಷಗಳೆಂದು ದೌರ್ಬಲ್ಯ ಗಳೆಂದು ತಿಳಿದರೆ ಅದುವೆ ದೊಡ್ಡ ದುರಂತ. ಈ ಗುಣಗಳಿಗಾಗಿ ಆಕೆಯನ್ನು ಪೂಜಿಸಬೇಕು—

ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರದೇವತಾ; (3-56)

## ನಾರೀಪೂಜೆ

ಈ 'ಪೂಜೆ' ಮಾಡುವ ಕ್ರಿಯೆಯೂ ಅಸ್ಪೃಶ್ಯತೆಯ ಇನ್ನೊಂದು ರೂಪ ವೆನ್ನುವುದು ಮನು ಏನು ಹೇಳಿದರೂ ಅದನ್ನು ಟೀಕಿಸಬೇಕೆನ್ನುವಂಥ ಆಗ್ರಹವೆ ಸರಿ. ಮಹಾಭಾರತದಲ್ಲಿ ದುಷ್ಯಂತ ಶಕುಂತಲೆಯನ್ನು ಯಥೇಚ್ಛ ಅನ್ನ ವಸ್ತ್ರಾದಿಗಳಿಂದ ಪೂಜಿಸಿದ. ರಾಮಾಯಣದಲ್ಲಿ ಇಂದ್ರಜಿತ್ತನ್ನು ಕೊಂದ ಲಕ್ಷ್ಮಣನ ಪರಾಕ್ರಮ ಕಾರ್ಯವನ್ನು ರಾಮ ಪೂಜಿಸಿದ. (ಯು. 91-29) ಸೀತೆಯನ್ನು ಬಲಾತ್ಕರಿಸಲು ಉಪದೇಶಿಸಿದ ಮಂತ್ರಿಯೊಬ್ಬನ ಮಾತನ್ನು ರಾವಣ ಪೂಜಿಸಿದ (ಯು. 13-9) ಯುಗಾದಿ ಹಬ್ಬದ ದಿನ ಮಂಗಳ ಸ್ನಾನ ಮಾಡಿ ದೇವ, ಗುರು, ಸ್ತ್ರಿಯರು, ಶಿಶುಗಳು ಇವರೆಲ್ಲರನ್ನೂ ಅಲಂಕಾರ ವಸ್ತ್ರಾದಿಗಳಿಂದ ಪೂಜಿಸಿ ಪಂಚಾಂಗ ಶ್ರವಣ ಮಾಡುತ್ತೇವೆ —

ದೇವಾ ಯೇ ಗುರುಯೋಷಿತಶ್ಚ ಶಿಶವೋಲಂಕಾರಾವಸ್ತ್ರಾದಿಭಿ: ಸಂಪೂಜ್ಯಾಃ

ಪೂಜೆ ಎಂದರೆ ವಸ್ತ್ರಾಲಂಕಾರಾದಿಗಳಿಂದ ಸಂತೋಷಪಡಿಸುವುದೆಂದೆ ವ್ಯಾಖ್ಯಾನಕಾರರೂ ಹೇಳುತ್ತಿದ್ದಾರೆ.

ಶಾಕ್ತರ ಯೋನಿ ಪೂಜೆಯಂತೆ ಅಲ್ಲ ಈ ನಾರೀ ಪೂಜೆ. ಸ್ತ್ರೀಯ ಮಾನ ಸಿಕ ಬೆಳವಣಿಗೆ ಅಭಿಪ್ರಾಯಗಳನ್ನು ಕಡೆಗಣಿಸಿ, ಮಾನವೀಯ ಸಂಬಂಧದಿಂದ ಅವಳನ್ನು ಹೊರಗಿರಿಸಿ, ಕಟ್ಟುಪಾಡುಗಳ ಸಂಕೋಲೆಯಿಂದ ಬಿಗಿದು,

ಪೂಜೆಯ ಪೀಠಕ್ಕೆ ಅವಳನ್ನೇರಿಸುವುದೂ ಮನುವಿಗೆ ಸಮ್ಮತವಲ್ಲ. ಮನುವಿನ ಅಭಿಪ್ರಾಯದಲ್ಲಿ ನಾರೀಪೂಜೆ ಎಂದರೆ ಅವಳನ್ನು ಸಂತೋಷತೃಪ್ತಿಗಳಲ್ಲಿರಿಸುವುದೆ ಹೊರತು ಬೇರೇನಲ್ಲ. ಆಕೆ ಮನೆಯೊಳಗೆ ಕಣ್ಣೀರು ಹಾಕಿದರೆ ಮನೆಯ ಸರ್ವನಾಶ, ಮಾಟಕೃತ್ರಿಮಗಳು ಅದಕ್ಕೆ ಬೇರೆ ಬೇಕಾಗಿಲ್ಲ ಎನ್ನುತ್ತಾನೆ—

ಶೋಚಂತಿ ಜಾಮಯೋಯತ್ರ ವಿನಶ್ಯತ್ಯಾಶು ತತ್ಕುಲಂ (3-57)
ಜಾಮಯೋ ಯಾನಿ ಗೇಹಾನಿ ಶಪಂತ್ಯಪ್ರತಿ ಪೂಜಿತಾಃ ।
ತಾನಿ ಕೃತ್ಯಾಹತಾನೀವ ವಿನಶ್ಯಂತಿ ಸಮಂತತಃ (3-58)

ಹೆಣ್ಣಿಗೆ ಆಕೆಯನ್ನು ವರಿಸಿದ ಗಂಡು ಮಾತ್ರವೆ ಅಲ್ಲ, ಬಂಧುಬಳಗವೆಲ್ಲವೂ 'ಪೂಜೆ' ಮಾಡಬೇಕಂತೆ, ಅದರಿಂದಲೇ ಎಲ್ಲರಿಗೂ ಶ್ರೇಯಸ್ಸಂತೆ—

ಪಿತೃಭಿರ್ಭ್ರಾತೃಭಿಶ್ಚೈತಾಃ ಪತಿಭಿರ್ದೇವರೈಸ್ತಥಾ ।
ಪೂಜ್ಯಾ ಭೂಷಯಿತವ್ಯಾಶ್ಚ ಬಹುಕಲ್ಯಾಣಮೀಪ್ಸುಭಿಃ (3-55)

ಹೀಗೆ ಹೆಣ್ಣಿಗೆ ಪತಿಯೂ ಬಂಧುಬಾಂಧವರೂ ಕೊಡುವ ಸಂಪತ್ತನ್ನು ಅಪರಾರೂ ಭೋಗಿಸುವಂತಿಲ್ಲ—

ಸ್ತ್ರೀಧನಾನಿ ತು ಯೇ ಮೋಹಾದುಪಜೀವಂತಿ ಬಾಂಧವಾಃ ।
ತೇ ಪಾಪಾ ಯಾಂತ್ಯಧೋಗತಿಂ (3-52)

ಸುವಾಸಿನಿಯರು, ಕುಮಾರಿಯರು, ಗರ್ಭಿಣಿ ಸ್ತ್ರೀಯರುಗಳನ್ನು ಅತಿಥಿಗಳಿಗಿಂತಲೂ ಮೊದಲಿಗೆ ಉಣಿಸಿ ಮನೆಯ ಯಜಮಾನ ಬಳಿಕ ತಾನುಣಬೇಕು. ತಾನೆ ಮೊದಲು ಉಂಡರೆ ಅವನು ಸಾಯುವಾಗ ಅವನ ಹೆಣವನ್ನು ನಾಯಿ ಹದ್ದುಗಳು ತಿನ್ನುತ್ತವೆ ಎನ್ನುತ್ತಾನೆ, ಮನು -

ಸುವಾಸಿನೀಃ ಕುಮಾರೀಶ್ಚ ರೋಗಿಣೋ ಗರ್ಭಿಣೀಃ ಸ್ತ್ರಿಯಃ ।
ಅತಿಥಿಭ್ಯೋಽಗ್ರ ಏವೈತಾನ್ ಭೋಜಯೇದವಿಚಾರಯನ್ ॥

ಅದತ್ವಾ ತು ಯ ಏತೇಭ್ಯಃ ಪೂರ್ವಂ ಭುಂಕ್ತೇ ವಿಚಕ್ಷಣಃ ।
ಸ ಭುಂಜಾನೋ ನ ಜಾನಾತಿ ಶ್ವಗೃಧ್ರೈರ್ಜಗ್ಧಿಮಾತ್ಮನಃ
(3-115, 116)

ಕನ್ಯೆಗೆ ಯೋಗ್ಯ ವರ ಸಿಗದಿದ್ದರೆ ಮರಣ ಪರ್ಯಂತವೂ ಅವಳನ್ನು ತಂದೆ ಮನೆಯಲ್ಲಿಯೆ ಇಟ್ಟುಕೊಳ್ಳಬೇಕು ಹೊರತು, ಅಯೋಗ್ಯನಿಗೆ ಮದುವೆ ಮಾಡಿಕೊಡಕೂಡದು –

ಕಾಮಮಾ ಮರಣಾತ್ತಿಷ್ಠೇತ್ ಗೃಹೇ ಕನ್ಯರ್ತುಮತ್ಯಪಿ ।
ನ ಚೈವೈನಾಂ ಪ್ರಯಚ್ಛೇತ್ತು ಗುಣಹೀನಾಯ ಕರ್ಹಿಚಿತ್ (9-89)

ತಂದೆ ಕನ್ಯೆಗೆ ಆಕೆ ಋತುಮತಿಯಾದ ಮೂರುವರ್ಷದ ವರೆಗೂ ಯೋಗ್ಯ ವರನನ್ನು ಕಂಡುಹಿಡಿಯುವಲ್ಲಿ ಅಯಶಸ್ವಿಯಾದರೆ, ಕನ್ಯೆ ತಾನೆ ಒಬ್ಬ ವರನನ್ನು–ಅನುರೂಪನಾದವನನ್ನೆ, ಆರಿಸಿಕೊಳ್ಳಲು ಸ್ವಾತಂತ್ರ್ಯ ನೀಡಿದ್ದಾನೆ ಮನು –

ತ್ರೀಣಿ ವರ್ಷಾಣ್ಯುದೀಕ್ಷೇತ ಕುಮಾರ್ಯೃತುಮತೀ ಸತೀ ।
ಊರ್ಧ್ವಂ ತು ಕಾಲಾದೇತಸ್ಮಾತ್ ವಿಂದೇತ ಸದೃಶಂ ಪತಿಂ
(9-90)

ಕನ್ಯಾಶುಲ್ಕಪದ್ಧತಿಯನ್ನೂ ಮನು ಬಲವಾಗಿ ಖಂಡಿಸಿದ್ದಾನೆ, ಅದೊಂದು ಬಗೆಯಲ್ಲಿ ಕನ್ಯೆಯ ಮಾರಾಟವೆ ಆಗುತ್ತದೆಂದು ನಿಂದಿಸಿದ್ದಾನೆ–

ನಾನುಶುಶ್ರುಮ ಜಾತ್ವೇತತ್ ಪೂರ್ವೇಷ್ವಪಿ ಹಿ ಜನ್ಮಸು ।
ಶುಲ್ಕಸಂಜ್ಞೇನ ಮೂಲ್ಯೇನ ಛನ್ನಂ ದುಹಿತೃವಿಕ್ರಯಂ
(9-100)

ಹೆಣ್ಣು ಗಂಡು ಮಕ್ಕಳಲ್ಲಿ ತಾರತಮ್ಯವೂ ಮನುವಿಗೆ ಇಷ್ಟವಿಲ್ಲ -

ಯಥೈವಾತ್ಮಾ ತಥಾಪುತ್ರಃ ಪುತ್ರೇಣ ದುಹಿತಾ ಸಮಾ । (9-130)

ಸ್ತ್ರೀಯನ್ನು 'ಮನೆ ಬೆಳಕು' ಎಂದು ಕರೆದವನು ಮನು -

ಪ್ರಜಾರ್ಹಾ ಗೃಹದೀಪ್ತಯಃ (9-26)

'ಭಾರ್ಯೆ' ಎಂದರೇನೆ ಪೋಷಣೆ ಪಡೆಯಬೇಕಾದವಳು. ನೂರು ಅಕೃತ್ಯಗಳನ್ನಾದರೂ ಮಾಡಿ, ಪತಿವ್ರತೆಯಾದ ಮಡದಿಯನ್ನು ಪೋಷಿಸ ಬೇಕಂತೆ—

'ಅಪ್ಯಕಾರ್ಯಶತಂ ಕೃತ್ವಾ ಭರ್ತವ್ಯಾಃ'

ಸದಾ ಅನ್ನವಸ್ತ್ರಾಭರಣಗಳಿಂದ ಸಂತೋಷಪಡಿಸಿ ಋತುಕಾಲದಲ್ಲಿ ಸಂಗ ವನ್ನು ಕೊಟ್ಟು ಮಡದಿಯನ್ನು ತೃಪ್ತಿಪಡಿಸದಿದ್ದರೆ ಅದರಿಂದಾಗಬಹುದಾದ ಅನಿಷ್ಟ ಪರಿಣಾಮಕ್ಕೆ ಪತಿಯೆ ಹೊಣೆಯಾಗುತ್ತಾನೆ ಎನ್ನುತ್ತಾನೆ ಮನು. ಮತ್ತು ಯೋಗ್ಯನಾದ ವರನಿಗೆ ಕನ್ಯೆಯನ್ನು ಸಕಾಲದಲ್ಲಿ ಮದುವೆ ಮಾಡಿ ಕೊಡದ ತಂದೆಯನ್ನೂ ನಿಂದಿಸುತ್ತಾನೆ -

ಕಾಲೇಽದಾತಾ ಪಿತಾ ವಾಚ್ಯೋ ವಾಚ್ಯಶ್ಚಾನುಪಯನ್ ಪತಿಃ (9-4)

ಪತಿ ಎಂಥ ದುರ್ಬಲನಾದರೂ ಸರಿಯೆ. ಸತಿಯ ಶೀಲ ಕಾಪಾಡುವ ಹೊಣೆ ಹೊರಲೇಬೇಕು —

ಯತಂತೇ ರಕ್ಷಿತುಂ ಭಾರ್ಯಾಂ ಭರ್ತಾರೋ ದುರ್ಬಲಾ ಅಪಿ (9-6)

ಮನು ಹೀಗೆ ಹೆಣ್ಣಿನ ರಕ್ಷಣೆಯ ಜವಾಬ್ದಾರಿಯನ್ನು ಗಂಡಿನ ಮೇಲೆ ಹೊರಿಸಿ, ಬಲಾತ್ಕಾರದಿಂದ ಗೃಹಬಂಧನದಲ್ಲಿಟ್ಟು ಅವಳನ್ನು ಕಾಪಾಡುವುದು ಅಶಕ್ಯವೆಂದೂ ಎಚ್ಚರಿಸಿ, ಮನೆಯಲ್ಲಿ ಹೆಣ್ಣು ಎಂದೂ ಕಣ್ಣೀರು ಹಾಕಬಾರ ದೆಂದೂ ಆಕೆಯನ್ನು ಮನೆಬೆಳಕೆಂದು ನೋಡಿಕೊಳ್ಳಬೇಕೆಂದೂ ಉಪದೇಶಿಸಿ 'ಯತ್ರ ನಾರ್ಯಸ್ತು ಪೂಜ್ಯಂತೇ' ಎನ್ನುವ ನಾರೀಪೂಜೆ ಎಂದರೇನೆಂಬು ದನ್ನು ಸ್ಪಷ್ಟಪಡಿಸಿದ್ದಾನೆ,

'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂದವನೇ 'ಆತ್ಮಾನಮಾತ್ಮನಾ ಯಾಸ್ತು ರಕ್ಷೇಯುಸ್ತಾ : ಸುರಕ್ಷಿತಾ :' ತಮ್ಮನ್ನು ತಾವು ರಕ್ಷಿಸಿಕೊಂಡರೆ ಮಾತ್ರ ಸ್ತ್ರೀ

ಯರು ಸುರಕ್ಷಿತರು ಎಂದು ಸ್ತ್ರೀಗೆ ಸ್ವಾತಂತ್ರ್ಯ ನೀಡಿ ಸ್ವಾತಂತ್ರ್ಯ ನಿಷೇಧದ ಅಭಿಪ್ರಾಯವೇನೆಂಬುದನ್ನು ಸ್ಪಷ್ಟಪಡಿಸಿದ್ದಾನೆ. ಸ್ತ್ರೀರಕ್ಷಣೆಯಲ್ಲಿ ಸ್ತ್ರೀಗೆ ಸ್ವಾತಂತ್ರ್ಯವಿಲ್ಲವೆಂದರೆ ಅವಳಿಗೆ ಅದರ ಪೂರ್ಣ ಜವಾಬುದಾರಿತನವಿಲ್ಲವೆಂದೇ ಅರ್ಥ. ಪತಿ ಎಷ್ಟೇ ದುರ್ಬಲನಾದರೂ ಸತಿಯ ರಕ್ಷಣೆ ಮಾಡುವ ಹೊಣೆ ಆತನದು. ಆದರೆ ಹಣ ಸಂಪಾದಿಸುವುದು ಮಾತ್ರವೆ ಅವನ ಪಾಲಿನ ಕರ್ತವ್ಯ ಹೊರತು ವಿನಿಯೋಗ ಮಾಡುವ ಹೊಣೆ ಮನೆಯೊಡತಿಯದು ಎನ್ನುತ್ತಾನೆ, ಮನು. ಇನ್ನೂ ಹೆಚ್ಚಿನ ಸ್ವಾತಂತ್ರ್ಯ ಸ್ತ್ರೀಗೆ ಬೇಕೆನಿಸಿದರೆ ಅದು ಶೀಲ ಕಳೆದು ಕೊಳ್ಳುವ ಸ್ವಾತಂತ್ರ್ಯವಾಗುತ್ತದೆ. ಸ್ವಾತಂತ್ರ್ಯದಿಂದ್ದಕ್ಕೇ ಅಪಚಾರವಾಗು ತ್ತದೆ.

'ನಾರಿಯ ಬಗ್ಗೆ ಮನುವಿನ ಪೂಜ್ಯಭಾವ ಎಷ್ಟರಮಟ್ಟಿನ ಸತ್ಯವೆನ್ನುವುದು ಈ ಪಾಶವೀಯ ನಿಬಂಧನೆ ಎತ್ತಿ ತೋರಿಸುತ್ತದೆ—ಒಬ್ಬ ಹೆಂಗಸು ಇನ್ನೊಬ್ಬಳ ಆಸ್ತಿಗೆ ಬೆಂಕಿ ಹಚ್ಚಿದರೆ ಅವಳು ಗರ್ಭಿಣಿಯಾಗಿದ್ದರೂ ಚಿಂತೆಯಿಲ್ಲ ಅವಳನ್ನು ಎರಡು ಗೂಳಿ ಗಳಿಂದ ಇಬ್ಭಾಗವಾಗಿ ಸಿಗಿಯಿಸಬೇಕು'

—ಈ ಆರೋಪಕ್ಕೆ ಏನೂ ಆಧಾರ ಸಿಗದು. ಮನು ಗರ್ಭಿಣಿಯರಿಗೆ ಸೌಮ್ಯ ಶಿಕ್ಷೆ ಕೊಡುವವ. ಇಂಥ ಪಾಶವೀಯ ನಿಬಂಧನೆ ವಿಧಿಸಲಾರ, ವಿಧಿಸಲೂ ಇಲ್ಲ.

ನಾರಿ ಕಿರುಬನ ಹೃದಯದವಳು ಎಂದು ಮುಂತಾಗಿ ವೇದ ಇತಿಹಾಸಗಳು ಸ್ತ್ರೀಯನ್ನು ನಿಂದಿಸಿದ ಅಭಿಪ್ರಾಯ—

'ಕಾಚಿತ್ಪಾತಯತೇ ನಾರೀ ಕಾಚಿದುದ್ಧರತೇ ಕುಲಂ'

ಕೆಲವು ಸ್ತ್ರೀಯರು ಹುಟ್ಟಿದ ಕುಲವನ್ನೂ ಹೊಕ್ಕ ಕುಲವನ್ನೂ ಎರಡನ್ನೂ ಉದ್ಧರಿಸುತ್ತಾರೆ. ಕೆಲವರು ಎರಡನ್ನೂ ನಾಶ ಮಾಡುತ್ತಾರೆ. ಎಲ್ಲ ಸ್ತ್ರೀಯರೂ ಕುಲನಾಶಕರಾಗುವುದಿಲ್ಲ, ಎಲ್ಲ ಸ್ತ್ರೀಯರೂ ಕುಲೋದ್ಧಾರಕರೂ ಆಗು ವುದಿಲ್ಲ, ಕುಲನಾಶಕರಾದ ಸ್ತ್ರೀಯರ ಬಗ್ಗೆ ಎಚ್ಚರ ನೀಡಲು ಮೇಲಿನ ವಾಕ್ಯ ಗಳು ಹೊರಟಿವೆ ಹೊರತು ಎಲ್ಲ ಸ್ತ್ರೀಯರ ಬಗ್ಗೆ ಅಲ್ಲ.

ರಾಮಾಯಣದಲ್ಲಿ ದಶರಥನು ಕೋಪದ ಭರದಿಂದ ಸ್ತ್ರೀಜಾತಿಯನ್ನೆ ಬೈದು ಮರುಕ್ಷಣವೆ ತನ್ನನ್ನು ತಿದ್ದಿಕೊಳ್ಳುತ್ತಾನೆ—'ಸ್ತ್ರೀಯರೆಂದರೆ ವಂಚಕರು ಸ್ವಾರ್ಥಪರಾಯಣರು, ಅವರಿಗೆ ಧಿಕ್ಕಾರವಿರಲಿ. ಎಲ್ಲ ಸ್ತ್ರೀಯರ ಬಗ್ಗೆ ನಾನು ಹೀಗೆ ಹೇಳುವುದಿಲ್ಲ, ಭರತನ ತಾಯಿಯಂಥವರ ಬಗ್ಗೆ ಮಾತ್ರ (ಅಯೋ. 12–100) ಕೌಸಲ್ಯೆಯೂ ಸತಿ ಅಸತಿಯರ ಬಗ್ಗೆ ಸೀತೆಗೆ ಬೋಧಿಸುತ್ತಾಳೆ. (ಅಯೊ. 39–22).

'ಹೆಣ್ಣು ಸಾಯುವಾಗ ಗರ್ಭಿಣಿಯೊ ಬಾಣಂತಿಯೊ ಆಗಿ ಸತ್ತರೆ ಅವಳು ಅಮಂಗಲಳು ಭಯಾನಕಳು. ಗರ್ಭಿಣಿ ಹೆಣವನ್ನು ಕೆಲವರು ಹೂಳುವುದಿಲ್ಲ ಹಾಗೆ ಹದ್ದುಗಳಿಂದ ಕುಕ್ಕಿಸಿ ಕೊನೆಗಾಣಿಸುತ್ತಾರೆ'

—ಇದು ಸುಳ್ಳು ಆರೋಪ. ಹೆಣ್ಣು ಸಾಯುವಾಗ ಗರ್ಭಿಣಿಯೆ ಇರಲಿ ಬಾಣಂತಿಯೆ ಇರಲಿ ವಿಧಿವತ್ತಾಗಿ ದಹನ ಮಾಡಬೇಕೆನ್ನುತ್ತದೆ ಶಾಸ್ತ್ರ. ವಿಧಿವತ್ತಾಗಿ ಸುಡದಿದ್ದರೇನೆ ಅಮಂಗಲ ಭಯಾನಕಳಾಗುತ್ತಾಳೆ. ಇದು ಗಂಡಿಗೂ ಸಮಾನ. ವಿಧಿವತ್ತಾಗಿ ಅಂತ್ಯಕ್ರಿಯೆ ಮಾಡದಿದ್ದರೆ ಅವನೂ ಭಯಾನಕನೆ.

'ನಮ್ಮ ಕನ್ನಡ ಭಾಷೆಯಲ್ಲಿ ನೋಡುವುದಕ್ಕೆ ಕೇಳುವುದಕ್ಕೆ ಮೂಸುವುದಕ್ಕೆ ಚಪ್ಪರಿಸುವುದಕ್ಕೆ ನಾಮಪದಗಳಿವೆ ನೋಟ, ಪಾತ, ನಾತ, ರುಚಿ; ಆದರೆ ಮುಟ್ಟುವುದಕ್ಕೆ ನಾಮ ಪದವಿಲ್ಲ. ಇರುವ ನಾಮ ಪದವಾದರೆ "ಮುಟ್ಟು" ಹೆಣ್ಣು ಅಸ್ಪೃಶ್ಯಳಾಗುವ ದುರ್ದೈವದ್ದು ಈ ದಾರಿದ್ರ್ಯ ಕನ್ನಡಕ್ಕೆ ಅಷ್ಟೆ ಅಲ್ಲ ಭಾರತದ ಇತರ ಭಾಷೆಗಳಿಗೂ ಇದೆ'

—ಇದೊಂದು ವಿಚಿತ್ರ ಭಾಷಾಜ್ಞಾನ. ಸಂಸ್ಕೃತದಲ್ಲಿ ಮುಟ್ಟುವುದು ಎನ್ನಲು 'ಸ್ಪರ್ಶ' ಎಂಬ ನಾಮಪದವಿದೆ. ಇದು ಹೆಣ್ಣು ಅಸ್ಪೃಶ್ಯಳಾಗುವ ದುರ್ದೈವದ್ದಲ್ಲ. ಕನ್ನಡದಲ್ಲಿಯೂ 'ಮುಟ್ಟು' ಎಂಬ ನಾಮಪದ ಮುಟ್ಟುವ ಕ್ರಿಯೆಯನ್ನು ಹೇಳದೆ ಮಾಸಿಕರಜವನ್ನೆ ಹೇಳಿದ್ದರೆ ಆ ನಾಮಪದ ದುರ್ದೈವದ್ದು ಎನ್ನಬಹುದಾಗಿತ್ತು. ಹಾಗಿಲ್ಲ. ಇಲ್ಲದಿದ್ದರೆ 'ಮಾಡುವು'ದಕ್ಕೆ ನಾಮಪದ ಕನ್ನಡದಲ್ಲಿ ಇಲ್ಲ. ಇರುವ ನಾಮ ಪದವಾದರೆ 'ಮಾಟ' ಜೀವಿಗಳನ್ನು ಕೊಲ್ಲುವ ಕ್ರೌರ್ಯದ್ದು ಎಂದೇಕೆ ಹೇಳಬಾರದು ? ಅಥವಾ ಸೌಂದರ್ಯವನ್ನು ಹೇಳುವ

ಕೋಮಲತೆಯದ್ದು ಎಂದೇಕೆ ಹೇಳಬಾರದು ? ಒಂದು ಶಬ್ದಕ್ಕೆ ಅನೇಕಾರ್ಥ ವಿರುವುದು ಭಾಷೆಯ ಶ್ರೀಮಂತಿಕೆಯ ಲಕ್ಷಣ. ಅದನ್ನು ತಪ್ಪಾಗಿ ತಿಳಿಯ ಬಾರದು. ವಸ್ತುತಃ 'ನೋಟ' ನೋಡುವುದಕ್ಕೆನಾಮಪದವೆನ್ನೋಣ. ರುಚಿನಾತ ಪಾತ ಇವೆಲ್ಲ ಚಪ್ಪರಿಸುವುದು ಮೂಸುವುದು ಕೇಳುವುದರ ನಾಮ ಪದಗಳೆ ? 'ಪಾತ' ಎಂದರೆ 'ಕೇಳುವುದು' ಎಂದು ಅರ್ಥವೆ ? ಆದ್ದರಿಂದ ನೋಡುವುದಕ್ಕೆ ಮತ್ತು ಮುಟ್ಟುವುದಕ್ಕೇ ನೋಟ ಮುಟ್ಟು ಎಂಬ ನಾಮ ಪದಗಳಿವೆ ಹೊರತು ಚಪ್ಪರಿಸುವುದಕ್ಕೆ ಮೂಸುವುದಕ್ಕೆ ಕೇಳುವುದಕ್ಕೇ ನಾಮಪದ ಕನ್ನಡ ದಲ್ಲಿಲ್ಲ. ಸಂಸ್ಕೃತದಲ್ಲಿ ಎಲ್ಲಕ್ಕೂ ನಾಮ ಪದವಿದೆ. ಯಾವ ಭಾರತೀಯ ಭಾಷೆ ಯಲ್ಲಿಯೂ ಇಲ್ಲವೆಂದು ಸಾರಲು 'ಎಂಟೆರ್ದೆ' ಬೇಕು !

## ಸೀತಾರಾಮರ ಪೀಳಿಗೆ

'ಭಾರತದ ಸೀತಾರಾಮರ ಪೀಳಿಗೆ ಸೀತಾರಾಮರು ಪರಸ್ಪರ ಪ್ರೇಮದಲ್ಲರಿಯದ ಪೀಳಿಗೆ. ನಮ್ಮ ತಂದೆತಾಯಂದಿರು ಸಾಮಾನ್ಯವಾಗಿ ಪರಸ್ಪರ ಅರಿಯದವರು. ಮೊದಲ ರಾತ್ರಿ ಭಯದಲ್ಲಿ ಆವಸರದಲ್ಲಿ ಸಂಧಿಸಿದವರು. ನಾವೆಲ್ಲಾ ಅಂಬಾ ವ್ಯಾಸರನ್ನು ನೋಡಿ ಹೆದರಿ ಬಿಳಿಚಿಕೊಂಡು ಹೆತ್ತ ಬಿಳಿ ಪಾಂಡುವಿನಂತೆ ಬಿಳಿಚಿಕೊಂಡು ಹುಟ್ಟಿದವರು. ಅಂಬಿಕೆ ವ್ಯಾಸನನ್ನು ನೋಡಲು ಹೆದರಿ ಹೆತ್ತ ಕುರುಡು ಧೃತರಾಷ್ಟ್ರನಂತೆ ಕುರುಡಾಗಿ ಹುಟ್ಟಿದವರು. 'ಭಾರತ'ವೆ ಭಾರತ.'

ಈ ಆರೋಪವೂ ಅನ್ಯಾಯದ್ದು. ನಾವು ಭಾರತೀಯರು ಪರಸ್ತ್ರೀಯರನ್ನು ಮುಟ್ಟದ 'ಪ್ರೇಮದಲ್ಲರಿಯದ' ಪೀಳಿಗೆಯವರೆ ಹೊರತು ತಮ್ಮ ತಮ್ಮ ಸಹಧರ್ಮಿಣಿಯರನ್ನು ಮುಟ್ಟಿದವರಲ್ಲ,ಪ್ರೇಮದಲ್ಲರಿಯದವರಲ್ಲ, ಸ್ತ್ರೀಯರು ಪರಪುರುಷರನ್ನು ನೋಡಿ ಬಿಳಿಚಿಕೊಂಡು ಅಥವಾ ಕಣ್ಮುಚ್ಚಿ, ಬಿಳಿಚಿಕೊಂಡು ಕುರುಡು ಮಕ್ಕಳನ್ನು ಪಡೆದರೆ ಅದು ಯಾರ ತಪ್ಪು ? ಭಾರತದ ಸೀತಾರಾಮರ ಪೀಳಿಗೆ ಸ್ವದಾರನಿರತ ಏಕಪತ್ನೀವ್ರತಸ್ಥ ರಾಮ ಮತ್ತು ಪತಿಯೆ ದೈವವೆಂದ ಸೀತೆಯರ ಪವಿತ್ರ ಪ್ರೇಮದಿಂದುದಿಸಿದ ಮುದ್ದಾದ ಲವಕುಶರೆಂಬ ಇಬ್ಬರು ಮಕ್ಕಳ ಪೀಳಿಗೆ. ತಾಯಿತಂದೆಗಳ ಗುರುಹಿರಿಯರ

ಪ್ರೇಮಾಶೀರ್ವಾದಗಳೊಂದಿಗೆ ಕುಲ ಸಂಪತ್ತು ವಿದ್ಯೆ ಆರೋಗ್ಯ ಮುಂತಾದವು ಗಳಲ್ಲಿ ಅನುರೂಪದ ಮಧುರದಾಂಪತ್ಯ ಜೀವನದಲ್ಲಿ ಕಾಲಿಟ್ಟವರು, ನಮ್ಮ ತಂದೆತಾಯಿಗಳು. ವರ್ಣಾಶ್ರಮ ಧರ್ಮ ಪರಿಪಾಲನೆ ಮಾಡುತ್ತ ಬ್ರಹ್ಮಚರ್ಯಾಶ್ರಮದಲ್ಲಿ ಅರ್ಥಶಾಸ್ತ್ರ ಕಾಮಶಾಸ್ತ್ರಗಳೂ ಸೇರಿದಂತೆ ಎಲ್ಲ ಶಾಸ್ತ್ರಗಳನ್ನೂ ತಿಳಿದುಕೊಂಡು ವಾತ್ಸ್ಯಾಯನ ಹೇಳಿದಂತೆ ಕಾಮವನ್ನು ಕಲೆಯಾಗಿ ಮಾಡಿಕೊಂಡು ಮೊದಲ ರಾತ್ರಿ ಸಂತೋಷದಿಂದ ಸಂಧಿಸಿ ಒಳ್ಳೆಯ ಸಂತತಿ ಪಡೆದವರು.

ನಾವು ಮಾತ್ರ ವರ್ಣಾಶ್ರಮ ಧರ್ಮವನ್ನು ತೊರೆದು ಬ್ರಹ್ಮಚರ್ಯಾಶ್ರಮದ ಅಧ್ಯಯನವಿಲ್ಲದೆ ಅಜ್ಞಾನ ಭಯಗಳಿಂದಲೆ ಮೊದಲ ರಾತ್ರಿಯನ್ನು ಕಳೆದು ದುರ್ಬಲ ಸಂತತಿ ಪಡೆಯುತ್ತಿದ್ದೇವೆ. ಹಿಂದಿನವರ ಆದರ್ಶವನ್ನು ಮರೆತು ಅವರನ್ನೆ ಹಳಿಯುತ್ತಿದ್ದೇವೆ. 'ಭಾರತ' ಹೇಳಿಕೊಟ್ಟ ಪಾಂಡು ಧೃತರಾಷ್ಟ್ರರ ಕತೆಯನ್ನು ತಿಳಿದೂ ತಿಳಿದೂ ಅಲಕ್ಷಿಸಿ ಪಾಶ್ಚಿಮಾತ್ಯರ ದತ್ತು ಪುತ್ರರಾಗಿ ಹಾಳಾಗುತ್ತಿದ್ದೇವೆ. ಮನು ಹೇಳಿದ ಕನ್ಯಾವರ ಲಕ್ಷಣಗಳನ್ನು ವಾತ್ಸ್ಯಾಯನನ ಕಾಮಕಲೆಯನ್ನೂ ತಿಳಿದಿದ್ದರೆ ಪಾಂಡು ಧೃತರಾಷ್ಟ್ರರಂತೆ ನಾವು ಹುಟ್ಟುತ್ತಲೂ ಇರಲಿಲ್ಲ. ಅಂಥ ಮಕ್ಕಳನ್ನು ಹುಟ್ಟಿಸುತ್ತಲೂ ಇರಲಿಲ್ಲ.

ಪ್ರಾಚೀನ ಋಷಿಮುನಿಗಳು ತಪಸ್ಸಿನ ಪುಣ್ಯರಾಶಿ ಗಳಿಸಿ ನಮಗಾಗಿ ಬಿಟ್ಟು ಹೋಗಿದ್ದಾರೆ. ಅವರ ಒಂದೊಂದು ಮಾತೂ ಯಾವ ಕಾಲಕ್ಕೂ ನಿಲ್ಲಬಹುದಾದ ಗಟ್ಟಿ ಮಾತು. ಅದನ್ನು ಕೇಳುವ ಕಿವಿ ನಮಗಿಲ್ಲವಾಗಿರುವುದೊಂದು ದೊಡ್ಡ ದುರಂತ.

ಪವಿತ್ರವಾದ ರಾಮಾಯಣ ಭಾರತದಂಥ ಕಾವ್ಯವನ್ನಾಗಲಿ ಮನುಧರ್ಮಶಾಸ್ತ್ರದಂಥ ಅಮೂಲ್ಯ ಗ್ರಂಥವನ್ನಾಗಲಿ ಅದರ ಅಕ್ಷರ ಪ್ರಪಂಚವೇ ಸತ್ಯ ಪ್ರಪಂಚವೆಂಬುದನ್ನು ಮರೆತು ಕೇವಲ ದ್ವೇಷಪೂರ್ಣವಾದ ಪೂರ್ವಾಗ್ರಹದ ದೃಷ್ಟಿಯಿಂದ 'ಸಹೃದಯ'ರು ಓದುತ್ತಿರುವುದೂ ದೊಡ್ಡ ದುರಂತ. ಇವರು ದ್ವೇಷಪೂರ್ವಕವಾದ 'ಪಾರಾಯಣ ಸೇವೆ' ಮಾಡುತ್ತಾರಲ್ಲದೆ ಪಠಿಸುವುದಿಲ್ಲ. ಇವರಿಗೆ ಸಂವೇದನೆ ಸಾಮರ್ಥ್ಯ ಪ್ರಾಮಾಣಿಕತೆ ಯಾವುದೂ ಇರುವುದಿಲ್ಲ. ಲಾರೆನ್ಸನು ಹೇಳುವಂತೆ ಒಬ್ಬ ವಿಮರ್ಶಕ ತನ್ನ ಸಂವೇದನೆಯಲ್ಲಿ ಎಳೆಯೆಳೆ

ಯಲ್ಲೂ ಜೀವಂತನಾಗಿ ವೈಚಾರಿಕತೆಯಲ್ಲಿ ಸಮರ್ಥನಾಗಿ ಮತ್ತು ನೀತಿಯಲ್ಲಿ ಪ್ರಾಮಾಣಿಕನಾಗಿ ಇರಬೇಕಾಗುತ್ತದೆ.

ರಾಮಾಯಣ ರಾಮಭಕ್ತರದೆ ಒಂದು ದೊಡ್ಡ ಆಸ್ತಿ ಎಂದು ಕರುಬುತ್ತಿರುವುದರಿಂದ ರಾವಣ ಭಕ್ತರಾದ ಕೆಲವರಿಗೆ ಪ್ರಾಮಾಣಿಕವಾಗಿ ಸಂವೇದಿಸುವುದು ಕಷ್ಟವಾಗಿದೆ ಎಂದು ತೋರುತ್ತದೆ. ಇವರ ವಿಮರ್ಶಾ ಜವಾಬ್ದಾರಿ ತಮ್ಮ ಮಾತುಗಳನ್ನು ಕಾವ್ಯ ಸಂದರ್ಭದ ಪದಗಳ ಪ್ರಮಾಣದಲ್ಲೇ ಸಮರ್ಥಿಸಿದಾಗಲೆ ಗಂಭೀರವಾಗುತ್ತದೆ ಹೊರತು ಬರಿದೆ ಆ ಮಾತುಗಳನ್ನು ಭಾವೋದ್ವೇಗದಿಂದ ಆಡಿದ ಮಾತ್ರಕ್ಕಲ್ಲ.

ಈ ನಾಡಿನ ಜನಾಂಗದ ಜೀವನವನ್ನೇ ರೂಪಿಸುತ್ತ ನಡೆಸುತ್ತಿರುವ ಏಕೈಕ ಪ್ರಭಾವಕಾರಿ ನಾಡ ಮಹಾಕಾವ್ಯವಾದ ರಾಮಾಯಣದ ಮೇಲೆ ಈ ನಾಡಿನ ಸಾಂಸ್ಕೃತಿಕ ಜವಾಬ್ದಾರಿ ಅಷ್ಟಿಷ್ಟಲ್ಲ. ರಾಮಾಯಣದ ನಾಯಕ ಮರ್ಯಾದಾ ಪುರುಷೋತ್ತಮನಾದ ರಾಮನ ಮೇಲೆ ಬಂದಿರುವ ಸುಳ್ಳು ಅಪವಾದವನ್ನು ನಾವಿಂದು ತೊಡೆಯಬೇಕು. ರಾಮಾಯಣವನ್ನು ಈಗ ನಾವು ಓದಬೇಕು. ಅಕ್ಷರ ಅಕ್ಷರ ಶಬ್ದ ಶಬ್ದಗಳ ಪ್ರಮಾಣ ವಾಚನವಾಗಬೇಕು, ನಾವು ಹೇಳುವುದೇನಿದ್ದರೂ ಆ ಕಾವ್ಯವೇ, ಆ ಕಾವ್ಯದ ಓದೇ ಹೇಳಬೇಕು. ಕೇಳುವ ಸಹೃದಯತೆ ಉಳ್ಳವರಿಗೇ ಹೇಳಬೇಕು. ಸ್ಕಂದ ಪುರಾಣ ಹೀಗೆ ಎಚ್ಚರಿಸುತ್ತದೆ—

ಬ್ರಹ್ಮದ್ವೇಷ ರತಾನಾಂ ಚ ದಂಭಾಚಾರ ರತಾತ್ಮನಾಂ ।
ಲೋಕವಂಚಕ ವೃತ್ತೀನಾಂ ನ ಬ್ರೂಯಾದಿದಮುತ್ತಮಂ ॥

— o —

## 'ಸೀತಾಯನ'

ರಾಮಾಯಣವನ್ನು ಒಂದು ಧರ್ಮಗ್ರಂಥವೆಂದು ನೋಡಬೇಕೆ, ಒಂದು ಕಾವ್ಯವೆಂದೆ ? ಎಂಬ ಪ್ರಶ್ನೆ ಹೊಸತಲ್ಲ. ಆದರೆ ರಾಮ ಸುಸಂಸ್ಕೃತ ಪುರುಷನೆ, ಕ್ರೂರ ಅನಾಗರಿಕ ಮನುಷ್ಯನೆ ? ಎಂದು ಗಂಭೀರವಾಗಿ ವಿಚಾರಿಸುವ ಪ್ರವೃತ್ತಿ ಹೊಸತು. ಡಾ॥ ಪ್ರೋಲಂಕಿ ರಾಮಮೂರ್ತಿಯವರ ಸೀತಾಯಣ ರಾಮನನ್ನು ಕ್ರೂರ ಅನಾಗರಿಕ ಮಾನವನೆಂದಿದೆ. ಸೀತೆಯನ್ನೂ ನೀತಿ ಬಾಹಿರಳೆಂದು ವರ್ಣಿಸಿ ನೀತಿಬಾಹಿರತೆ ಮಾನವೀಯತೆಯೆ ಎಂದೂ ವಾದಿಸಿದೆ. ರಾಮಾಯಣದ ಕೆಲವು ಶ್ಲೋಕಗಳನ್ನೆತ್ತಿಕೊಂಡು ತೀರ ಅಸಭ್ಯ ರೀತಿಯಲ್ಲಿ ವ್ಯಾಖ್ಯಾನಿಸಿದೆ. ಮನುಸ್ಮೃತಿಗೂ ಹೆಳವನಕಟ್ಟೆ ಗಿರಿಯಮ್ಮನ ಪದಗಳಿಗೂ ಅಪಾರ್ಥ ಮಾಡಿ ಅವುಗಳಿಗೆ ಅಪಚಾರವೆಸಗಿದೆ.

ಶ್ರೀ ಕೆ. ಹಯವದನ ಪುರಾಣಿಕರು ಎಂ. ಎ. ವಿದ್ವಾನ್ ಅವರ ಸಮರ್ಥ ಲೇಖನಿಯಲ್ಲಿ ಮೂಡಿ ಬಂದ 'ಸೀತಾಯನ' ಸೀತಾಯಣಕ್ಕೆ ನೇರವಾದ ಉತ್ತರ ಕೊಟ್ಟಿದೆ. ರಾಮಾಯಣವನ್ನು ಬರಿಯ ಕಾವ್ಯ ದೃಷ್ಟಿಯಿಂದ ಕಂಡರೂ ರಾಮಸೀತೆಯರು ಹೇಗೆ ಮಾನವೀಯತೆ ಶೀಲ ಸದ್ಗುಣಗಳ ಖನಿಗಳೆಂದು ತೋರಿಸಿ ರಾಮಾಯಣದ ಘನತೆ ಔನ್ನತ್ಯಗಳ ಸಾಕ್ಷಾತ್ಕಾರ ಮಾಡಿಸುವುದರಲ್ಲಿ ಬಹಳಷ್ಟು ಯಶಸ್ವಿಯಾಗಿದೆ. ಮನುಸ್ಮೃತಿ ಹಾಗೂ ಗಿರಿಯಮ್ಮನ ಪದಗಳಿಗೂ ಸಯುಕ್ತಿಕವಾಗಿ ಮನ ಒಪ್ಪುವಂಥ ವಿವರಣೆ ನೀಡಿದೆ.

ಸನಾತನ ಧರ್ಮ ಸಂಸ್ಕೃತಿಯ ಅಭಿಮಾನಿಗಳಿಗೆ ಸಮಾಧಾನ ತೃಪ್ತಿ ತಂದು ಕೊಡಬಲ್ಲ, ವಿಚಾರ ಸಾಹಿತ್ಯಕ್ಕೇ ಒಂದು ಅಪೂರ್ವ ಕೊಡುಗೆ ಎನಿಸಬಲ್ಲ ಕೃತಿ ಸೀತಾಯನ ಎನ್ನಬಹುದು.

—ಪ್ರಕಾಶಕರು